ವರದರಾಜ ಪ್ರಕಾಶನ - 56

# ಸಾಹಿತ್ಯ ಸಂಜೀವಿನಿ

(ಭಾರತೀಯ ಸಂಸ್ಕೃತಿಯ ಸಂಕಲನ)

ಲೇಖಕರು

ಕನ್ನಡ ಕುಲಭೂಷಣ, ದಾಸ
ಸಾಹಿತ್ಯ ಚಿಂತಾಮಣಿ, ವಿದ್ಯಾಭೂಷಣ

**ಆದ್ಯರಾಮಾಚಾರ್ಯ**

ಪ್ರಕಾಶಕರು

**ವರದರಾಜ ಪ್ರಕಾಶನ**

“ಭೀಮರಥಿ”, ನಂ. ೧೧೪, ೪ನೇ ಮೇನ್
೪ ಫೇಸ್ ಬನಶಂಕರಿ ಮೂರನೇ ಹಂತ
ಬೆಂಗಳೂರು - ೫೬೦ ೦೮೫
ದೂರವಾಣಿ ೬೬೯೨೧೩೯

**SAHITYA SANJEEVINI**
ಸಾಹಿತ್ಯ ಸಂಜೀವಿನಿ
*Author:* Adya Ramachar
ಲೇಖಕರು: ಆದ್ಯ ರಾಮಾಚಾರ್ಯ
*First Edition:* 1997
ಪ್ರಥಮ ಮುದ್ರಣ: ೧೯೯೭

Pages : 216 + viii
ಪುಟಗಳು : 216 + viii

*Price:* 50.00
ಬೆಲೆ: 50.00

*Publisher:*
Varadaraja Prakasharna, 'Bheemarathi', No. 114-Y
4th Main, 4th Phas, 7th Block,
Banashankari 3rd Stage
Bangalore - 560 085
Telephone: 6692139
ಪ್ರಕಾಶಕರು:
ವರದರಾಜ ಪ್ರಕಾಶನ 'ಭೀಮರಥಿ', ನಂ ೧೧೪, ವೈ, ೪ನೇ ಮೇನ್
೪ನೇ ಫೇಸ್, ೭ನೇ ಬ್ಲಾಕ್, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫
ದೂರವಾಣಿ: ೬೬೯೨೧೩೯

*Printers:*
Sathyasri Printers Pvt. Ltd.,
Chamarajpet, Bangalore
Telephone: 625736

1997ರಲ್ಲಿ ಮುದ್ರಣಗೊಂಡ ಐತಿಹಾಸಿಕ ಕೃತಿ

| ತೇಜಸ್ವಿ ಮಾಧವರಾವ್ |
|---|

ಆಧ್ಯಾತ್ಮಿಕ - ಚಿಂತನ

| ಸಾಹಿತ್ಯ ಸಂಜೀವಿನಿ |
|---|

ಮಾರಾಟಕ್ಕೆ ಸಿದ್ಧವಾಗಿವೆ

*Sri Venkatesh Praseeda*

*This is published with the financial assistance of Tirumala Tirupati Devasthanam as under their scheme aid to publish Religious book*

# ಸಮರ್ಪಣೆ

ಬಳ್ಳಾರಿಯ ಹೆಸರಾಂತ ನ್ಯಾಯವಾದಿಗಳು (ವಕೀಲರು) ಆಚಾರ್ಯರ ಸಿದ್ಧಾಂತದಲ್ಲಿ ಅಚಲವಾದ ವಿಶ್ವಾಸವುಳ್ಳವರು, ರಾಷ್ಟ್ರಪ್ರೇಮಿಗಳು, ಪರಮ ಭಗವದ್ಭಕ್ತರಾಗಿದ್ದ ಶ್ರೀ ದೊಡ್ಡಿಗುಂಡೂರಾಯರು ತಮ್ಮ ಎಂಬತ್ತೂರನೇ ವರುಷ ದಿ. ೧೧.೨.೧೯೯೭ ಮಂಗಳವಾರ ವೈಕುಂಠ ಪ್ರಯಾಣ ಮಾಡಿದ ಸ್ಮರಣಾರ್ಥವಾಗಿ ಈ ಕೃತಿಯನ್ನು ಸಮರ್ಪಿಸಲಾಗಿದೆ.

ಅಕ್ಟೋಬರ್ ೧೧, ೧೯೯೭ ಆದ್ಯರಾಮಾಚಾರ್ಯ

ವಿಜಯದಶಮಿ

# ವಿಷಯಾನುಕ್ರಮಣಿಕೆ

ವರದರಾಜ ಪ್ರಕಾಶನ - 56

# ಸಾಹಿತ್ಯ ಸಂಜೀವಿನಿ

(ಭಾರತೀಯ ಸಂಸ್ಕೃತಿಯ ಸಂಕಲನ)

ಲೇಖಕರು

ಕನ್ನಡ ಕುಲಭೂಷಣ, ದಾಸ

ಸಾಹಿತ್ಯ ಚಿಂತಾಮಣಿ, ವಿದ್ಯಾಭೂಷಣ

**ಆದ್ಯರಾಮಾಚಾರ್ಯ**

ಪ್ರಕಾಶಕರು

**ವರದರಾಜ ಪ್ರಕಾಶನ**

"ಭೀಮರಥಿ", ನಂ. ೧೧೪, ವೈ. ೪ನೇ ಮೇನ್

೪ ಫೇಸ್ ಬನಶಂಕರಿ ಮೂರನೇ ಹಂತ

ಬೆಂಗಳೂರು - ೫೬೦ ೦೮೫

ದೂರವಾಣಿ ೬೬೯೨೧೩೯

SAHITYA SANJEEVINI
ಸಾಹಿತ್ಯ ಸಂಜೀವಿನಿ
*Author:* Adya Ramachar
ಲೇಖಕರು: ಆದ್ಯರಾಮಚಾರ್ಯ
*First Edition:* 1997
ಪ್ರಥಮ ಮುದ್ರಣ: ೧೯೯೭
*Copyright:* Seetabai Adya
ಗ್ರಂಥಸ್ವಾಮ್ಯ: ಸೀತಾಬಾಯಿ ಆದ್ಯ

Pages : 216 + viii
ಪುಟಗಳು : 216 + viii

*Price:* 50.00
ಬೆಲೆ: 50.00

*Publisher:*
Varadaraja Prakasharna, 'Bheemarathi', No. 114-Y
4th Main, 4th Phas, 7th Block,
Banashankari 3rd Stage
Bangalore - 560 085
Telephone: 6692139
ಪ್ರಕಾಶಕರು:
ವರದರಾಜ ಪ್ರಕಾಶನ 'ಭೀಮರಥಿ', ನಂ ೧೧೪, ವೈ, ೪ನೇ ಮೇನ್
೪ನೇ ಫೇಸ್, ೭ನೇ ಬ್ಲಾಕ್, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫
ದೂರವಾಣಿ: ೬೬೯೨೧೩೯

*Printers:*
Sathyasri Printers Pvt. Ltd.,
Chamarajpet, Bangalore
Telephone: 625736

1997ರಲ್ಲಿ ಮುದ್ರಣಗೊಂಡ ಐತಿಹಾಸಿಕ ಕೃತಿ

| ತೇಜಸ್ವಿ ಮಾಧವರಾವ್ |
|---|

ಆಧ್ಯಾತ್ಮಿಕ - ಚಿಂತನ

| ಸಾಹಿತ್ಯ ಸಂಜೀವಿನಿ |
|---|

ಮಾರಾಟಕ್ಕೆ ಸಿದ್ಧವಾಗಿವೆ

*Sri Venkatesh Praseeda*

*This is published with the financial assistance of Tirumala Tirupati Devasthanam as under their scheme aid to publish Religious book*

## ಸಮರ್ಪಣೆ

ಬಳ್ಳಾರಿಯ ಹೆಸರಾಂತ ನ್ಯಾಯವಾದಿಗಳು (ವಕೀಲರು) ಆಚಾರ್ಯರ ಸಿದ್ಧಾಂತದಲ್ಲಿ ಅಚಲವಾದ ವಿಶ್ವಾಸವುಳ್ಳವರು, ರಾಷ್ಟ್ರಪ್ರೇಮಿಗಳು, ಪರಮ ಭಗವದ್ಭಕ್ತರಾಗಿದ್ದ ಶ್ರೀ ದೊಡ್ಡಿಗುಂಡೂರಾಯರು ತಮ್ಮ ಎಂಬತ್ತೂರನೇ ವರುಷ ದಿ. ೧೧.೨.೧೯೮೭ ಮಂಗಳವಾರ ವೈಕುಂಠ ಪ್ರಯಾಣ ಮಾಡಿದ ಸ್ಮರಣಾರ್ಥವಾಗಿ ಈ ಕೃತಿಯನ್ನು ಸಮರ್ಪಿಸಲಾಗಿದೆ.

ಅಕ್ಟೋಬರ್ ೧೧, ೧೯೮೭ — ಆದ್ಯರಾಮಾಚಾರ್ಯ

ವಿಜಯದಶಮಿ

## ವಿಷಯಾನುಕ್ರಮಣಿಕೆ

# ಶ್ರೀರಾಮ ವೃತ್ತಾಂತ

ಶ್ರೀರಾಮನ ಕಥೆಯು ಭಾರತೀಯರಿಗಷ್ಟೇ ಅಲ್ಲ ಜಪಾನ, ಥಾಯಲ್ಯಾಂಡ್, ದಕ್ಷಿಣ, ಮಧ್ಯ ಪೂರ್ವ ಏಶಿಯಾ, ಮಲೇಶಿಯಾ, ಬರ್ಮಾ, ಕಾಂಬೋಡಿಯಾ, ಇಂಡೋನೇಷಿಯ ಮೊದಲಾದ ದೇಶಗಳ ಜನರಿಗೂ ತುಂಬ ಪರಿಚಿತ. ಕ್ರಿ.ಶ. ೨೧೫ರ ಸುಮಾರಿನಲ್ಲಿ ವಾಲ್ಮೀಕಿ ರಾಮಾಯಣವು ಚೀನಿ ಭಾಷೆಗೆ ಅನುವಾದಿಸಲ್ಪಟ್ಟಿತು. ಫ್ರಾನ್ಸಿನ ಇಪೋಲೀಟ್ ಫೋಸ್ ಎಂಬ ವಿದ್ವಾಂಸರಿಂದಲೂ ಈ ಗ್ರಂಥವು ಭಾಷಾಂತರವನ್ನು ಹೊಂದಿತು. ಬರಾನ್ನಿಕೋಬ ಎಂಬ ವಿದ್ವಾಂಸರಿಂದಲೂ ಈ ಗ್ರಂಥವು ರಶಿಯನ್ ಭಾಷೆಗೆ ಪರಿವರ್ತನಗೊಂಡಿತು. ಇವರು "ರಾಮಚತರಿತ ಮಾನಸ"ವನ್ನೇ ಹೆಚ್ಚಾಗಿ ಅನುಸರಿಸಿದರು. ಆದುದರಿಂದ ಸೋವಿಯತ್ ಸಂಘವು ಈ ಗ್ರಂಥಕ್ಕೆ "ಆರ್ಡರ್ ಆಫ್ ಲೆನಿನ್" ಪುರಸ್ಕಾರವನ್ನಿತ್ತಿತು. ಭಾರತದಲ್ಲಂತೂ ಪ್ರತಿಯೊಂದು ಭಾಷೆಯಲ್ಲಿಯೂ ರಾಮಾಯಣದ ಅನುವಾದವಾದುದನ್ನು ಕಾಣಬಹುದು. ಮೊಗಲ್ ಚಕ್ರವರ್ತಿಯಾಗಿದ್ದ ಅಕಬರ ಬಾದಶಹನ ಕಾಲದಲ್ಲಿ ೧೫೮೯ರಲ್ಲಿ ಮುಲ್ಲಾ ಅಬ್ದುಲ್ ಖಾದರ ಬದಾಯುನಿಯವರಿಂದ ಈ ಗ್ರಂಥವು ಫಾರ್ಸಿ ಭಾಷೆಯಲ್ಲಿ ಅನುವಾದಿತಗೊಂಡಿತು. ಇತ್ತೀಚೆಗೆ ದೂರದರ್ಶನದಲ್ಲಿ ಪ್ರಸಾರವಾಗುತ್ತಿರುವ ರಾಮಾಯಣದ ಕಥೆ ಭಾರತದುದ್ದಗಲಕ್ಕೂ ಜನಪ್ರಿಯತೆ ಗಳಿಸಿತು.

ಶ್ರೀರಾಮಚಂದ್ರನ ಕಥೆಯು ಆಯೋಧ್ಯೆಯಿಂದ ಪ್ರಾರಂಭವಾಗುತ್ತದೆ. ಅದರ ವ್ಯಾಪ್ತಿಯು ಲಂಕೆಯನ್ನು ತಲುಪಿ ಒಂದುಪರಿಘದಂತೆ ಮರಳಿ ಅಯೋಧ್ಯಾ ನಗರಕ್ಕೆ ಬಂದು ತಲುಪುತ್ತದೆ. ನಿಸರ್ಗದೊಂದಿಗೆ ನಡೆದ ಪ್ರವಾಸ ಕಥನವೇ ರಾಮಾಯಣದ ಮೂಲ ಕಥೆಯೆನಿಸಿಕೊಳ್ಳುತ್ತದೆ. ಸುದೀರ್ಘ ಕಾಲದವರೆಗೆ ನಡೆದ ಈ ಪ್ರವಾಸದ ಕಥನವು ಭಾರತದ ನಿಸರ್ಗ ಸಂಪತ್ತಿನೊಂದಿಗೆ ಜನಜೀವನದ ಪರಿಚಯವನ್ನು ಮಾಡಿಕೊಡುತ್ತದೆ.

ಶ್ರೀರಾಮಚಂದ್ರನ ಈ ಪ್ರವಾಸ ಕಥನದಲ್ಲಿ ಅತಿ ಮಹತ್ವದ ಮೂರು ಸ್ಥಳಗಳು ಇಂದಿಗೂ ಉಳಿದುಕೊಂಡು ಬಂದಿವೆ. ಇದರಲ್ಲಿ ಮೊದಲನೆಯದು ಚಿತ್ರಕೂಟ ಪರ್ವತ, ಎರಡನೆಯದು ಗೋದಾವರಿಯ ಉಗಮ ಸ್ಥಾನವೆನಿಸಿದ ನಾಸಿಕ, ಮೂರನೆಯದೇ ಹೇಮಕೂಟವೆನಿಸುವುದು. ಶ್ರೀರಾಮಚಂದ್ರನು ತನ್ನ ತಂದೆಯ ಅಜ್ಞಾನುಸಾರವಾಗಿ ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಲು ಆಯೋಧ್ಯೆಯಿಂದ ಹೊರಟು ಹೋದುದನ್ನು ತಿಳಿದು ಭರತನು ಕಾಡಿಗೆ ಹೋದ ತನ್ನಣ್ಣನನ್ನು ಮರಳಿ ಕರೆತರಲು ರಾಜಪರಿವಾರದೊಂದಿಗೆ ಆಯೋಧ್ಯೆಯಿಂದ ಹೊರಟು ಬರುತ್ತಾನೆ. ಆತನೊಂದಿಗೆ ಸಾಮ್ರಾಜ್ಯದ ಮಂತ್ರಿಗಳು ಹಾಗೂ ಹೆಣ್ಣು ಕೊಟ್ಟ ಮಾವ, ರಾಜಗುರುಗಳು ಹಾಗೂ ರಾಜಮಾತೆಯರು, ಪ್ರಜೆಗಳು ಹೀಗೆ ಆಯೋಧ್ಯಾ ನಗರವೇ ಚಿತ್ರಕೂಟಕ್ಕೆ ಬಂದು ತಲುಪುತ್ತದೆ. ತಂದೆ ಗತಿಸಿದ ವಾರ್ತೆಯು ಶ್ರೀರಾಮನಿಗೆ ಚಿತ್ರಕೂಟದಲ್ಲಿಯೇ ಗೊತ್ತಾಗುತ್ತದೆ. ಶ್ರೀರಾಮನನ್ನು ಪುನಃ ಅಯೋಧ್ಯೆಗೆ ಮರಳುವಂತೆ ನಾನಾ ತರಹದ ಪ್ರಯತ್ನಗಳಾಗುತ್ತವೆ. ಆದರೆ ತಾನು ವಚನಬದ್ಧನೆಂಬ ಮಾತನ್ನು ತಿಳಿಸಿ ಸಕಲ ಪರಿವಾರವನ್ನು ಶ್ರೀರಾಮ ಹಿಂದಿರುಗಿ ಹೋಗುವಂತೆ ನೋಡಿಕೊಳ್ಳುತ್ತಾನೆ.

ಈ ಚಿತ್ರಕೂಟ ಪರ್ವತವು ಅಲಹಾಬಾದಿಗೆ ಬಹು ಸಮೀಪದಲ್ಲಿದೆ. ಲಾಲಾಪುರ ಎಂಬ ಗ್ರಾಮದ ಸಮೀಪದಲ್ಲಿಯೇ ವಾಲ್ಮೀಕಿ ಮುನಿಗಳ ಆಶ್ರಮವಿತ್ತೆಂದು ತೋರಿಸುತ್ತಾರೆ. ಆದರೆ

ಯುಗಯುಗಾಂತರಗಳ ಹಿಂದಾಗಿ ಹೋದ ಕುರುಹುಗಳು ಈಗ ಹೇಗಿರಲು ಸಾಧ್ಯ. ವಿಂಧ್ಯಾಚಲ ಪರ್ವತಗಳಿಂದ ಕೆಳಗಿಳಿ ಯುವಾಗ ಒಂದು ಪುಟ್ಟದಾದ ದೇವಿಯ ಮಂದಿರವಿದೆ. ಶ್ರೀರಾಮಚಂದ್ರನು ಇದೇ ಸ್ಥಳದಲ್ಲಿ ವಾಲ್ಮೀಕಿ ಮುನಿಗಳಿಗೆ ದರ್ಶನವನ್ನಿತ್ತನೆಂದು ಹೇಳುತ್ತಾರೆ. ಪ್ರತಿ ವರುಷವೂ ಈ ಸ್ಥಳದಲ್ಲಿ ರಾಮಭಕ್ತರು ಬಂದು ಸೇರುತ್ತಾರೆ. ಬಹು ದೊಡ್ಡ ಜಾತ್ರೆಯಾಗುತ್ತದೆ.

"ಶ್ರೀರಾಮಚರಿತ ಮಾನಸ" ಗ್ರಂಥವನ್ನು ರಚಿಸಿದ ತುಲಸೀದಾಸರು ಈ ಭಾಗದಲ್ಲಿ ಹರಿಯುವ ಮಂದಾಕಿನಿ ನದಿಯ ದಂಡೆಯ ಮೇಲೆ ವಾಸ ಮಾಡಿಕೊಂಡಿದ್ದು ಶ್ರೀರಾಮಚಂದ್ರನ ಜೀವನವನ್ನು ಕಾವ್ಯರೂಪದಲ್ಲಿ ರಚಿಸಿದರೆಂಬ ಸ್ಥಳವನ್ನು ನೋಡಿದಾಗ ವಾಲ್ಮೀಕಿ ಮುನಿಗಳಿಗೂ ಹಾಗೂ ತುಲಸೀದಾಸರಿಗೂ ಇಲ್ಲಿಯ ನಿಸರ್ಗವೇ ಸ್ಫೂರ್ತಿಯನ್ನಿತ್ತಿರ ಬಹುದೆಂದೆನಿಸುತ್ತದೆ. ಚಿತ್ರಕೂಟದ ವನಸಿರಿಗೆ ಮಾರುಹೋದ ಹೃದಯವು ರಾಮಕಥಾ ಸುಧೆಯನ್ನು ವಾಣಿಯ ರೂಪದಲ್ಲಿ ಪ್ರವಾಹವಾಗಿ ಹರಿಸಿರಬಹುದೆನಿಸುತ್ತದೆ. ಚಿತ್ರಕೂಟದ ನಿಸರ್ಗವೇ ಶ್ರೀರಾಮಚಂದ್ರ ಎಂದು ನಂಬುವ ಭಾವುಕತನಕ್ಕೆ ಮನವು ಮಾರುಹೋಗುತ್ತದೆ. ಮೂಲ ಕಾವ್ಯವನ್ನು ವಾಲ್ಮೀಕಿ ಮುನಿಗಳು ಸಂಸ್ಕೃತದಲ್ಲಿ ರಚನೆ ಮಾಡಿದರೆ ಮುಂದೆ ಅದೇ ಕಾವ್ಯವು ಪ್ರಾಕೃತ ಭಾಷೆಯಲ್ಲಿ ರಸಸಿಂಧುವಾಗಿ ಹರಿದು ಬಂದುದನ್ನು ನಾವು ಅನುಭವಿಸುತ್ತೇವೆ.

ಚಿತ್ರಕೂಟಕೇ ಘಾಟಪರ್
ಭರೀ ಸಂತನಕೀ ಭೀಡ್
ತುಲಸೀದಾಸ ಚಂದನಘೀಸೆ
ತಿಲಕದೇತ ರಘುವೀರ

ಕವಿಯ ಈ ಕಲ್ಪನೆ ಎಷ್ಟು ಸುಂದರವಾದುದೆಂಬ ಮಾತನ್ನು ರಾಮಭಕ್ತರು ಮಾತ್ರ ಅರಿತವರೆನಿಸಿಕೊಳ್ಳುತ್ತಾರೆ. ಮೂಲ

ರಾಮಾಯಣವಾಗಲಿ ಅಥವಾ ತುಲಸೀದಾಸರಿಂದ ನಿರ್ಮಿತವಾದ 'ರಾಮಚರಿತ ಮಾನಸ' ಗ್ರಂಥವಾಗಲಿ ಎರಡೂ ಕಾವ್ಯಗಳಲ್ಲಿ ರಸಗಂಗೆಯು ಓತಪ್ರೋತವಾಗಿ ಹರಿದು ಬಂದ ಅನುಭವವಾಗುತ್ತದೆ. ಚಿತ್ರಕೂಟವನ್ನು ನೋಡ ಬಯಸುವವರು ವರ್ಷಾಋತುವಿನಲ್ಲಿ ಆ ಭಾಗಕ್ಕೆ ಪ್ರವಾಸ ಹೋಗಬೇಕು. ಆಗ ಎಲ್ಲಿ ನೋಡಿದರೂ ಶ್ರೀರಾಮನೇ ಗೋಚರಿಸುತ್ತಾನೆ. ಅಲ್ಲಿಯ ನಿಸರ್ಗವು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಇದೇ ಚಿತ್ರಕೂಟದಲ್ಲಿ ಶ್ರೀರಾಮಚಂದ್ರನು ಪಿತೃಕಾರ್ಯವನ್ನು ನೆರವೇರಿಸಿದ್ದಾನೆ. ಚಿತ್ರಕೂಟವನ್ನೆಲ್ಲ ಸುತ್ತಾಡಿಕೊಂಡು ಬರುವುದು ಸಾಮಾನ್ಯದ ಮಾತೇನಲ್ಲ.

ಈ ಚಿತ್ರಕೂಟದಲ್ಲಿಯ ಅತಿ ಮಹತ್ವದ ಸ್ಥಳವೆಂದರೆ ಹೇಮಗಿರಿ ಪರ್ವತ. ಈ ಭಾಗದಲ್ಲಿ ಶ್ರೀರಾಮಚಂದ್ರನ ಭಕ್ತರು ಮೌನೀ ಅಮಾವಾಸ್ಯೆಯ ದಿನ ಇಡೀ ಪರ್ವತವನ್ನು ಪ್ರದಕ್ಷಿಣೆ ಹಾಕಲು ಉಪಕ್ರಮಿಸುತ್ತಾರೆ. ರಾಮಗಿರಿ ಪರ್ವತವನ್ನು ಶ್ರದ್ಧಾಭಕ್ತಿಗಳಿಂದ ಪೂಜಿಸುತ್ತಾರೆ. ಭರತನ ಅಂತಃಕರಣದ ಪ್ರಾರ್ಥನೆಗೆ ಇಡೀ ಪರ್ವತವೇ ಕರಗಿ ನೀರಾಗಿ ಹೋಯಿತೆಂದು ತೋರಿಸಲು ಅನೇಕ ಗುರುತುಗಳನ್ನು ಕೈಮಾಡಿ ತೋರಿಸುತ್ತಾರೆ. ಹೇಮಗಿರಿ ಪರ್ವತ ಪ್ರದಕ್ಷಿಣೆ ಹಾಕುವಾಗ ಕೈಕೇಯಿ ಮಂದಿರ, ಭರತ ಮಂದಿರ ಮೊದಲಾದುವುಗಳು ಕಾಣಸಿಗುತ್ತವೆ. ಈ ಪರ್ವತದ ತುದಿಭಾಗದಲ್ಲಿಯೇ ಹುಟ್ಟಿದ ಮಂದಾಕಿನಿಯ ಪ್ರವಾಹವು ಬಹು ಚಂಚಲ ಗತಿಯಿಂದ ಭರತನಾಟ್ಯವಾಡುವ ಶೈಲಿಯಲ್ಲಿ ಹರಿಯುತ್ತಾಳೆ. ಕೆಲವು ಸ್ಥಳಗಳಲ್ಲಂತೂ ಅವಳ ಪ್ರವಾಹವು ಸ್ಫಟಿಕ ಶಿಲೆಯಂತೆ ತೋರಿ ಬರುತ್ತದೆ.

ಈ ಚಿತ್ರಕೂಟದಲ್ಲಿಯೇ ಅನಸೂಯ ದೇವಿಯು ಜಗನ್ಮಾತೆಯಾದ ಸೀತಾದೇವಿಗೆ ಸತಿಧರ್ಮವನ್ನು ಉಪದೇಶ ಮಾಡಿದಳೆಂದು ಅತ್ರಿ ಮಹರ್ಷಿಗಳ ಆಶ್ರಮ ಸ್ಥಳವನ್ನೂ ತೋರಿಸುತ್ತಾರೆ. ಪ್ರಭು ರಾಮಚಂದ್ರನು ವಿಶಾಲವಾದ ಬಂಡೆಯ ಮೇಲೆ ಕುಳಿತು ಪರಿಸರದಲ್ಲಿ ಬೆಳೆದಿದ್ದ ಹೂಗಳಿಂದ ಪತ್ನಿಯಾಗಿದ್ದ ಸೀತಾಮಾತೆಯನ್ನಲಂಕರಿಸಿದನಂತೆ.

ಇಂದಿಗೂ ಈ ಸ್ಥಳ ನಾನಾ ತರಹದ ಹೂಗಳು ಅರಳಿರುವುದನ್ನು ನಾವು ಕಾಣಬಹುದು. ಹನುಮಧಾರಾ ಎಂಬ ಪ್ರದೇಶದಲ್ಲಿ ಆಂಜನೇಯನ ವಿಗ್ರಹವಿದೆ. ರಾಮಭಕ್ತನಾದ ಆಂಜನೇಯನು ಈ ಸ್ಥಳದಲ್ಲಿ ತಪಗೈದನೆಂದು ಹೇಳುತ್ತಾರೆ.

ಈ ಪರ್ವತದಂತೆ ಇನ್ನೊಂದು ಮೋಹಕವಾದ ಸ್ಥಳವೆಂದರೆ ಪ್ರಮೋದವನ. ಇದು ಬಹು ಪ್ರಶಾಂತ ಮಯವಾದ ತಾಣ. ಇಲ್ಲಿ ಹರಿಯುವ ಮಂದಾಕಿನಿ ನದಿಯ ದಡೆಗುಂಟ ಅನೇಕ ವಿಶ್ರಾಮಧಾಮಗಳು ಬೆಳೆದು ಬಂದಿವೆ. ಆಂಜನೇಯನ ಪರಮಭಕ್ತನೆನಿಸಿಕೊಂಡಿದ್ದ ರಣಛೋಡದಾಸ ಎಂಬ ಭಗವದ್ಭಕ್ತನು ಸೊಗಸಾದ ಧರ್ಮಶಾಲೆಯೊಂದನ್ನು ಕಟ್ಟಿಸಿದ್ದು ಅದನ್ನು ವಿಶ್ವಸ್ಥ ಸಮಿತಿಯೊಂದು ವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದೆ.

ಚಿತ್ರಕೂಟದ ಯಾತ್ರೆಗೆ ಹೊರಟ ಪ್ರವಾಸಿಗರು ಕರಬಿ ಎಂಬ ರೈಲು ನಿಲ್ದಾಣದಲ್ಲಿಳಿಯಬೇಕು. ಈ ನಿಲ್ದಾಣದಿಂದ ಮುಂದೆ ಐದು ಮೈಲು ನಡೆಯಬೇಕು. ಇಂದು ದೇಶ ವಿದೇಶಗಳಿಂದ ಯಾತ್ರಾರ್ಥಿಗಳು ಬಂದು ಹೋಗುತ್ತಿದ್ದರೂ ಹೇಳಿಕೊಳ್ಳುವ ರೀತಿಯಲ್ಲಿ ಯಾತ್ರಿಕರಿಗೆ ಅನುಕೂಲತೆಗಳಿರುವುದಿಲ್ಲ. ಈ ಪುಣ್ಯಧಾಮವು ಕೆಲವು ಕಾಲಾವಧಿಯವರೆಗೆ ಹಿಂದೂಪದಪಾದಶಾಹಿತ್ವದ ಪ್ರತಿನಿಧಿಗಳಾಗಿದ್ದ ಪೇಶ್ವೆಯವರ ಅಧಿಕಾರದಲ್ಲಿತ್ತು ಎಂಬುದು ಹೆಮ್ಮೆಯ ಮಾತೆನಿಸುವುದು. ಅವರ ಕಾಲಾವಧಿಯಲ್ಲಿಯೇ ರಚಿತವಾದ ಕೆಲವು ಛತ್ರಗಳಿವೆ. ಅಹಲ್ಯಾಬಾಯಿ ಹೋಳ್ಕರ ಇವರಿಂದ ಕಟ್ಟಿಸಲಾದ ಧರ್ಮಛತ್ರವು ಬಹು ಸೊಗಸಾಗಿದೆ.

ಈ ಚಿತ್ರಕೂಟ ಪರ್ವತದ ಒಂದು ಭಾಗವು ಇಂದು (ರಾಮಘಾಟವರೆಗಿರುವ ಪ್ರದೇಶವೆಲ್ಲ) ಉತ್ತರ ಪ್ರದೇಶದ ಬಾಂದಾ ಎಂಬ ಜಿಲ್ಲೆಗೆ ಸೇರಿದ ಭಾಗವೆನಿಸಿದರೆ ಅದರ ಇನ್ನೊಂದು ಭಾಗವು ಮಧ್ಯಪ್ರದೇಶದ ಸತನಾ ಜಿಲ್ಲೆಗೆ ಸೇರಿಕೊಂಡಿದೆ.

ಚಿತ್ರಕೂಟದಿಂದ ಮುಂದೆ ಹೊರಟ ಶ್ರೀರಾಮಚಂದ್ರನು ಗೋದಾವರಿಯ ಉಗಮ ಸ್ಥಾನಕ್ಕೆ ಬಂದಾಗ ತನ್ನ ಪತ್ನಿಯನ್ನು ಕಳೆದುಕೊಳ್ಳುತ್ತಾನೆ. ಅತಿ ವಿಹ್ವಲನಾಗಿ ಸೀತೆಯನ್ನರಸುತ್ತ ದಕ್ಷಿಣಕ್ಕೆ ಇಳಿಯುತ್ತಾನೆ. ಮಾನಸಿಕ ಅಘಾತದಿಂದ ಝುರ್ಝುರಿತನಾದ ಶ್ರೀರಾಮಚಂಪ್ರನಿಗೆ ಭರವಸೆಯ ಸ್ವಾಂತನದ ನುಡಿಗಳಿಂದ ಸ್ವಾಗತ ನೀಡಿದ ಸ್ಥಳವೇ ಹೇಮಕೂಟವೆಂದೆನಿಸುವದು. ಅದನ್ನೇ ಇಂದು ಹಂಪಿ ಎಂದು ಕರೆಯುತ್ತಾರೆ. ಸುಗ್ರೀವ ಹಾಗೂ ಆತನ ಆಪ್ತ ಸಚಿವನೆನಿಸಿದ ಹನುಮಂತ ಇವರಿಬ್ಬರ ನುಡಿಗಳಿಂದಾಗಿ ರಾಮನ ಮನದಲ್ಲಿ ಆಸೆಯು ಚಿಗುರೊಡೆಯುತ್ತದೆ. ಚಿತ್ರಕೂಟದಂತೆ ಹೇಮಕೂಟವಾದರೂ ನಿಸರ್ಗ ರಮಣೀಯವಾದ ಸ್ಥಳ. ಭರತನ ಪರಿವಾರವನ್ನೆಲ್ಲ ಚಿತ್ರಕೂಟದಿಂದ ನಿರಾಶರಾಗಿ ಮರಳಿದ್ದರೆ ಹೇಮಕೂಟವು ನಿರಾಶನಾಗಿ ಬಂದ ರಾಮಚಂದ್ರನಿಗೆ ಧೈರ್ಯವನ್ನೊದಗಿಸುತ್ತದೆ. ನಿರಾಯುಧರಾದ ಈ ಕಪ್ಪು ನೆಲದ ಯೋಧರಿಂದಲೇ ಆತನು ತನ್ನ ಮುಂದಿನ ಗುರಿ ತಲುಪಲು ಅಣಿಯಾಗುತ್ತಾನೆ. ಈ ಹೇಮಕೂಟವನ್ನೇ "ಕಿಷ್ಕಿಂಧಾ" ಮಹಾನಗರವೆಂದು ಕರೆಯಲಾಗುತ್ತದೆ. ಚಿತ್ರಕೂಟದಲ್ಲಿ ಶ್ರೀರಾಮನು ತನ್ನ ತಂದೆಗೆ ತಿಲೋದಕವನ್ನಿತ್ತರೆ ಈ ಹೇಮಕೂಟದಲ್ಲಿ ಸುಗ್ರೀವನು ತನ್ನಣ್ಣನಿಗೆ ತಿಲೋದಕ ವನ್ನೀಯುವ ಪ್ರಸಂಗವು ಕಾಣಿಸಿಕೊಳ್ಳುತ್ತದೆ. ಅನಾಥನಾಗಿ ಬಂದ ಶ್ರೀರಾಮನಿಗೆ ಸನಾಥ ಎಂಬ ರೀತಿಯಲ್ಲಿ ಈ ನೆಲದ ಬಂಟರು ವಿಶ್ವಾಸವನ್ನು ಮೂಡಿಸುತ್ತಾರೆ.

ಚಿತ್ರಕೂಟದಲ್ಲಿರುವಂತೆ (ಹೇಮಕೂಟ-ಹಂಪಿ) ಈ ಪರ್ವತಗಳಲ್ಲಿಯೂ ಸಹ ಶ್ರೀರಾಮನ ಪಾದುಕಗಳು, ಸೀತೆಯ ಸೆರಗು, ಪಂಪಾಸರೋವರ, ರಾಮಧನಸ್ಸು ಎಂಬ ಕುರುಹುಗಳನ್ನು ನಾವು ಕಾಣಬಹುದಾಗಿದೆ. ಅತಿ ದೂರದಿಂದ ಹರಿದು ಬರುವ ಈ ತುಂಗೆಯ ಹರಹು ಬಹು ಚಿತ್ತಾಕರ್ಷಕವಾಗಿ ತೋರುತ್ತದೆ. ಚಕ್ರತೀರ್ಥದ ದಂಡೆಯ ಮೇಲಿರುವ ಶ್ರೀರಾಮಚಂದ್ರ ಸೀತಾ ಲಕ್ಷ್ಮಣರೊಂದಿಗೆ ವಿಪತ್ತಿನಲ್ಲಿ ಸಹಕರಿಸಿದ ಸುಗ್ರೀವನ ವಿಗ್ರಹವನ್ನು ಸಹ ನಾವು (ಕೋದಂಡ ರಾಮನ ದೇವಾಲಯದಲ್ಲಿ) ಕಾಣಬಹುದು. ಇದೇ

ಚಕ್ರತೀರ್ಥದ ಬೆಟ್ಟದ ತುದಿ ಭಾಗದಲ್ಲಿ ಯೋಗಾರೂಢನಾಗಿ ಸದಾ ಧ್ಯಾನದಲ್ಲಿ ನಿರತನಾದ ಆಂಜನೇಯನ ವಿಗ್ರಹವನ್ನೂ ಸಹ ನಾವು ಕಾಣಬಹುದು. ಮಾತಂಗಾಶ್ರಮ, ಆಂಜನಾದೇವಿಯ ಗುಡ್ಡ ಇವೇ ಮೊದಲಾದ ತಪಸ್ವಿಗಳ ತಾಣವನ್ನು ಇಲ್ಲಿಯೂ ಕಾಣಬಹುದಾಗಿದೆ. ಶ್ರೀರಾಮನ ಜೀವನದ ಕಥಾಸಾರವನ್ನು ತಿಳಿಸಲು ವ್ಯಾಸರಾಜರು, ವಾದಿರಾಜರು, ಪುರಂದರದಾಸರು ಪ್ರಯತ್ನಿಸಿದರೆಂಬ ಬಗ್ಗೆ ಅವರ ಕೃತಿಗಳು ಸಾಕ್ಷಿಯಾಗಿವೆ. ಹೇಮಕೂಟಕ್ಕೆ ತುಲಸೀದಾಸರು ಬಂದು ಹೋದರೆಂಬ ಮಾತಿಗೆ ಸಾಕ್ಷಿಯಾಗಿವೆ. ಬೆಟ್ಟದ ಮೇಲಿರುವ ಆಂಜನೇಯನಿಗೆ ಇಂದಿಗೂ ಉತ್ತರದ ಬೈರಾಗಿಗಳ ಪೂಜೆ ನಡೆಯುತ್ತಲಿದೆ.

ಈ ಹೇಮಕೂಟವನ್ನು (ಹಂಪಿ) ನಾವು ಪ್ರದಕ್ಷಿಣಾಕಾರದಲ್ಲಿ ಸಂಚರಿಸಬಹುದು. ಅಂಥವರು ಮುನಿರಾಬಾದಿನಲ್ಲಿ ಪಂಪಾಸರೋವರವನ್ನು ನೋಡಿಕೊಂಡು ರಾಮಪುರದಿಂದ ಮುಂದೆ ಸಾಗಿ ಕಂಪ್ಲಿ, ಕಮಲಾಪುರಗಳನ್ನು ಬಳಸಿಕೊಂಡು ವಿರೂಪಾಕ್ಷನ ದರ್ಶನ ಪಡೆಮುಕೊಂಡು ಚಕ್ರತೀರ್ಥದ ಮೇಲಿರುವ ಕೋದಂಡರಾಮನ ದರ್ಶನ ಪಡೆದುಕೊಂಡು ಹೊಸಪೇಟೆಯ ರೈಲು ನಿಲ್ದಾಣಕ್ಕೆ ಬಂದಲ್ಲಿ ಒಂದು ಪ್ರದಕ್ಷಿಣೆಯಾಗುತ್ತದೆ. ಉತ್ತರದ ಅನೇಕ ಬೈರಾಗಿಗಳು ಹೀಗೆ ಕಾಲು ನಡಿಗೆಯಿಂದ ಕಿಷ್ಕಿಂದಾ ನಗರದ ಪ್ರದಕ್ಷಿಣೆ ಮಾಡಿ ಪುನೀತ ಭಾವದಿಂದ ಮರಳುತ್ತಾರೆ. ಆದರೆ ಚಿತ್ರಕೂಟದಂತೆ ಈ ಯಾತ್ರೆ ಕಠಿಣವೆನಿಸಲಾರದು. ಈ ಭಾಗದಲ್ಲಿ ಅನೇಕ ಸೌಕರ್ಯಗಳಿವೆ, ಅನುಕೂಲತೆಗಳಿವೆ.

ಶ್ರೀರಾಮನ ಜೀವನವಂತೂ ಭಾರತೀಯರಿಗೆಲ್ಲ ನಿತ್ಯ ಚೇತೋಹಾರಿಯಾದ ಕಥೆಯೆನಿಸಿದೆ. ಭಾರತ ಸರ್ಕಾರದವರು ಚಿತ್ರಕೂಟದವರೆಗೆ ಶ್ರೀರಾಮಭಕ್ತರು ಸರಾಗವಾಗಿ ಸಂಚರಿಸಿ ಹೋಗುವಂತೆ ಅನೇಕ ರೀತಿ ಸೌಲಭ್ಯಗಳನ್ನೊದಗಿಸುವುದು ವಿಹಿತವೆನಿಸುತ್ತದೆ. ಇದಕ್ಕೆ ಪ್ರಚಾರದ ಅವಶ್ಯಕತೆ ಇದೆ. ಪ್ರವಾಸದ ನಿಗಮಗಳಿಂದ ಈ

ಾಗಲಾರದು. ಜನಮಾನಸದಿಂದ ಈ ಕೆಲಸವಾದಲ್ಲಿ ಭಾರತದ ತ್ರೆಗೆ ಬಹು ದೊಡ್ಡ ಕಾಣಿಕೆಯನ್ನಿತ್ತ ಕೆಲಸವಾಗುತ್ತದೆ. ಯುಗ ಗತಿಸಿದರೂ ಶ್ರೀರಾಮಚಂದ್ರನ ಜೀವನಕ್ಕೆ ಸಾಕ್ಷಿ ರೂಪವಾಗಿ ುವ ಈ ನಿಸರ್ಗದಲ್ಲಿರುವ ಪರ್ವತಗಳು, ನಿರರ್ಗಳವಾಗಿ ಯುವ ಪ್ರವಾಹಗಳು, ಪರಿಸರದಲ್ಲಿ ವಾಸಿಸುವ ಮೃಗಪಕ್ಷಿಗಳ ಣನಾದ ಇವೇ ಮೊದಲಾದುವುಗಳನ್ನು ಪ್ರತ್ಯಕ್ಷವಾಗಿ ಕಂಡಲ್ಲಿ ಮನ ದಿವ್ಯ ದರ್ಶನವನ್ನು ಪಡೆದ ಆನಂದಾನುಭವ ವುದರಲ್ಲಿ ಯಾವ ಸಂದೇಹವೂ ಇಲ್ಲ.



# ಕಲಶ

ಮಂಗಲ ಕಾರ್ಯದಲ್ಲೆಲ್ಲ ಕಲಶದ ಮಹತ್ವವಿದೆ. ವಿವಾಹ ಸಂದರ್ಭದಲ್ಲಂತೂ ವಾದ್ಯವೈಭವಗಳೊಂದಿಗೆ ಕಲಶ ಧರಿಸಿದವರು ಮುಂದಿರುತ್ತಾರೆ. ಮಂಗಲ ಕಾರ್ಯದಲ್ಲಿ ಕಲಶ ಹಿಡಿದ ತರುಣಿಯನ್ನು "ಕಳಸಗಿತ್ತಿ" ಎಂದು ಕರೆಯುವ ರೂಢಿ ಇದೆ. ಇದು ಕೇವಲ ವಿವಾಹಾದಿ ಮಂಗಲ ಕಾರ್ಯದಲ್ಲಿ ಮಾತ್ರ ಎಂದೇನೂ ಅಲ್ಲ, ಯಜ್ಞ, ಯಾಗ, ಪುಣ್ಯಾಹವಾಚನದ ಕಾಲದಲ್ಲಿಯೂ ಮೊದಲು ಈ ಕಲಶದ ಪೂಜೆ, ಅನಂತರದಲ್ಲಿಯೇ ಇನ್ನುಳಿದ ಕಾರ್ಯ. ಪ್ರತಿ ದಿನ ಮಾಡುವ ದೇವಪೂಜೆಯ ಕಾಲದಲ್ಲಿ ಬಳಸುವ ಶುದ್ಧೋದಕವನ್ನು ಬಳಸುವ ಕಾಲದಲ್ಲಿ ಕಲಶರೂಪದಲ್ಲಿರುವ ಈ ಪಾತ್ರೆಯಲ್ಲಿ ಸಕಲ ನದಿಗಳನ್ನು ಆಹ್ವಾನಿಸುವುದುಂಟು.

ಕಲಶ - ಇದು ಭಾರತೀಯ ಸಂಸ್ಕೃತಿಯಲ್ಲಿ ಅಗ್ರಮಾನ್ಯ ಪೂಜೆಗೊಳ್ಳುವ ದೇವತೆ. ಪುಣ್ಯಾಹ ವಾಚನಾತಂರದಲ್ಲಿ ಪತಿ ಪತ್ನಿಯರಿಗೂ ಹಾಗೂ ಪರಿವಾರ ವರ್ಗದವರಿಗೂ ಈ ಕಲಶದಲ್ಲಿರಿಸಲಾದ ಜಲವನ್ನು ಮಂತ್ರ, ಪುರಸ್ಸರವಾಗಿ ಪ್ರೋಕ್ಷಣೆಮಾಡಿ ಎಲ್ಲರನ್ನೂ ಪವಿತ್ರರನ್ನಾಗಿ ಮಾಡುವುದುಂಟು.

ಈ ಕಲಶ ಸ್ಥಾಪನಾಕಾರ್ಯದಲ್ಲಿ ಕೆಲವು ವಿಧಾನಗಳಿವೆ. ನಾನಾತರಹದ ರಂಗವಲ್ಲಿಯನ್ನು ಬಿಡಿಸಿ ಅದರ ಮೇಲೆ ಮಣೆಯನ್ನಿಟ್ಟು

ಮೇಲೆ ಅಕ್ಕಿಯನ್ನೋ ಅಥವಾ ಗೋದಿಯನ್ನೋ ಚೌಕೋಣಾಕೃತಿಯಲ್ಲಿ ಹರಡಿ ಅವರಲ್ಲಿ ಸ್ವಸ್ತಿಕ ಚಿಹ್ನೆಯನ್ನು ಬಿಡಿಸುತ್ತಾರೆ. ಕಲಶ ಪಾತ್ರೆಗಳಿಗೆಲ್ಲ ಗಂಧ ಅಕ್ಷತೆಗಳನ್ನು ಲೇಪಿಸಿ ಮಾವಿನ ಎಲೆಗಳಿಂದ ಪೂರ್ಣ ತೆಂಗಿನಕಾಯಿಯನ್ನಿಟ್ಟು ಹೂವಿನಮಾಲೆ ಮುಡಿಸುತ್ತಾರೆ. ವಸ್ತ್ರವನ್ನು ಹೊದಿಸುತ್ತಾರೆ. ಅರಿಷಿಣ ಕುಂಕುಮದೊಂದಿಗೆ ಸಮಯಾನುಸಾರವಾಗಿ ಧೂಪದೀಪಗಳಿಂದ ಪೂಜಿಸುತ್ತಾರೆ. ಹೀಗೆ ಕಲಶಕ್ಕೆ ಷೋಢಶೋಪಚಾರ ಪೂಜಾದಿಗಳಾಗಬೇಕಾಗುತ್ತದೆ.

ಕಲಶದಲ್ಲಿ ಅಧಿಷ್ಠಾತ್ರಿಯಾದ ದೇವತೆ ವರುಣ, ಈತ ವಿಶ್ವದ ಅತ್ಯದ್ಭುತ ವ್ಯಾಪಾರಗಳನ್ನು ಮಾಡುವವ. ಈತನು ಉತ್ಕಟ ರೂಪವಾದ ರಸವನ್ನೀಯುವವನು. ಈ ಕಲಶದೇವನನ್ನು ಆಹ್ವಾನಿಸುವ ಮಂತ್ರವಿದೆ.

ಹೇ! ವರುಣದೇವನೇ ನಿನಗೆ ವಂದನೆಸಲ್ಲಿಸುವೆ. ನಿನ್ನ ಸಾಮಿಪ್ಯವನ್ನಪೇಕ್ಷಿಸುವೆ. ಯಾಗವನ್ನಾಚರಿಸಲಿರುವ ನಾನು ನಿನಗೆ ಹವಿಸ್ಸನ್ನರ್ಪಿಸಿ ನಿನ್ನಿಂದ ಅನುಗ್ರಹವನ್ನು ಯಾಚಿಸುವೆ ದೇವನೇ ಸದಾಕಾಲವೂ ನೀನು ನಮ್ಮ ಮಧ್ಯದಲ್ಲಿ ವಾಸವಾಗಿರು, ನಮ್ಮ ಆಯುಷ್ಯವನ್ನು ಅಭಿವೃದ್ಧಿಗೊಳಿಸುವವನಾಗು ನಿನ್ನ ಕೀರ್ತಿಯು ದಶ ದಿಕ್ಕುಗಳಿಗೆ ವ್ಯಾಪಿಸುವಂತಾಗಲಿ ಎಂಬರ್ಥದ ಮಂತ್ರವಿದು.

ಮಂಟಪದಲ್ಲಿ ಅಥವಾ ಮಣೆಯಮೇಲೆ ಪ್ರತಿಷ್ಠಾಪಿಸಲಾದ ಕಲಶ ದೇವತೆಯನ್ನು ವರ್ಣಿಸುವ ಮಂತ್ರಗಳೂ ಕೂಡ ಬಹು ಅರ್ಥ ಗರ್ಭಿತವಾಗುವುಗಳು.

ಕಲಶಸ್ಯ ಮುಖೇ ವಿಷ್ಣು||
ಕಂಠೇ ರುದ್ರಃ ಸಮಾಶ್ರಿತಃ
ಮೂಲೇ ತತ್ರ ಸ್ಥಿತೋ ಬ್ರಹ್ಮಾ
ಮಧ್ಯೇ ಮಾತೃ ಗಣಾಃ ಸ್ಮತಾಃ
ಕುಕ್ಷಾತು ಸಾಗರಾಃ ಸರ್ವೇ
ಸಪ್ತದ್ವೀಪಾ ವಸುಂಧರಾ

ಋಗ್ವೇದೋಥ ಯಜುರ್ವೇದ
ಸಾಮವೇದೋ ಹ್ಯಥರ್ವಣಃ
ಅಂಗೈಶ್ವ ಸಹಿತಾಃ ಸರ್ವೇ
ಕಲಶಂತು ಸಮಾಶ್ರೀತಾಃ
ಅತ್ರ ಗಾಯತ್ರಿ ಸಾವಿತ್ರಿ ಸರಸ್ವತಿ
ಶಾಂತಿ ಪುಷ್ಟಿಕರೀ ತಥಾ
ಆಯಾಂತು ಮಮ ಶಾಂತ್ಯರ್ಥಂ
ದುಂತ ಕ್ಷಯ ಕಾರಕಾಃ
ತೀರ್ಥಾನಿ ಜಲದಾ ನದಾಃ
ಆಯಾಂತು ಮಮ ಶಾಂತ್ಯರ್ಥಂ
ದುರಿತಕ್ಷಯ ಕಾರಕಾಃ

ಈ ಮಂತ್ರವು ಸಂಸ್ಕೃತ ಜನ್ಯವೆನಿಸಿದರೂ ಇಲ್ಲಿ ಬಳಸಲಾದ ಪದಗಳು ಮಾತ್ರ ಸರ್ವರಿಗೂ ಅರ್ಥವಾಗುತ್ತವೆ. ಇದಕ್ಕೆ ಪಂಡಿತೋತ್ತಮರು ಆಧ್ಯಾತ್ಮ ಪರವಾಗಿ ನಾನಾ ವಿಧವಾದ ಅಮೋಘ ರೀತಿಯ ಅರ್ಥವನ್ನೊದಗಿಸುತ್ತಾರೆ.

ಕಲಶದ ಮುಖದಲ್ಲಿ ವಿಷ್ಣು, ಕಂಠದಲ್ಲಿ ರುದ್ರ, ಮೂಲದಲ್ಲಿ ಬ್ರಹ್ಮ, ಮಧ್ಯಭಾಗದಲ್ಲಿ ಮಾತೃದೇವತೆಗಳು, ಕುಕ್ಷಿಯಲ್ಲಿ ಎಲ್ಲ ಸಾಗರಗಳು, ಸಪ್ತದ್ವೀಪಗಳಿಂದ ಕೂಡಿದ ವಸುಂಧರೆಯೂ ಅಂಗಾಂಗಗಳಲ್ಲಿ ಋಗ್, ಯಜುರ್, ಸಾಮ, ಅಥರ್ವಣ ವೇದಾದಿಗಳೂ ಗಾಯತ್ರಿ, ಸಾವಿತ್ರಿ, ಸರಸ್ವತಿದೇವಿಯರೂ ವಾಸವಾಗಿದ್ದು, ಸಪ್ತಸಾಗರಗಳಿಂದ ಸಪ್ತ ನದಿಗಳಿಂದ ಕೂಡಿದ ಕಲಶಾಭಿಮಾನಿ ದೇವತೆಯೇ ನಮ್ಮನ್ನು ಪವಿತ್ರರನ್ನಾಗಿ ಮಾಡು. ಈ ಕಲಶದ ಜಲವನ್ನೇ "ಏಷಾಃ ಸ್ಯಂತುಹಾಶಿಷಃ ಸಂತು". ಬ್ರಾಹ್ಮಣರಿಂದ ಸತ್ಯವಾದವುಗಳು ಎಂದರ್ಥ.

ಕಲಶದಲ್ಲಿ ಥಾಲಿಗಳನ್ನು ಬಳಸುವುದುಂಟು. ಅಥವಾ ಚಿಕ್ಕ ತಂಬಿಗೆಗಳನ್ನಿರಿಸುವುದುಂಟು. ಇಂಥ ಕಲಶಗಳನ್ನು ಪ್ರತಿಯೊಂದು ಶಾಂತಿ ಪೂಜಾದಿಗಳಲ್ಲಿ ಬಳಸುವುದುಂಟು. ಇನ್ನು ಕೆಲವು ಪ್ರಾಂತಗಳಲ್ಲಿ ಕೊಡವನ್ನೇ ಕಲಶವಾಗಿ ಪೂಜಿಸುವುದುಂಟು. ಅಂಥಹದನ್ನು ಘಟ

ಕಲಶವೆಂದೆನ್ನುತ್ತಾರೆ. ಯಾವ ದೇವಮಂದಿರವನ್ನೇ ನಿರ್ಮಿಸಲಿ ಆ ದೇವಾಲಯದ ಮಧ್ಯಭಾಗದ ಗೋಪುರದಲ್ಲಿಯೂ ಕಲಶವಿರುತ್ತದೆ. ಅದನ್ನು ಗೋಪುರ ಕಲಶವೆಂದೆನ್ನುತ್ತಾರೆ. ಕೆಲವು ಪ್ರಾಂತಗಳಲ್ಲಿ ಕೊಡಗಳ ಮೇಲೆ ದೀಪವನ್ನಿಟ್ಟು ನರ್ತಿಸುತ್ತಾರೆ. ಅದನ್ನು ಜ್ಯೋತಿರ್ಕಲಶವೆಂದು ಸಂಬೋಧಿಸುತ್ತಾರೆ.

ಕಲಶ ಪೂಜೆ ಇದು ಭಾರತೀಯ ಸಂಸ್ಕೃತಿಯ ದಿವ್ಯ ಪ್ರತೀಕ. ಇದರ ರಹಸ್ಯವನ್ನರಿತು ಪೂಜಿಸುವುದರಿಂದ ನಾವು ಪುರುಷಾರ್ಥವನ್ನು ಹೊಂದಬಹುದಾಗಿದೆ.



# ನರಸಿಂಹಾವತಾರದ ಮೂಲಸ್ಥಾನ

---

ವಿಶ್ವದಲ್ಲಿ ಕಣ್ಣಿಗೆ ಕಾಣದ ಕೈಗೆ ಎಟುಕದಂತಹ ಪ್ರಬಲವಾದ ಅನೇಕ ಶಕ್ತಿಗಳಿವೆ. ಅವುಗಳ ಪ್ರಭಾವದಲ್ಲಿ ನಮ್ಮ ಬಾಳು ಬೆಳಗುತ್ತದೆ. ರೂಪುಗೊಳ್ಳುತ್ತದೆ. ಪ್ರಕೃತಿಯ ಪ್ರಕೋಪದ ಮುಂದೆ ಮಾನವನು ಹತಬಲ. ಆ ಶಕ್ತಿಯನ್ನು ಸುಪ್ರಸನ್ನಗೊಳಿಸಿಕೊಂಡು ಬಾಳುವುದರಲ್ಲಿಯೇ ಆತನ ಜೀವನ ಸಾರ್ಥಕ್ಯವಿದೆ. ಈ ಕಲ್ಪನೆಯು ಇಂದು ನಿನ್ನೆಯದಲ್ಲ, ಅತ್ಯಂತ ಪ್ರಾಚೀನ ಮಾನವನೊಂದಿಗೆ ಅದು ಬೆಳೆದು ಬಂದ ಸಹಯೋಗದ, ಕವಚವೆನಿಸಿಕೊಂಡಿದೆ.

ಭಾರತೀಯರಲ್ಲಿ ಅಪ್ರಾಕೃತವೆಂದೆನಿಸುವ ಅಸ್ವಾಭಾವಿಕ ರೂಪಗಳೆಂದು ತೋರುವ ದೇವ ದೇವತೆಯರಿಗೆ ಕಡಿಮೆ ಇಲ್ಲ, ಯಾವುದಾದರೊಂದು ಪ್ರಾಣಿಯ ತಲೆಯನ್ನೊ ಅಂದರೆ - ಮಾನವ ದೇಹ ಸಿಂಹ ಮುಖ, ಕುದುರೆಯ ಮುಖ ಮಾನವ ದೇಹ - ಹೀಗೆ ಒಂದೇ ಎರಡೇ ಹಲವಾರು ಭಂಗಿಗಳಲ್ಲಿರುವ ಈ ದೇವತೆಗಳನ್ನು ನಾವು ಕಾಣಬಹುದು. ಈಗ ವಾಹನಗಳೊಂದಿಗೆ ಅತಿರೇಕವೆಂದೆನಿಸ ಬಹುದಾದ ಆಭರಣಗಳನ್ನೂ ಸಹ ಆ ದೇವತೆಗಳು ಧರಿಸಿರುವುದನ್ನು ನೋಡಬಹುದು. ಅತ್ಯಂತ ಪ್ರಾಚೀನ ಕುರುಹುಗಳೆಂದು ಗುರುತಿಸಲ್ಪಡುವ ಹರಪ್ಪ, ಮೊಹಂಜೋದಾರೋ, ಕಾಲೀಬಂಗನ್, ಲೋಥಲ್ ಮೊದಲಾದ ಭಾಗದಲ್ಲಿ ದೊರೆತ ಕುರುಹುಗಳಿಂದ ಈ ಮಾತನ್ನು ನಾವು

ತಿಳಿಯಬಹುದು. ಉತ್ಖನನ ಕಾರ್ಯದಲ್ಲಿ ದೊರೆತ ಪದಾರ್ಥಗಳನ್ನಭ್ಯಾಸ ಮಾಡಿದಂತೆಲ್ಲ ಎಂಥವನಿಗೂ ಪ್ರಕೃತಿ ಪುರುಷರ ಸಂಬಂಧ ಎಷ್ಟು ಪ್ರಾಚೀನ ಎಂಬುದರ ಅರಿವಾಗದಿರದು.

ಕೇಶವಾದಿ ಇಪ್ಪತ್ನಾಲ್ಕು ರೂಪಗಳಲ್ಲಿ ಹಾಗೂ ವಿಷ್ಣುವಿನ ಹನ್ನೆರಡು ಅವತಾರಗಳಲ್ಲಿ ಮತ್ಸ್ಯ, ಕೂರ್ಮ ಈ ರೂಪುಗಳಿಗೆ ಸಮುದ್ರ ಗರ್ಭ ಅಥವಾ ಜಲಪ್ರವಾಹವು ಕಾರಣವೆನಿಸಿದರೆ ಮುಂದಿನ ವರಾಹ, ನಾರಸಿಂಹ ಈ ಅವತಾರಗಳ ನೆಲೆ ಭೂಮಿಯನ್ನಾಶ್ರಯಿಸಿ ಬೆಳೆದು ಬಂದಿದೆ. ಅದಕ್ಕೂ ಮುಂದೆ ಹೋದಲ್ಲಿ ರಾಮಕೃಷ್ಣರು ಇಂಥ ಸ್ಥಳದಲ್ಲಿಯೇ ಜನಿಸಿದರೆಂಬ ಬಗ್ಗೆ ನಿಖರತೆ ಇದೆ. ಆ ಸ್ಥಳವನ್ನುಳಿಸಿಕೊಳ್ಳಲು ಹಗಲಿರುಳೆನ್ನದೆ ಭಕ್ತರು ಪ್ರಯತ್ನನಿರತರಾಗಿದ್ದಾರೆ. ಹೀಗಿರುವಾಗ ಸತ್ಯ, ಧರ್ಮ ಸಾತ್ವಿಕತನವನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದ ಪ್ರಹ್ಲಾದ ರಾಜನಿಗೆ ಒಲಿದು ಬಂದ ನರಸಿಂಹನು ಹುಟ್ಟಿದ ಅಥವಾ ಅವತಾರ ಮಾಡಿದ ಸ್ಥಳ ಯಾವುದು? ಎಂಬ ಬಗ್ಗೆ ವಿಚಾರ ಮಾಡುವುದು ವಿಹಿತವೆನಿಸುವುದು. ಏಕೆಂದರೆ ಅನ್ಯಾಯದ ವಿರುದ್ಧವಾಗಿ ದುಷ್ಟತನವನ್ನು ಹೊಡೆದು ಹಾಕಿ ಶಾಂತಿ ನೆಲೆಸುವಂತೆ ಮಾಡಿದ ಈ ದೇವನನ್ನು ದಾರ್ಶನಿಕರೆಲ್ಲರೂ ಪೂಜಿಸುತ್ತಾ ಬಂದುದುಂಟು. ಈ ಮಹಾನುಭಾವನನ್ನು ಅಶ್ವತ್ಥ ವೃಕ್ಷದ ರೂಪದಲ್ಲಿಯೂ, ಸಾಲಿಗ್ರಮ ಶಿಲೆಯ ರೂಪದಲ್ಲಿಯೂ ಹಾಗೂ ಪಂಚಲೋಹದ ವಿಗ್ರಹ ಮತ್ತು ಶಿಲಾ ವಿಗ್ರಹಗಳಲ್ಲಿ ಪೂಜಿಸುವ ಸಂಪ್ರದಾಯವಿರುವುದು. ಮುಖ್ಯವಾಗಿ ಒಂದು ಗಿರಿಜ ಇನ್ನೊಂದು ಸ್ಥೌಣ ರೂಪದಲ್ಲಿ ಈ ದೇವನನ್ನು ಗುರುತಿಸುವುದುಂಟು. ಗಿರಿಜ ಎಂದರೆ ಗಿರಿಗಂಹರದಲ್ಲಿ ಅಥವಾ ತಪ್ಪಲು ಪ್ರದೇಶವೆನಿಸುವ ನಿಸರ್ಗಕ್ಕಂಟಿಕೊಂಡು ಈತನ ವಾಸಸ್ಥಾನವನ್ನು ಕಟ್ಟಿಸಿರುವುದುಂಟು. ಹೆಚ್ಚಾಗಿ ಪ್ರವಾಹಗಳು ಒಂದುಗೂಡುವ ಸಂಗಮ ಸ್ಥಳದಲ್ಲಿಯೂ ಸಹ ಈ ದೇವನ ದೇವ ಮಂದಿರಗಳಿರುವುದುಂಟು. ಇನ್ನು ಸ್ಥೌಣ ಎಂದರೆ ಕಂಬದಿಂದ ಪ್ರಾದುರ್ಭಾವವಾದ ಭಂಗಿಯಲ್ಲಿದ್ದವನು. ತೊಡೆಯ ಮೇಲೆ ಹಿರಣ್ಯಕಶ್ಯಪನನ್ನು ಹಾಕಿ ಕೊಂಡು ಆತನ ವಕ್ಷಸ್ಥಳವನ್ನು ಸೀಳುತ್ತಲಿದ್ದವನು, ಎಂದರ್ಥ (ಇಂಥ ವಿಗ್ರಹಗಳಲ್ಲಿ

ತೊರವೆಯ ನಾರಸಿಂಹನ ವಿಗ್ರಹವು ಬಲು ಸೊಗಸಿನದೆಂದು ಹೇಳಬಹುದು). ಈ ದೇವನನ್ನು ಪ್ರಹ್ಲಾದ ವರದನೆಂದೂ ಅಘೋರ ನರಸಿಂಹನೆಂದೂ, ಲಕ್ಷ್ಮೀನರಸಿಂಹನೆಂದೂ (ಈ ಲಕ್ಷ್ಮೀ ನರಸಿಂಹನ ಅತ್ಯದ್ಭುತವಾದ ಭಗ್ನಾವಶೇಷವನ್ನು ಹಂಪಿಯಲ್ಲಿ ಕಾಣಬಹುದು). ಇದರಂತೆ ಪಾನಕ ನರಸಿಂಹನೆಂದೂ, ಅಹೋಬಲ ಸ್ವಾಮಿಯೆಂದೂ ಪೂಜಿಸುವುದುಂಟು. ವೃಕ್ಷರೂಪದಲ್ಲಿ ಪೂಜೆಗೊಳ್ಳುವ ಈ ದೇವನು ಸಾಲಿಗ್ರಾಮ ರೂಪದಲ್ಲಿಯೂ ಪೂಜೆಗೊಳ್ಳುತ್ತಾನೆ. ಅಗಲವಾದ ಕಪ್ಪು ಶಿಲೆಯಲ್ಲಿರುವ ಮುಖ ಹಾಗೂ ಮೇಲೂ ಕೆಳಗೂ ಸುಂದರವಾದ ಸುದರ್ಶನ ಚಕ್ರಗಳಿದ್ದಲ್ಲಿ ಅಂಥ ಸಾಲಿಗ್ರಾಮಗಳನ್ನು ನರಸಿಂಹ ಸಾಲಿಗ್ರಾಮವೆಂದು ಗುರುತಿಸುವ ಸಂಪ್ರದಾಯವಿದೆ. ಅತ್ಯಂತ ದೊಡ್ಡದಾದ ಹಾಗೂ ನೋಡಲು ಅದ್ಭುತವಾದ ಸಾಲಿಗ್ರಾಮಶಿಲೆಯ ರೂಪವನ್ನು ಬದರಿಗೆ ಹೋಗುವ ಜ್ಯೋತಿರ್ಮಠದಲ್ಲಿ ಕಂಡು ಆಶ್ಚರ್ಯವೆನಿಸಿದೆ. ಇಂಥದೇ ಒಂದು ಸಾಲಿಗ್ರಾಮವು ಕಾಬೂಲಿನಲ್ಲಿದೆ ಎಂದು ಕೆಲವರು ಹೇಳುವುದನ್ನು ಕೇಳಿದ್ದೇನೆ.

ದುರಾಗ್ರಹದಿಂದ ಅಖಂಡ ಭಾರತವನ್ನು ಇಬ್ಭಾಗ ಮಾಡಲಾಯಿತು. ಈ ಮಾತನ್ನು ಎಲ್ಲರೂ ಬಲ್ಲವರಾಗಿರುವರು. ಇದರಿಂದ ನಾವು ಈ ಮೂಲ ಸ್ಥಾನ (ನರಸಿಂಹಾವತಾರದ ಸ್ಥಳ)ವನ್ನು ಕಳೆದುಕೊಂಡಿದ್ದೇವೆ. ಪ್ರಹ್ಲಾದರಾಜನಿಂದ ನಿರ್ಮಿಸವಾದ ಭವ್ಯ ದೇವಾಲಯವನ್ನು ಪಾಕಿಸ್ತಾನಿಗಳು ಇಂದು ತಮ್ಮ ವಿದ್ಯಾರ್ಥಿಗಳಿಗೆ ವಾಸಸ್ಥಾನವನ್ನಾಗಿ ಮಾಡಿಕೊಟ್ಟಿದ್ದಾರೆ. ಇದನ್ನು ಕೇಳಿದ ಭಕ್ತರು ಆ ದೇವಾಲಯವನ್ನು ಮರಳಿ ಪಡೆಯಲು ಪ್ರಯತ್ನ ನಡೆಸಿದ್ದಾರೆ. ಇದರಿಂದಾಗಿ ಮೂಲಸ್ಥಾನದ ಆಗುಹೋಗುಗಳನ್ನು ತಿಳಿದುಕೊಳ್ಳುವ ಕುತೂಹಲವು ಬೆಳೆಯುವಂತಾಯಿತು. ಯಾವ ಮೂಲಸ್ಥಾನವನ್ನು ಕುರಿತು ನಾವು ಯೋಚಿಸಬೇಕಾಗಿದೆಯೋ ಆ ಸ್ಥಾನದ ಪರಿಸರವು ಒಂದು ಕಾಲದಲ್ಲಿ ಹೇಗಿದ್ದೀತು ಎಂಬುದನ್ನು ಕುರಿತು ಚಿಂತಿಸುವುದು ಅತ್ಯಾವಶ್ಯಕವೆನಿಸಿತು.

ಒಂದು ಕಾಲದಲ್ಲಿ ಭಾರತದ ಭೂಪ್ರದೇಶಕ್ಕೆಲ್ಲಾ ಕಿರೀಟಪ್ರಾಯವಾಗಿ ಶೋಭಿಸುತ್ತಿದ್ದ ಅಫಘಾನಿಸ್ಥಾನ, ಸಿಂಧ್, ಪಂಜಾಬ, ಮೊದಲಾದ

ಪ್ರದೇಶಗಳೆಲ್ಲವೂ ಭಾರತದ ಅವಿಭಾಜ್ಯ ಅಂಗಗಳೆನಿಸಿಕೊಂಡಿದ್ದವು. ಸಾವಿರಾರು ವರುಷಗಳಿಂದ ಈ ಭಾಗಗಳ ಮೇಲೆ ಸತತವಾಗಿ ಅನ್ಯರ ಆಕ್ರಮಣಗಳಾದವು. ಇದರಿಂದಾಗಿ ಅನೇಕ ಬದಲಾವಣೆಗಳಾದುದೂ ಸಹಜ.

ಮಹಾಭಾರತದ ಕಾಲದಲ್ಲಿ ಈ ಪ್ರದೇಶ ಹೇಗಿತ್ತು? ಎಂಬುದನ್ನಾದರೂ ತಿಳಿದುಕೊಳ್ಳಬೇಕಲ್ಲ. ಕುರುವಂಶದ ಧೃತರಾಷ್ಟ್ರನ ಧರ್ಮಪತ್ನಿ ಎಂದೆನಿಸಿಕೊಂಡವಳು ಗಾಂಧಾರ ದೇಶದಿಂದ ಬಂದವಳಾಗಿದ್ದಳು. ಈ ಗಾಂಧಾರವನ್ನೇ ಕಂದಹಾರ ಎಂದು ಕರೆಯುತ್ತಿದ್ದರು. ಕೇಕೆಯ ದೇಶವನ್ನಾಳಿದವನು ಹಸ್ತಿನಾಪುರದ ಅರಸನಾಗಿದ್ದ ಶಂತನು ರಾಜನ ಸೋದರ. ಆತನ ಹೆಸರು ಬೃಹದ್ರಥ. ಈತನು ತನ್ನ ಮಾವನೊಂದಿಗೆ ಬಂದು ಇಲ್ಲಿಯೇ ನೆಲೆಸಿದನು. ಮದ್ರಾಧಿಪತಿಯಾದ ಶಲ್ಯನು ಸಿಯಾಲಕೋಟದವನು. ಪಂಜಾಬದ ದಕ್ಷಿಣ ಪ್ರದೇಶವನ್ನೇ ಕುರುಜಾಂಘಲ ಪ್ರದೇಶವೆಂದು ಗುರುತಿಸುತ್ತಿದ್ದರು. ಇಂದಿನ ಪಾಕಿಸ್ತಾನವೇ ಬಲೀಶ ರಾಜನ ರಾಜ್ಯವೆನಿಸಿಕೊಳ್ಳುತ್ತಿತ್ತು. ರಾವಳಪಿಂಡಿಯಿಂದ ಹದಿಮೂರು ಮೈಲಿನ ಅಂತರದಲ್ಲಿಯೇ ಜಗತ್ಪ್ರಸಿದ್ಧವಾದ ತಕ್ಷಶಿಲೆಯ ವಿದ್ಯಾಪೀಠವಿತ್ತು. ವಿಶ್ವವಿಖ್ಯಾತ ವೈಯಾಕರಣಿ ಎಂದೆನಿಸಿಕೊಂಡ ಪಾಣಿನಿ ಹುಟ್ಟಿದ ಸ್ಥಳವೂ ಪೇಶಾವರಕ್ಕೆ ತೀರ ಸಮೀಪದಲ್ಲಿರುವ ಲಾತ್ಯಾ ಎಂಬ ಗ್ರಾಮವಾಗಿರುವುದು. ಆಂಗ್ಲರು ಈ ದೇಶವನ್ನು ಬಿಟ್ಟು ಹೋದ ಬಳಿಕ ರಾಷ್ಟ್ರವು ಇಬ್ಭಾಗವಾಯಿತು. ಎಂದೂ ಮರೆಯಲಾಗದಂತಹ ದುರ್ಘಟನೆಗಳು ನಡೆದು ಹೋದವು. ಐವತ್ತು ಲಕ್ಷದಷ್ಟು ಹಿಂದುಗಳು ಪ್ರಾಣಭಯದಿಂದ ತಮ್ಮ ವಿತ್ತಾಪಹಾರಗಳನ್ನು ಬಹು ಕಾಲದಿಂದ ಪೂಜಿಸುತ್ತ ಬಂದಿದ್ದ ದೇವದೇವತೆಗಳನ್ನು ತೊರೆದು ಬಂದರು. ಹಿಂದೂಗಳಂತೆ ಸಿಖ್ಖರೂ ಸಹ ಆ ಭಾಗದಿಂದ ಹೊರ ಬಿದ್ದು ಇಂಗ್ಲಂಡ್, ಅಮೆರಿಕ, ಇಂಡೋನೇಷಿಯ, ಭಾರತ ಹೀಗೆ ಹರಿದು ಹಂಚಿ ಹೋದರು. ಯಾವ ಸ್ಥಳದಲ್ಲಿ ವಾಸ ಮಾಡತೊಡಗಿದರೋ ಆ ಸ್ಥಳದ ನಾಗರೀಕತ್ವವನ್ನು ಸಹ ಅವರು ಪಡೆದುಕೊಂಡರು. ಹೀಗಿದ್ದರೂ ಸಹ ತಮ್ಮ

ಧರ್ಮಗುರುಗಳಾಗಿದ್ದ ಗುರು ನಾನಕುಜೀಯವರ ಸ್ಮಾರಕವನ್ನು ನೋಡಿಕೊಂಡು ಹೋಗುವ ನೆಪದಿಂದ ಪಾಕಿಸ್ತಾನಕ್ಕೆ ಯಾತ್ರಾರ್ಥಿಗಳಾಗಿ ಬರತೊಡಗಿದರು. ಹೀಗೆ ಯಾತ್ರಿಕರಾಗಿ ಬಂದ ಸಿಖ್ಖರಿಗೆ ಪಾಕಿಸ್ತಾನದ ಪಂತಪ್ರಧಾನರಾಗಿದ್ದ ಜಿಯಾ ಉಲ್ ಹಕ್‌ರು ಅತ್ಯಂತ ಆತ್ಮೀಯತೆಯಿಂದ ಸ್ವಾಗತಿಸತೊಡಗಿದರು. ಈ ಗುಂಪಿನವರಿಂದ ಭಾರತ ವಿರೋಧಿ ಘೋಷಣೆಗಳೊಂದಿಗೆ ವಿದ್ರೋಹದ ಕಾರ್ಯಗಳು ನಡೆಯುವಂತೆ ಪ್ರಚೋದಿಸ ತೊಡಗಿದರು.

ಸಿಖ್ಖರು ಪಾಕಿಸ್ತಾನಕ್ಕೆ ಬಂದು ಹೋಗುವುದನ್ನು ಕಂಡು ಭಾರತಕ್ಕೆ ವಲಸೆ ಬಂದ ಹಿಂದೂಗಳೂ ಸಹ ತಮ್ಮ ಪೂರ್ವಜರು ಪೂಜಿಸುತ್ತ ಬಂದಿರುವ ದೇವ ಮಂದಿರಗಳನ್ನು ನೋಡಿಕೊಂಡು ಬರುವ ಸಂಕಲ್ಪ ಮಾಡಿದರು. ಆಗ ಜಿಯಾ ಉಲ್ ಹಕ್‌ರ ಬದಲಾಗಿ ಬೇನಜೀರ್ ಭುಟ್ಟೋ ಪ್ರಧಾನ ಮಂತ್ರಿಯ ಸ್ಥಾನದಲ್ಲಿದ್ದರು. ಎರಡೂ ದೂತಾವಾಸಗಳೊಂದಿಗೆ ಪತ್ರವ್ಯವಹಾರ ನಡೆಸಿದ ನಂತರ ಒಂದು ನೂರ ಐವತ್ತು ಜನರಿಂದ ಕೂಡಿದ ಹಿಂದುಗಳ ಗುಂಪಿಗೆ ಪಾಕಿಸ್ತಾನ ಪ್ರವೇಶ ಮಾಡಲು ಅವಕಾಶವು ಲಭಿಸಿತು.

ಹಿಂದುಗಳ ದೇವಾಲಯಗಳೆಲ್ಲ ಕಾಡನ್ನಾಶ್ರಯಿಸಿದವುಗಳಾಗಿದ್ದವು. ಭಾರತಕ್ಕೆ ಬರದೆ ಪಾಕಿಸ್ತಾನದಲ್ಲಿಯೇ ಉಳಿದ ಹಿಂದುಗಳ ಸಂಖ್ಯೆಯಂತೂ ನೂರಕ್ಕೆ ಒಂದಕ್ಕಿಂತಲೂ ಕಡಿಮೆಯ ಪ್ರಮಾಣದ್ದಾಗಿರುವುದು. ಆದುದರಿಂದ ಈ ದೇವಾಲಯಗಳ ಮೇಲ್ವಿಚಾರಣೆ ನೋಡಿಕೊಳ್ಳುವುದಂತೂ ಅವರಿಗೆ ಅಸಾಧ್ಯದ ಮಾತಾಗಿತ್ತು. ಶ್ರದ್ಧಾ ಭಕ್ತಿ, ವಿಶ್ವಾಸಗಳಿಂದ ಭಾರತೀಯ ಯಾತ್ರಿಕರ ತಂಡವು ನಾನಾ ವಿಧವಾದ ಕಷ್ಟ ನಷ್ಟಗಳನ್ನೆದುರಿಸುತ್ತಾ ಸಾಗಿದರು. ಈ ತಂಡದವರಿಂದ ಎಲ್ಲಿಯೂ ಗಲಾಟೆಗಳಾಗಲಿಲ್ಲ. ಈ ಜನರ ನಡೆನುಡಿಗಳನ್ನು ಕಂಡು ಸ್ಥಳೀಯರೂ ಕೂಡ ಇವರ ನೆರವಿಗೆ ಬರಲಾರಂಭಿಸಿದರು. ಇದರಿಂದ ಅತ್ಯಂತ ದುರ್ಗಮವಾದ ಹಾಗೂ ಸಾಹಸಮಯವಾದ ಯಾತ್ರೆಯು ಯಾವುದೇ ತರಹದ ಕುಂದುಕೊರತೆಗಳಿಲ್ಲದೆ, ಪೂರೈಸುವಂತಾಯಿತು.

ಈ ತಂಡದವರು ನಲ್ವತ್ತು ವರುಷಗಳ ಹಿಂದೆ ಬಿಟ್ಟು ಬಂದಿದ್ದ ದೇವಾಲಯದ ಇಂದಿನ ಸ್ಥಿಗತಿಗಳನ್ನು ಕುರಿತು ಸುದೀರ್ಘವಾದ ವರದಿಯೊಂದನ್ನು ಸಿದ್ಧಪಡಿಸಿ ಎರಡೂ ರಾಷ್ಟ್ರಗಳ ಪ್ರತಿನಿಧಿಗಳಿಗೆ ಅದನ್ನೊಪ್ಪಿಸಿದರು. ಪ್ರಹ್ಲಾದ ರಾಜನಿಂದ ನಿರ್ಮಿತವಾದ ದೇವ ಮಂದಿರವು ವಿದ್ಯಾರ್ಥಿಗಳ ವಸತಿಗೃಹವಾಗಿ ಪರಿವರ್ತನೆ ಗೊಂಡಿರುವುದನ್ನು ಪಂತ ಪ್ರಧಾನರ ಗಮನಕ್ಕೆ ಬರುವಂತೆ ನೋಡಿಕೊಂಡರು. ಅದನ್ನು ತಿಳಿದ ಬೆನಜೀರ್ ಭುಟ್ಟೋರವರು ತಕ್ಷಣವೇ ಆ ದೇವಾಲಯದಲ್ಲಿರುವ ವಿದ್ಯಾರ್ಥಿ ನಿಲಯವನ್ನು ತೆರವು ಮಾಡಿ ಹಿಂದುಗಳಿಗೆ ಅದನ್ನು ಮರಳಿ ಒಪ್ಪಿಸಬೇಕೆಂದು ಆಜ್ಞೆ ಮಾಡಿದರು. ಇದರಿಂದಾಗಿ ನರಸಿಂಹನ ಮೂಲಸ್ಥಾನವು ಪುನಃ ಹಿಂದುಗಳ ವಶಕ್ಕೆ ಬರುವಂತಾಯಿತು. ಎಂದಿನಂತೆ ಆ ದೇವನ ಪೂಜೆ ಆರಂಭಗೊಂಡಿತು. ಇತ್ತೀಚೆಗೆ ಹೆಚ್ಚಿನ ಸಂಖ್ಯೆಯಲ್ಲಿ ಹಿಂದುಗಳು ಪಾಕಿಸ್ತಾನಕ್ಕೆ ಹೋಗಿ ಆ ದೇವನ ದರ್ಶನ ಪಡೆದುಕೊಂಡು ಬರುವ ಅವಕಾಶವು ಪ್ರಾಪ್ತವಾಯಿತು.

ಇದು ಮೂಲಸ್ಥಾನದಲ್ಲಿರುವ ನರಸಿಂಹ ದೇವನ ಇತಿಹಾಸವೆಂದೆನಿಸುವುದು. "ಎಲ್ಲಿ ಶ್ರದ್ಧಾ ಭಕ್ತಿಗಳಿವೆಯೋ ಅಲ್ಲಿ ನಾನಿರುವೆ" ಎಂಬ ಆ ದೇವನ ವಾಕ್ಯವನ್ನು ನಿರಾಶ್ರಿತರಾಗಿ ಬಂದಿರುವ ಹಿಂದುಗಳು ಸಿದ್ಧಪಡಿಸಿ ತೋರಿಸಿರುವುದು ಬಹು ಹೆಮ್ಮೆಯ ವಿಷಯವೆನಿಸುವುದು.



# ಶಾರದಾದೇವಿ

ಲಕ್ಷ್ಮೀ ಹಾಗೂ ಸರಸ್ವತಿ. ಇವರಿಬ್ಬರೂ ಭಾರತೀಯರ ಸುಸಂಸ್ಕೃತ ಜೀವನದ ಆಧಾರಸ್ತಂಭರೆಂದು ಕರೆಸಿಕೊಳ್ಳುತ್ತಾರೆ. ರಾಷ್ಟ್ರಪುರುಷನಿಗೆ ಇವರು ಆಧಿ ದೇವತೆ ಹಾಗೂ ಪ್ರತ್ಯಧಿದೇವತೆಗಳಾಗಿ ಪೂರಕರೆನಿದ್ದಾರೆ. ಲಕ್ಷ್ಮಿಯ ಅನುಗ್ರಹವಿಲ್ಲದೆ ಜೀವನ ದುರ್ಲಭ. ಆದೇ ರೀತಿ ಆತ್ಮ ಶಾಂತಿಗೆ ಸರಸ್ವತಿಯ ಅನುಗ್ರಹ ಅತಿ ಮುಖ್ಯ. ಶಾರದೆಯ ಬಲದಿಂದಲೇ ಲಕ್ಷ್ಮಿ ಲೋಕ ಪ್ರಸಿದ್ಧಿಯನ್ನು ಪಡೆದಳು. ಲಕ್ಷ್ಮೀ ಹಾಗೂ ಸರಸ್ವತಿ ಇವರಿಬ್ಬರೂ ವೈದಿಕ ಸಂಪ್ರದಾಯದ ಮಡಿಲಲ್ಲಿ ಬೆಳೆದವರು. ಇವರಿಬ್ಬರಲ್ಲಿ ಹಿರಿಯಳಾದವಳಾರು?

ದೇವ ದಾನವರು ಸಮುದ್ರ ಮಂಥನ ಮಾಡಿದಾಗ ಲಕ್ಷ್ಮಿ ಆ ಕ್ಷೀರಸಾಗರ ಮಧ್ಯದಲ್ಲಿ ಕಾಣಿಸಿಕೊಂಡಳು. ಆ ದೇವಿಗೆ ದೇವ ದಾನವರು ಋಷಿಮುನಿಗಳು ಬಹು ಆದರದ ಸ್ವಾಗತ ತೋರಿದರು. ಇವರ ಮಧ್ಯದಲ್ಲಿ ಸರಸ್ವತಿಯೂ ಉಪಸ್ಥಿತಳಿದ್ದು ಅವಳು ಲಕ್ಷ್ಮಿಗೆ ತನ್ನ ಕೊರಳಲ್ಲಿದ್ದ ರತ್ನಾಭರಣವನ್ನು ತೊಡಿಸಿದಳೆಂಬ ಮಾತನ್ನು ಪುರಾಣಗಳು ತಿಳಿಸುತ್ತವೆ. ಅಂದಮೇಲೆ ಸರಸ್ವತಿಯು ಲಕ್ಷ್ಮಿಗಿಂತ ಹಿರಿಯಳು ಎಂದು ಭಾವಿಸಲು ಅವಕಾಶವಿದೆ.

ಸರಸ್ವತಿಯನ್ನು ಶಾರದಾ ಎಂಬ ಹೆಸರಿನಿಂದಲೂ ಸಂಬೋಧಿಸಲಾಗಿದೆ. ಅವಳು ಬ್ರಹ್ಮಶಕ್ತಿ ಎಂದೆನಿಸಿದರೂ ಸ್ವತಂತ್ರಳು.

ಬೌದ್ಧರು, ಜೈನರು, ಶಾಕ್ತರು ಈ ದೇವಿಯ ಭಕ್ತರು. ಪ್ರಜ್ಞಾಪಾರಮಿತಾ, ಮಂಜುಶ್ರೀ, ವಜ್ರಶಾರದೆ ಎಂಬೆಲ್ಲ ಹೆಸರಿನಿಂದ ಬೌದ್ಧರು ಕರೆದರೆ ಶ್ರುತದೇವಿ, ವಾಗೀಶ್ವರೀ, ವಾಗ್ವಾದಿನಿ, ಭಾರತಿ ಎಂಬ ಹೆಸರಿನಿಂದ ಜೈನರು ಕರೆದಿದ್ದಾರೆ. ಶಾಕ್ತರೂ ಇವಳನ್ನು ಸ್ತೋತ್ರ ಮಾಡಿದ್ದಾರೆ.

ಚಂದ್ರ ಪ್ರಭಾಂ ನೀಲಗಲ ಪ್ರಯಾನಾಂ
ತ್ರಿನೇತ್ರ ರಮ್ಯಾಂ ಸ್ವಗುಣಾ ಪ್ರತುಷ್ಟಾಂ
ಪದ್ಮಾಸನಾಂ ತ್ವಾಂ
ಪ್ರಯುಜೇ ಕ್ಷಮಾಲಾ
ಸತ್ಪುಸ್ತಕಾಢ್ಯಾಂಚ ಮಯೂರ ಚಾರೇ

ಈ ಸ್ತೋತ್ರದಲ್ಲಿ ಅವಳು ವೀಣಾಪಾಣಿವಾಗಿರುವ ಪ್ರಜ್ಞಾಶಾಲಿಯಾಗಿದ್ದಾಳೆ. ನಮ್ಮ ನಾಡಿನಲ್ಲಿ ಶೃಂಗೇರಿಯಲ್ಲಿರುವ ಶಾರದೆಯ ರೂಪವು ಇದೇ ರೀತಿಯಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಿದೆ.

ಸರಸ್ವತಿಯಷ್ಟು ಪ್ರಾಚೀನ ದೇವತೆ ಬೇರೊಬ್ಬಳಿಲ್ಲ, ಮಾನವನಿಗೆ ಎಂದು ವಾಣಿಯ ಸಾಕ್ಷಾತ್ಕಾರವಾಯಿತೋ ಅಂದೇ ಈ ದೇವಿಯ ಅನುಗ್ರಹವು ಆತನ ಮೇಲಾಯಿತು. ವಿಶ್ವದಲ್ಲಿ ತಾನು ಕಂಡ ವಿಸ್ಮಯಗಳನ್ನೆಲ್ಲ ಆತನು ಗಾಥಾರೂಪದಲ್ಲಿ ಹೇಳತೊಡಗಿದ. ಇದರಿಂದಾಗಿ ಮಾನವನಿಗೊಲಿದ ಮೊದಲು ದೇವತೆ ಎಂದರೆ ಸರಸ್ವತಿ ಎಂಬ ಮಾತಿನಲ್ಲಿ ಯಾವ ಸಂದೇಹವೂ ಇಲ್ಲ. ವಾಣಿಯ ಸಂಸ್ಕಾರವಾದಂತೆಲ್ಲ ಸರಸ್ವತಿಯ ಸಾಕ್ಷಾತ್ಕಾರವು ಆತನಿಗೆ ಲಭಿಸತೊಡಗಿತು. ಋಷಿಗಳ ಹೃದಯದಿಂದ ಹೊರಸೂಸಿ ಬಂದ ಆನಂದಾದಿಭಾವಗಳೆಲ್ಲ ಮಂತ್ರಗಳಾಗಿ ಪರಿಣಮಿಸಿದವು. ಯಜ್ಞ, ಯಾಗಾದಿ ಕರ್ಮಗಳಿಂದ ಅವರು ಸರಸ್ವತಿಯ ಅನುಗ್ರಹವನ್ನು ಪಡೆಯತೊಡಗಿದರು.

ವೇದ ಕಾಲದ ದೇವತೆಯಾದ ಸರಸ್ವತಿಯನ್ನು ಕುರಿತು ಋಗ್ವೇದದಲ್ಲಿ ಸುಮಾರು ಮೂವತ್ತು ಮೂವತ್ತೈದು ಸ್ಥಳಗಳಲ್ಲಿ ಉಲ್ಲೇಖವು ದೊರೆಯುತ್ತದೆ. ಆದರೆ ಬಹು ಭಾಗದ ವರ್ಣನೆಯು

ಪ್ರವಾಹವನ್ನೇ ಸೂಚಿಸುತ್ತದೆ. "ಅಂಬೀತಮೇ ನದೀತಮೇ ದೇವೀತಮೇ ಸರಸ್ವತಿ" ಎಂಬ ಮಂತ್ರವು ಸರಸ್ವತಿ ಎಂಬ ನದಿಯನ್ನು ಕುರಿತಾಮದು. ಪ್ರಾಣೋದೇವಿ ಸರಸ್ವತೀ ವಾಜೀಭಿರ್ವಾಜಿನೀವತಿ - ಎಂಬ ಮಂತ್ರವು ಸರಸ್ವತಿಯನ್ನೇ ಕುರಿತಾದುದು. ಇವಳು ಬುದ್ಧಿಗೆ ಚೈತನ್ಯದಾಯಿಯಾದವಳು. ಸರಸ್ವತಿಗೆ ಭಾರತಿ ಎಂಬ ಹೆಸರೂ ಇದೆ. ಋಷಿಗಳು ಯಾವ ನೆಲದಲ್ಲಿ ಮೊದಲು ಯಜ್ಞ ಕುಂಡಗಳನ್ನಾರಂಭಿಸಿದರೋ ಆ ಯಜ್ಞಕ್ಕಾಗಿ ಯಾವ ಅಗ್ನಿಯನ್ನು ಸೃಷ್ಟಿ ಮಾಡಿದರೋ ಆ ಅಗ್ನಿಯನ್ನು ಭಾರತಿ ಎಂಬುದಾಗಿ ಕರೆದಿದ್ದಾರೆ. ಸರಸ್ವತಿ ನದಿಯ ಧಾರೆಯ ಮೇಲೆ ಪ್ರಾರಂಭವಾದ ಈ ಅಗ್ನಿಕಾರ್ಯದಲ್ಲಿ ಅವರು ಅನೇಕ ಋಚಗಳನ್ನು ಗಾಥಾರೂಪದಲ್ಲಿ ಹಾಡಿ ಕೊಂಡಾಡತೊಡಗಿದರು.

ಪುರಾಣಕಾಲದಲ್ಲಿ ವಾಣಿ ಸರಸ್ವತಿ ಇವರಿಬ್ಬರಲ್ಲಿ ಏಕರೂಪವನ್ನು ಕಾಣಬೇಕೆನಿಸಿತು. ಅದಕ್ಕಾಗಿಯೆ ಕಥೆಯೊಂದು ನಿರ್ಮಾಣಗೊಂಡಿತು. ಪದ್ಮ ಪುರಾಣದಲ್ಲಿಯ ಸೃಷ್ಟಿಖಂಡವೆಂಬ ಭಾಗದಲ್ಲಿ ನಾವು ಇದನ್ನು ಕಾಣಬಹುದು.

ವಿಶ್ವದಲ್ಲಿ ವಡಬಾಗ್ನಿಯು ಕಾಣಿಸಿಕೊಂಡಿತು. ಮಾನವನಿಗೇ ಅಲ್ಲ, ದೇವತೆಗಳಿಗೂ ಸಹ ಅದರ ತಾಪವನ್ನು ಸಹಿಸಲಸಾಧ್ಯವಾಯಿತು. ದೇವತೆಗಳು ಆ ಅಗ್ನಿಯನ್ನು ಸಮುದ್ರದಲ್ಲಿ ಹಾಕುವಂತೆ ಸರಸ್ವತಿಯನ್ನು ಕೇಳಿಕೊಂಡರು. 'ನಾನು ಕುಮಾರಿ ಅಗ್ನಿಸ್ಪರ್ಶದಿಂದ ನನ್ನ ಕೌಮಾರ್ಯ ನಾಶವಾಗುವುದು. ಆದುದರಿಂದ ಈ ಕೆಲಸವು ನನ್ನಿಂದಾಗದು' ಎಂದು ಹೇಳಿದಾಗ ದೇವತೆಗಳ ಗುಂಪು ಬ್ರಹ್ಮನನ್ನು ಕಂಡು ಸರಸ್ವತಿಯಿಂದ ಈ ಕಾರ್ಯವನ್ನು ಮಾಡಿಸುವಂತೆ ಪ್ರಾರ್ಥಿಸಿದರು. ವಿಧಾತನು ಸರಸ್ವತಿಗೆ ಅಪ್ಪಣೆ ಮಾಡಿದ. ಸರಸ್ವತಿಗೆ ಬಲು ದುಃಖವಾಯಿತು. ಅವಳು ಜಲರೂಪದಿಂದ ಹರಿಯತೊಡಗಿದಳು. ಉತ್ತಂಕ ಮುನಿಯ ಆಶ್ರಮದತ್ತ ಬಂದಾಗ ಅವಳಿಗೆ ವಿಷ್ಣುವಿನ ದರ್ಶನವು ಲಭಿಸಿತು. ವಡವಾಗ್ನಿಯನ್ನು ಆ ದೇವನು ಸುವರ್ಣಪಾತ್ರೆಯಲ್ಲಿ ಹಿಡಿದಿಟ್ಟು ಅದನ್ನು ಸರಸ್ವತಿಗೆ ಒಪ್ಪಿಸಿದ, ಮುಂದೆ ಪಶ್ಚಿಮಕ್ಕೆ ಹರಿದು ಪುಷ್ಕರ ಸರೋವರದಲ್ಲಿ

ಕಾಣಿಸಿಕೊಂಡು ಗೊಂಡಾರಣ್ಯವನ್ನು ಪ್ರವೇಶ ಮಾಡಿದಳು. ಈ ಕಥೆಯಿಂದ ಬ್ರಹ್ಮಕುಮಾರಿಯಾಗಿದ್ದ ಸರಸ್ವತಿಯು ಕಾರಣಾಂತರಗಳಿಂದ ಜಲರೂಪಧಾರಣ ಮಾಡಿ ಹರಿದಳು ಎಂಬುದು ಸಾಮಾನ್ಯ ಅರ್ಥವಾಗಿ ತೋರುತ್ತದೆ.

"ದೇವಿಂ ವಾಚಮಜನಯಂತ ದೇವಾಃ" ವಾಣಿಯನ್ನು ದೇವತೆಗಳು ಸೃಷ್ಟಿಸಿದರು. ಇವಳು ಮಹಾಭಾರತದಲ್ಲಿ ಬ್ರಹ್ಮನ ಮಗಳಾಗಿ ತೋರಿದಳು. ದೇವೀ ಭಾಗವತದಲ್ಲಿ ಇವಳಿಗಾಗಿಯೇ ಸ್ವತಂತ್ರ ಕಥೆ ಹುಟ್ಟಿತು.

ಶ್ರೀ ಕೃಷ್ಣನ ಸಖಿಯಾಗಿದ್ದ ರಾಧಾಳ ಜೀವಾತ್ಮದಿಂದ ಸರಸ್ವತಿಯ ಜನನವಾಯಿತು. ಮುಂದೆ ಕೃಷ್ಣನನ್ನು ಹೊಂದುವ ತವಕ, ಆಗ ಆತನು ದ್ವಿಭುಜ ರೂಪದ ನಾರಾಯಣನ ಧ್ಯಾನ ಮಾಡುವುದರಿಂದ ಕೃತಾರ್ಥಳಾಗುವೆ ಎಂದು ಸಮಾಧಾನ ಪಡಿಸಿದ. ಸಂಸ್ಕೃತ ಸಾಹಿತ್ಯದಲ್ಲಿ ಗುಹ್ಯಾರ್ಥವನ್ನು ಸೂಚಿಸುವ ಅನೇಕ ರಚನೆಗಳಿವೆ, ಇಲ್ಲಿ ರಾಧಾ ಎಂದರೆ ಆರಾಧನೆ ಎಂದರ್ಥ. ಆರಾಧನೆ ಉಪಾಸನೆಗಳಿಂದ ಸಿದ್ಧಿಯನ್ನು ಹೊಂದಬಹುದು.

ಸರಸ್ವತಿಯು ಗಾಯತ್ರಿ ಸಾವಿತ್ರಿ ಎಂಬ ರೂಪದಿಂದ ಬ್ರಹ್ಮ ಪತ್ನಿಯರೊಂದಿಗೆ ವ್ರತಜೀವಿ ಎಂದೆನಿಸಿಕೊಂಡಳು. ಇದರಿಂದಾಗಿ ಪರ್ಯಾಯ ರೂಪದಲ್ಲಿ ಬ್ರಹ್ಮಪತ್ನಿ ಎಂದೆನಿಸಿಕೊಂಡಳು. ಯಜುರ್ವೇದದಲ್ಲಿ ಅಶ್ವಿನೀ ದೇವತೆಗಳೊಂದಿಗೆ ಇವಳ ಸಂಬಂಧವನ್ನು ಹೇಳಲಾಗಿದೆ. ಕೆಲವು ಪುರಾಣಗಳಲ್ಲಿ ಇವಳು ಗಣಪತಿಯ ಅರ್ಧಾಂಗಿ ಎಂದು ವರ್ಣಿಸಲಾಗಿದೆ. ಮತ್ತೆ ಕೆಲವು ಕಡೆಗಳಲ್ಲಿ ಲಕ್ಷ್ಮಿಯಂತೆ ಇವಳೂ ವಿಷ್ಣು ಪತ್ನಿಯನ್ನಾಗಿ ವರ್ಣಿಸಿರುವುದೂ ಉಂಟು. ಈ ಎಲ್ಲ ಗೊಂದಲಗಳಿಂದಾಗಿ ಅವಳ ನಿಜವಾದ ವಾಸಸ್ಥಳ ಯಾವುದು? ಎಂಬುದನ್ನು ಹೇಳುವುದು ಬಹು ಕಠಿಣವೆನಿಸುತ್ತದೆ.

ದೇವತೆಗಳಿಗೆಲ್ಲ ಒಂದಿಲ್ಲೊಂದು ವಾಹನವಿದ್ದೇ ಇದೆ. ಬ್ರಹ್ಮನಿಗೆ ಹಂಸ ವಾಹನ. ಅಂದಮೇಲೆ ಇದು ಸರಸ್ವತಿಯ ತವರಿನ ಹಕ್ಕಿ

ಎಂದಾಯಿತು. ನಮೋ ಬ್ರಹ್ಮ ಕುಮಾರಿ, ಹಂಸಾರೂಢ ವಾಗೀಶ್ವರಿ ಎಂಬ ಸ್ತುತಿವಾಚಕ ಸ್ತೋತ್ರಗಳಲ್ಲಿ ಅವಳು ಹಂಸವಾಹಿನಿಯಾಗಿದ್ದು ಸರೋವರದಲ್ಲಿ ವಿಹಾರ ಮಾಡುವವಳೆಂದು ರಾಜ ತರಂಗಿಣಿಕಾರ ವರ್ಣನೆಮಾಡಿದುದನ್ನು ಕಾಣಬಹುದು. ಏಳನೆ ಶತಮಾನಕಾಲದಲ್ಲಿದ್ದ ನಾಣ್ಯಗಳ ಮೇಲೆ ಸರಸ್ವತಿಯ ಪಾದದಡಿಯಲ್ಲಿ ಹಂಸವಿರುವುದನ್ನು ಕಾಣಬಹುದೆಂದು ಪ್ರಾಧ್ಯಾಪಕ ಗೊಡೆಯವರು ಹೇಳುತ್ತಾರೆ. ಹದಿನೇಳನೇ ಶತಮಾನದವರೆಗೆ ಬರೆಯಲ್ಪಟ್ಟ ಹಸ್ತಲಿಖಿತ ಗ್ರಂಥಗಳ ಮೇಲೆಲ್ಲ ಹಂಸವಾಹಿನಿಯಾದ ಸರಸ್ವತಿ ಚಿತ್ರಬಿಡಿಸಿದುದನ್ನು ಕಾಣಬಹುದು. ಜೈನರ ಪ್ರಥಮ ತೀರ್ಥಂಕರರೆನಿಸಿದ ಭಗವಾನ್ ವೃಷಭ ದೇವನು ಆರಾಧಿಸಿದ ದೇವತೆಯ ಹೆಸರು ಚಕ್ರೇಶ್ವರಿ ಎಂದಿದ್ದು ಅವಳ ವಾಹನವೂ ಸಹ ಹಂಸವೇ ಇರುವುದರಿಂದ ಅವಳು ಸರಸ್ವತಿ ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ನವಿಲಿನ ಮೇಲೆ ಕುಳಿತ ಚಿತ್ರಗಳನ್ನೂ ನಾವು ಕಾಣುತ್ತೇವೆ. ಗಣಪತಿ ಹಾಗೂ ಸರಸ್ವತಿಯರನ್ನು ಕಾಣುತ್ತೇವೆ. ಗಣಪತಿ ಹಾಗೂ ಸರಸ್ವತಿ ಇವರಿಬ್ಬರೂ ಪ್ರಥಮ ವಂದ್ಯರೆಂಬುದಾಗಿ ಮಕ್ಕಳಿಗೆ ಪಾಠ ಹೇಳಿ ಕೊಡುತ್ತೇವೆ. ಹಂಸವಾಹಿನಿಯಾದ ಶಾರದೆಗೆ ಮಯೂರ ವಾಹನವು ಬಂದುದಾದರೂ ಹೇಗೆ ಎಂಬ ವಿಚಾರ ಮಾಡುವುದು ಅಗತ್ಯವೆನಿಸುತ್ತದೆ.

ಜೈನರು ಶ್ರುತದೇವಿ, ವಿದ್ಯಾದೇವಿ ಎಂಬ ದೇವತೆಯನ್ನು ಪೂಜಿಸುತ್ತಾರೆ. ಅವಳು ಬೇರಾರೂ ಅಲ್ಲ, ಸರಸ್ವತಿಯೇ ಆ ಹೆಸರಿನಿಂದ ಪೂಜೆಗೊಳ್ಳುವುದುಂಟು. ಶ್ವೇತಾಂಬರ ಜೈನರ ಸರಸ್ವತಿಯು ಶುಭ್ರಮಯವಾದ ಹಂಸವಾಹಿನಿಯಾದರೆ ದಿಗಂಬರ ಜೈನರ ದೇವತೆಯು ಮಯೂರ ಅಂದರೆ ನವಿಲನ್ನೇ ತನ್ನ ವಾಹನವನ್ನಾಗಿ ಮಾಡಿಕೊಂಡಿದ್ದಾಳೆ. ಜೈನರ ಪ್ರಭಾವದಿಂದಾಗಿ ಮಯೂರ ವಾಹಿನಿಯಾದ ಸರಸ್ವತಿಯನ್ನು ಹಿಂದುಗಳೆಲ್ಲರೂ ಪೂಜಿಸುತ್ತ ಬಂದಿರಬಹುದೆಂಬ ಮಾತಿಗೆ ಅವಕಾಶವಿದೆ. ಸರ್ವರಿಗೂ ಪ್ರಿಯವಾದ ಶಾರದೆಯ ಸ್ತೋತ್ರವು ಈ ಕೆಳಗಿನಾಗಿದೆ.

ಯಾಕುಂದೇಂದು ತುಷಾರ ಹಾರ ಧವಲಾ
ಯಾ ಶುಭ್ರ ವಸ್ತ್ರಾನ್ವಿತಾ
ಯಾ ವೀಣಾ ವರ ದಂಡ ಮಂಡಲ ಕರಾ
ಯಾ ಶ್ವೇತ ಪದ್ಮಾಸನಾ
ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿಃ
ದೇವೈಃ ಸದಾ ವಂದಿತಾ
ಸಾ ಮಾಂ ಪಾತು ಸರಸ್ವತೀ ಭಗವತೀ
ನಿಃಶೇಷ ಜಾಡ್ಯಾಪಹ

ಅವಳು ಶುಭ್ರವಸ್ತ್ರ ಧರಿಸಿದವಳು. ಹಂಸ ವಾಹಿನಿಯಾದವಳು. ನಿರ್ಮಲವಾದ ಜ್ಞಾನವನ್ನೀಯುವವಳು ಎಂದೆಲ್ಲ ಈ ಧ್ಯಾನ ಶ್ಲೋಕದಲ್ಲಿ ವರ್ಣಿಸಲಾಗಿದೆ.

ಅಶ್ವೀಜ ಮಾಸದ ಶುಕ್ಲ ಪಕ್ಷದಲ್ಲಿ ಬರುವ ಮೂಲಾ ನಕ್ಷತ್ರದ ದಿನ ಪ್ರತಿಯೊಬ್ಬರ ಮನೆಯಲ್ಲಿಯೂ ಈ ದೇವಿಯನ್ನು ಅಹ್ವಾನಿಸಲಾಗುತ್ತದೆ. ಪೂರ್ವಾ ಹಾಗೂ ಉತ್ತರಾಷಾಢಾ ಈ ದಿನಗಳಲ್ಲಿ ಪೂಜೆ, ಬಲಿ ಇತ್ಯಾದಿಗಳ ಕಾರ್ಯವು ನಡೆಯುತ್ತದೆ. ಶ್ರವಣೂ ನಕ್ಷತ್ರವಿದ್ದಾಗ ವಿಸರ್ಜನೆ ಮಾಡುತ್ತಾರೆ.

ಸರಸ್ವತಿಯು ಅಜ್ಞಾನವನ್ನು ದೂರ ಮಾಡಿ ದಿವ್ಯಜ್ಞಾನ ಪ್ರಕಾಶವನ್ನೀಯುವ ದೇವತೆ. ಜಡತತ್ವವನ್ನು ದೂರಮಾಡಿ ಚೈತನ್ಯವನ್ನಿತ್ತು ಮಾರ್ಗದರ್ಶನ ಮಾಡುವ ಮಹಾದೇವತೆ ಇವಳು. ಆದುದರಿಂದ ಭಾರತೀಯರು ಲಕ್ಷ್ಮೀಗೆ ಯಾವ ಸ್ಥಾನ ಮಾನವನ್ನಿಯುತ್ತಾರೆಯೋ ಅದೇ ಸ್ಥಾನಮಾನಗಳನ್ನು ಸರಸ್ವತಿಗೂ ಕೊಡುತ್ತ ಬಂದಿದ್ದಾರೆ. ಅವಳ ಅನುಗ್ರಹದಿಂದ ಸಕಲ ಚರಾಚರಗಳ ಜ್ಞಾನದ ಅರಿವು ನಮಗೆ ಲಭಿಸುತ್ತದೆ. ಆದುದರಿಂದ ಸರಸ್ವತಿಗೆ ನಮಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ.



# ಹನುಮದ್ವೈಭವಂ

ಅಂದು ಸುಗ್ರೀವನ ರಾಜಧಾನಿ ಎಂದು ಕರೆಸಿಕೊಂಡ ನೆಲ ಇಂದು ಕನ್ನಡ ನಾಡಿನ ನಡುಭೂಮಿ. ಅಭೇದ್ಯ ಕೋಟೆಯಂತೆ ಎದ್ದು ನಿಂತಿರುವ ಋಷ್ಯಮೂಕ ಪರ್ವತಾವಳಿಗಳ ತಪ್ಪಲು ಪ್ರದೇಶವೆಲ್ಲ ಒಂದು ಕಾಲದಲ್ಲಿ ವಾಲಿ ಸುಗ್ರೀವರ ಮಹಾ ಸಾಮ್ರಾಜ್ಯ ಎಂದು ಕರೆಸಿಕೊಳ್ಳುತ್ತಿತ್ತು. ಹನುಮಂತ ಸುಗ್ರೀವನ ಪರಮಾಪ್ತ ಸಚಿವ. ಆರ್ಯಪುರುಷ ಶ್ರೀರಾಮಚಂದ್ರನಿಗೆ ಇವರಿಬ್ಬರೂ ಪ್ರಾಣಪ್ರಿಯರು. ಶ್ರೀರಾಮಚಂದ್ರನ ಪಂಚಾಯತನದಲ್ಲಿ ಈ ಸುಗ್ರೀವ ಹನುಮಂತರಿಗೂ ವಿಶೇಷ ಸ್ಥಾನವಿದೆ. ಇನ್ನು ಬೆಂಗಳೂರಿನಲ್ಲಿ ಸುಗ್ರೀವನ ದೇವಸ್ಥಾನವು ಕೂಡ ಒಂದುಂಟು.

ಆಂಜನೇಯನು ಯಾವ ಕಾಲಯದಲ್ಲಿಯೂ ಜಾತಿ ಮತ ಎಂಬ ಸಂಕುಚಿತ ಸಂಕೋಲೆಗಳಿಗೆ ಒಳಗಾದವನಲ್ಲ, ಎಂಥ ಜಾಗ್ರತ ಸ್ಥಳದಲ್ಲಿಯೂ ಸಹ ಈತನು ಹೂವಾಡಿಗರಿಂದಲೋ, ಕುರುಬರಿಂದಲೋ ಅಥವಾ ಸಾತಾನಿಗರಿಂದಲೋ ಪೂಜೆ ಸ್ವೀಕರಿಸುವುದನ್ನೇ ಹೆಚ್ಚಾಗಿ ಮೆಚ್ಚುತ್ತಾನೆ. ಬಡವರು, ಶ್ರೀಮಂತರು ಎಂಬ ಬೇಧಭಾವವು ಇವನಿಗಿಲ್ಲ. ಭಾರತೀಯರ ಈ ದೇವನು ಒಂದು ರೀತಿಯಲ್ಲಿ ಸಮಾಜವಾದಿ ಸ್ವರೂಪೋದ್ಧಾರಕನೆಂದರೂ ತಪ್ಪಾಗುವುದಿಲ್ಲ. ಹರಿಜನ ಗಿರಿಜನ ಎಲ್ಲರಿಗೂ ಈತ ಬೇಕು. ಎಲ್ಲರಿಂದಲೂ ಈತ ಪೂಜೆಗೊಂಡಾಗಲೇ ಈತನಿಗೆ ಸಮಾಧಾನ.

ವ್ಯಾಸರಾಯರು ವಿಜಯನಗರ ಸಾಮ್ರಾಜ್ಯಕ್ಕೆ ಬಂದ ಕುಪಯೋಗವನ್ನು ನಿವಾರಿಸಿದರು. ಚಕ್ರತೀರ್ಥದ ಬಲಭಾಗಕ್ಕೆ ಇವರ ಮಠವಿತ್ತು. ಪ್ರತಿದಿನ ಇವರು ಚಕ್ರತೀರ್ಥದಲ್ಲಿ ಮಿಂದು ಕೋದಂಡರಾಮನ ಎಡಭಾಗದಲ್ಲಿರುವ ಬೃಹದಾಕಾರದ ಬಂಡೆಯಿಂದ ಒಂದು ಕೋತಿಯು ಬಂದು ಅವರ ಸುತ್ತ ಸುಳಿಯತೊಡಗಿತು. ಸ್ವಾಮಿಗಳು ಕಣ್ತೆರೆದಾಗ ಅದು ಮಾಯವಾಗುತ್ತಿತ್ತು. ಹೀಗೆ ಬಹುದಿನ ಸಾಗಿತು. 'ಈ ಕಣ್ಣು ಮುಚ್ಚಾಟದ ರಹಸ್ಯವೇನು?' ಎಂದು ಅವರು ಚಿಂತಿಸತೊಡಗಿದರು. ಆಗ "ನೀನೇ ವರಗುರು ಮುಖ್ಯಪ್ರಾಣ" ಎಂದು ಅನನ್ಯವಾಗಿ ಸ್ತೋತ್ರ ಮಾಡಿದರು. ಕೊನೆಗೊಂದು ದಿನ ಅವರ ಸ್ವಪ್ನದಲ್ಲಿ ಹನುಮಂತನು ಕಾಣಿಸಿಕೊಂಡು "ರಾಮರ ಪ್ರಥಮ ದರ್ಶನ ಈ ಬಂಡೆಯ ಮೇಲೆಯೇ ನಮಗಾಗಿದೆ. ಆದುದರಿಂದ ಇಲ್ಲಿ ನಮ್ಮ ಸ್ಥಾಪನೆಯ ಕಾರ್ಯವಾಗಬೇಕಾಗಿದೆ" ಎಂಬ ಸೂಚನೆಯು ಅವರಿಗಾಯಿತು.

ಮರುದಿನ ಅವರು ಆ ಬಂಡೆಯ ಮೇಲೆ ಅಂಗಾರದಿಂದ ಅಂಜನೇಯ ವಿಗ್ರಹವನ್ನು ಬಿಡಿಸಿ ಧ್ಯಾನಾಸಕ್ತರಾದರು. ಕಣ್ತೆರೆದಾಗ ಅದೆಲ್ಲ ಅಳಿಸಿ ಹೋಗಿತ್ತು. ಹೀಗೆ ಹನ್ನೆರಡು ಸಲ ನಡೆದು ಹೋಯಿತು. ಆಗ ಗುರುಗಳು ಒಂದು ಮಂಗನ ಬಾಲ ಇನ್ನೊಂದು ಹಿಡಿದಂತೆ ಹನ್ನೆರಡು ಮಂಗಗಳ ವರ್ತುಲಾಕಾರವನ್ನು ರಚಿಸಿದರು. ಅದರ ಮಧ್ಯದಲ್ಲಿ ಆರು ಕೋನಗಳುಳ್ಳ ಯಂತ್ರವನ್ನು ಮಾಡಿ ಮಧ್ಯದಲ್ಲಿ ಯೋಗಾಸನಾಯುಕ್ತನಾದ ಹನುಮಂತನು ಜಪಮಾಲೆ ಹಿಡಿದಿರುವಂತೆ ಚಿತ್ರವನ್ನು ಬಿಡಿಸಿದರು. ಆತನ ಬಾಲವನ್ನೇ ಸುತ್ತಿ ಅವನಿಗೆ ಕಿರೀಟವನ್ನಾಗಿ ಮಾಡಿದರು. ಯಂತ್ರದ ಮಧ್ಯ ಭಾಗದಲ್ಲಿ ಕೋಟಿ ಮಂತ್ರಗಳನ್ನು ತುಂಬಿದರು. ಆಗ ಸ್ವಾಮಿ ಅಲ್ಲಾಡದೆ ಭದ್ರವಾಗಿ ಕುಳಿತುಕೊಂಡ. ಹೀಗೆ ಮಂಡಲದಲ್ಲಿರುವ ಹನುಮಂತನನ್ನು ಭಾರತದಲ್ಲಿ ಅಷ್ಟೇ ಅಲ್ಲ ವಿಶ್ವದಲ್ಲಿಯೇ ಬೇರಾವ ಮೂಲೆಯಲ್ಲಿಯೂ ನಾವು ಕಾಣಲಾರೆವು. ಈ ವಿಗ್ರಹದ ಪೂಜೆ ಮಹಾಮಂಗಳಕಾರಕ ಎಂದು ವ್ಯಾಸರಾಯರೇ ಒಂದು ಸ್ತೋತ್ರದಲ್ಲಿ ಹೇಳಿರುವುದುಂಟು.

ವ್ಯಾಸರಾಯರು ತಮ್ಮ ಜೀವಿತ ಕಾಲದಲ್ಲಿ ಏಳುನೂರು ಆಂಜನೇಯನನ್ನು ಪ್ರತಿಷ್ಠಾಪಿಸಿದರೆಂದು ಹೇಳುತ್ತಾರೆ. ಮುಳಬಾಗಿಲು ನರಸಿಂಹ ತೀರ್ಥದಲ್ಲಿರುವ ಆಂಜನೇಯ ಅವರಿಂದ ಪ್ರತಿಷ್ಠಾಪಿಸಲ್ಪಟ್ಟ ಆಂಜನೇಯರಲ್ಲಿ ದ್ವಿತೀಯ ಸ್ಥಾನ ಪಡೆದಿದ್ದಾನೆ. ಸಾಮಾನ್ಯವಾಗಿ ವ್ಯಾಸರಾಯರಿಂದ ಪ್ರತಿಷ್ಠಾಪಿತವಾದ ವಿಗ್ರಹಗಳಿಗೆ ಬಾಲದಲ್ಲಿ ಗಂಟೆ, ತಲೆಯಲ್ಲಿ ಜುಟ್ಟು ಹಾಗೂ ಕರ್ಣಕುಂಡಲಗಳು ಇರುತ್ತವೆ. ಚಕ್ರತೀರ್ಥದಲ್ಲಿರುವ ಯಂತ್ರೋದ್ಧಾರ ಪ್ರಾಣದೇವರನ್ನು ಇವರು ಕ್ರಿ.ಶ. ೧೫೦೦ರಲ್ಲಿ ಪ್ರತಿಷ್ಠಾಪಿಸಿದರು. ಮೊದಲು ಈ ವಿಗ್ರಹ ಬಯಲಿನಲ್ಲಿತ್ತು. ಆನಂತರ ಸಾಳ್ವ ಇಮ್ಮಡಿ ನರಸಿಂಹ ಈ ದೇವನಿಗೆ ಮಂಟಪ ರಚಿಸಿದ. ಈ ದೇವನ ಪ್ರತಿಷ್ಠಾಪನಾನಂತರವೇ ಕೃಷ್ಣದೇವರಾಯನು ಪಟ್ಟಕ್ಕೆ ಬಂದನು. ಪೂಜೆಗೊಳ್ಳುತ್ತಿದ್ದಂತೆ ಸ್ವಾಮಿಗಳು ಬರೆದ ಬೀಜಾಕ್ಷರಗಳು ಹಾಗೂ ಸುತ್ತಲಿನ ಕೋತಿಗಳು ಒಂದೊಂದಾಗಿ ಸ್ಪಷ್ಟ ರೀತಿಯಿಂದ ಕಾಣಲಾರಂಭಿಸಿದವು. ಇತ್ತೀಚೆಗೆ ಈ ವಿಗ್ರಹದ ಮುಂಭಾಗದಲ್ಲಿ ಹನುಮ, ಭೀಮ ಮಧ್ವ ಸಾಂಕೇತಿಕವೆಂದು ಬೇರೊಂದು ಚಿಕ್ಕ ವಿಗ್ರಹವನ್ನಿಡಲಾಗಿದೆ.

ಯಂತ್ರೋದ್ಧಾರಕ ಪ್ರಾಣದೇವರ ಸ್ತೋತ್ರ

ನಮಾಮಿ ದೂತಂ ರಾಮಸ್ಯ ಸುಖದಂ ಚ ಸ್ಫುರದ್ರುಮಮ್
ಪೀನವೃತ್ತ ಮಹಾಬಾಹುಂ ಸರ್ವಶತ್ರುನಿವಾರಣಂ ॥೧॥

ನಾನಾರತ್ನ ಸಮಾಯುಕ್ತಂ ಕುಂಡಲಾದಿ ವಿರಾಜಿತಮ್
ಸರ್ವಾಭೀಷ್ಟ ದಾತಾರಂ ಸತಾಂ ವೈ ದೃಢಮಾಹವೇ ॥೨॥

ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥ ಗಿರೌ ಸದಾ
ತುಂಗಾಂಭೋಧಿ ತರಂಗಸ್ಯ ವಾತೇನ ಪರಿಶೋಭಿತೇ ॥೩॥

ನಾನಾ ದೇಶಾ ಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ
ಧೂಪದೀಪಾದಿ ನೈವೇದ್ಯೈಃ ಪಂಚಖಾದ್ಯೈಶ್ಚ ಶಕ್ತಿತಃ ॥೪॥

ವ್ರಜಾಮಿ ಹನುಮತ್ಪಾದಂ ಹೇಮಕಾಂತಿ ಸಮಪ್ರಭಮ್
ವ್ಯಾಸತೀರ್ಥ-ಯತೀಂ ದ್ರಾಣಾಂ ಪೂಜಿತಂ ಪ್ರಣಿಧಾನತಃ ॥೫॥

ತ್ರಿವಾರಂ ಯಃ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾದ್ವಿಜೋತ್ತಮಃ
ವಾಂಛಿತಂ ಲಭತೇಽಭೀಷ್ಟಂ ಷಣ್ಮಾಸಾಭ್ಯಂತರಃ ಖಲು ॥೬॥

ಪುತ್ರಾರ್ಥೀ ಲಭತೇ ಪುತ್ರಂ ಯಶೋಽರ್ಥೀ ಲಭತೇ ಯಶಃ
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಧನಮಾಪ್ನುಯತ್ ॥೭॥

ಸರ್ವಥಾಮಾಸ್ತು ಸಂದೇಹೋ ಹರಿಃಸಾಕ್ಷೀ ಜಗತ್ಪತಿಃ
ಯಃ ಕರೋತ್ಯತ್ರ ಸಂದೇಹಂ ಸಯಾತಿ ನರಕಂ ಧ್ರುವಮ್ ॥೮॥



# ಸಮರ್ಥ ರಾಮದಾಸರಿಂದ ಸ್ಥಾಪಿತನಾದ ಮೊದಲನೇ ಮಾರುತಿ

---

ಗೋದಾವರಿ ಹಾಗೂ ನಂದಿನಿ ನದಿಗಳ ಸಂಗಮ ಸ್ಥಾನ. ನಡುಮಧ್ಯಾಹ್ನದ ಸಮಯ. ಬೆಳಗಿನಿಂದ ಅಖಂಡ ಆರು ಗಂಟೆಗಳ ಕಾಲ ಸೊಂಟದವರೆಗಿರುವ ಪ್ರವಾಹ ಮಧ್ಯದಲ್ಲಿ ನಿಂತುಕೊಂಡು ತರುಣನೊಬ್ಬ ಗಾಯತ್ರಿ ಮಂತ್ರದ ಪುನಃಶ್ಚರಣದಲ್ಲಿ ನಿರತನಾಗಿದ್ದಾನೆ. ತನ್ನ ನಿತ್ಯದ ಅಹ್ನೀಕವು ಮುಗಿದ ನಂತರ ಆ ತರುಣನು “ಜಯ ಜಯ ರಘುವೀರ ಸಮರ್ಥ” ಎಂಬ ಘೋಷಣೆಯೊಂದಿಗೆ, ಮಧುಕರಿ ವೃತ್ತಿಯನ್ನು ಆರಂಭಿಸುತ್ತಾನೆ. ಇದು ಒಂದು ದಿನದ ಮಾತಲ್ಲ. ಹನ್ನೆರಡು ವರುಷಗಳ ಕಾಲ ಇದೇ ರೀತಿಯಾಗಿ ಆತನ ತಪಸ್ಸು ಸಾಗಿದೆ. ಈ ತರುಣನು ತನ್ನ ಹನ್ನೆರಡನೇ ವರುಷದಲ್ಲಿಯೇ ಮನೆಯಿಂದ ಹೊರಬಿದ್ದವನು. “ಸಾವಧಾನ” ಎಂಬ ಪದವು ಆತನನ್ನು ಈ ತಪಸ್ಸಿಗೆ ಪ್ರೇರಣೆಯನ್ನಿತ್ತಿತ್ತು. ಮುಂದೆ ಕಾಲಾಂತರದಲ್ಲಿ ಈ ಮಹಾನುಭಾವರು ಹಿಂದೂ ಪದಪಾದಶಾಹಿಯ ಸ್ಥಾಪಕನೆನಿಸಿಕೊಂಡ ಛತ್ರಪತಿ ಶಿವಾಜಿ ಮಹಾರಾಜನಿಗೆ ಮಾರ್ಗದರ್ಶಕರಾದ “ಸಮರ್ಥ ರಾಮದಾಸ ಪ್ರಭುಗಳೆಂದು” ಗುರುತಿಸುವಂತಾದರು.

ಈ ಮಹಾನುಭಾವರಿಗೆ ತಂದೆ ತಾಯಿಗಳಿಟ್ಟ ಹೆಸರು ನಾರಾಯಣ ಎಂದಿತ್ತು. ಎಂಟು ವರುಷದವರಿರುವಾಗಲೇ ಅವರಿಗೆ ಶ್ರೀರಾಮನ ದರ್ಶನಾಪೇಕ್ಷೆಯು ಪ್ರಬಲವಾಗಿ ನಾಸಿಕದ ಸಮೀಪದಲ್ಲಿರುವ ಸಂಗಮ ಸ್ಥಳವೆನಿಸಿದ ಟಾಕಳಿ ಎಂಬ ಸ್ಥಳಕ್ಕೆ ಬಂದು ಒಂದು ಗುಹೆಯಲ್ಲಿ ವಾಸ ಮಾಡತೊಡಗಿದರು. ಒಂದು ದಿನ ಅವರು ತಪೋನಿರತರಾಗಿ ಅಸಂಪ್ರಜ್ಞಾತ ಸಮಾಧಿಯಲ್ಲಿ ಕುಳಿತಾಗ ಓರ್ವ ಮಹಿಳೆ ಬಂದು ವಂದಿಸಿದಳು. ಅವಳ ಕಂಕಣ ಬಳೆಯ ಶಬ್ದವು ತಪಸ್ವಿಗಳನ್ನು ಎಚ್ಚರ ಗೊಳ್ಳುವಂತೆ ಮಾಡಿತು. ನಮಸ್ಕರಿಸಿದ ಆ ಸಾಧ್ವಿಯನ್ನು ಕುರಿತು "ಅಷ್ಟಪುತ್ರ ಸೌಭಾಗ್ಯವತೀ ಭವ, ಅಖಂಡ ಸೌಭಾಗ್ಯವತೀ ಭವ" ಎಂದು ಆಶೀರ್ವದಿಸಿದರು. ಅದನ್ನಾಲಿಸಿದ ಆ ಸಾಧ್ವಿಯು 'ಮಹಾತ್ಮರೇ ನನ್ನ ಪತಿ ಕ್ಷಯರೋಗದಿಂದ ಮರಣ ಹೊಂದಿದ್ದಾರೆ. ಸಹಗಮನ ಹೋಗಬೇಕೆಂಬ ಸಂಕಲ್ಪದಿಂದ ತಮ್ಮಂಥವರ ದರ್ಶನ ಪಡೆಯಲು ಬಂದಿದ್ದೇನೆ. ಆದುದರಿಂದ ನನಗೆ ದಯಾಮಾಡಿ ಹರಸಿರಿ' ಎಂದು ಕೇಳಿಕೊಂಡಳು.

"ತಾಯಿ, ನಿನಗೆ ಹರಸಿದವನು ನಾನಲ್ಲ, ಶ್ರೀರಾಮಚಂದ್ರನೇ ನನ್ನ ನಾಲಿಗೆಯಿಂದ ಈ ಶಬ್ದಗಳನ್ನು ನುಡಿಸಿದ್ದಾನೆ. ಆತನ ಮಾತು ಎಂದೂ ಸುಳ್ಳಾಗದು" ಎಂದು ಹೇಳಿ ಬದಿಯಲ್ಲಿದ್ದ ಕಮಂಡಲವನ್ನೆತ್ತಿಕೊಂಡು ಆಕೆಯ ಪತಿಯನ್ನು ಮಲಗಿಸಿದ್ದ ಸ್ಥಳದವರೆಗೆ ಬಂದು "ಶ್ರೀರಾಮ, ಜಯರಾಮ" ಎಂದು ರಾಮನಾಮ ಧ್ಯಾನ ಮಾಡುತ್ತಾ ಕಮಂಡಲವಲ್ಲಿದ್ದ ತೀರ್ಥವನ್ನು ದೇಹದ ತುಂಬೆಲ್ಲ ಪ್ರೋಕ್ಷಣೆ ಮಾಡಿದರು. ಆಗ ಗಿರಿಧರಪಂತ ಕುಲಕರ್ಣಿ ನಿಧಾನವಾಗಿ ಕಣ್ತೆರೆದು ನೋಡಿದನು. ಅದನ್ನು ಕಂಡ ಪತ್ನಿ ಅನ್ನಪೂರ್ಣಾಬಾಯಿಗೆ ಹೋದ ಜೀವವು ಮರಳಿ ಬಂದಂತೆನಿಸಿತು. ದುಃಖದ ದಾರುಣ ಪ್ರಸಂಗದಿಂದ ಈಗ ಅವಳು ಆನಂದದ ಪಾರಾವಾರವನ್ನು ತಲುಪುವಂತಾಗಿತ್ತು. ಆಗ ದಂಪತಿಗಳಿಬ್ಬರೂ ಅತ್ಯಂತ ಕೃತಜ್ಞತಾ ಭಾವದಿಂದ ಕೈಜೋಡಿಸಿಕೊಂಡು ನಿಂತು "ಮಹಾಮಹಿಮರೇ ನಮ್ಮ ಹೊಟ್ಟೆಯಲ್ಲಿ ಹುಟ್ಟುವ ಮೊಟ್ಟ ಮೊದಲನೇ ಸಂತಾನವನ್ನು ನಾವು

ತಮ್ಮ ಪಾದಗಳಿಗೆ ಅರ್ಪಿಸುತ್ತೇವೆ" ಎಂದು ಸಂಕಲ್ಪ ಮಾಡಿದರು. ತಮ್ಮ ಉಪಕಾರವನ್ನು ಜನ್ಮವಿರುವವರೆಗೂ ಮರೆಯಲಾರೆವು ಎಂದು ಹೇಳಿದಾಗ ಪ್ರಭುಗಳು "ಸುಖದಿಂದ ಸಂಸಾರ ಮಾಡಿರಿ" ಎಂದು ಆಶೀರ್ವಾದ ಮಾಡಿ ಅವರನ್ನು ಕಳುಹಿಸಿದರು. ಈ ಘಟನೆಯು ಟಾಕಳಿಯ ಸುತ್ತಮುತ್ತೆಲ್ಲ ಹರಡಿಕೊಂಡಿತು. ಮುಂದೆ ಕೆಲವು ದಿನಗಳಾದ ಮೇಲೆ ಅನ್ನಪೂರ್ಣಾಬಾಯಿಗೆ ಗಂಡು ಸಂತಾನವಾಯಿತು. ಆತನು ಸಮರ್ಥ ಸಂಪ್ರದಾಯ ಪ್ರವೃತ್ತಕರಲ್ಲಿ ಅಗ್ರಮಾನ್ಯ ಶಿಷ್ಯನೆಂದೇ ಹೆಸರುವಾಸಿಯಾದನು. ಸಮರ್ಥರೂ ಸಹ ಆ ಮಗುವನ್ನು ನೋಡಲು ಬಂದರು. ಈ ಮಗುವಿಗೆ 'ಉದ್ಧವ' ಎಂದು ನಾಮಕರಣ ಮಾಡಲು ಹೇಳಿದರು. ಈ ಮಗುವನ್ನು ತಮ್ಮ ಪಾದಾರವಿಂದಗಳಲ್ಲಿ ಸಮರ್ಪಿಸುವದಾಗಿ ದಂಪತಿಗಳು ಪುನಃ ಬಿನ್ನವಿಸಿಕೊಂಡರು. ಆಗ ಯೋಗ್ಯವಾದ ಸಮಯದಲ್ಲಿ ಈ ದಾನವನ್ನು ಸ್ವೀಕರಿಸುವುದಾಗಿ ಸಮರ್ಥರು ಹೇಳಿ ಮುನ್ನಡೆದರು. ಮುಂದೆ ಆ ಮಗು ಎಂಟು ವರ್ಷದವನಾದಾಗ ಸಮರ್ಥರು ತಾವು ಆರಂಭಿಸಿದ ಹನ್ನೆರಡು ವರುಷದ ತಪವೂ ಮುಗಿಯುತ್ತ ಬಂದಿತ್ತು. ಮುಂದೆ ಅವರು ಭಾರತ ಸಂಚಾರವನ್ನಾರಂಭಿಸುವ ಸಂಕಲ್ಪ ಮಾಡಿದರು. ಆಗ ತಾವು ತಪಗೈಯುತ್ತಿದ್ದ ಗುಹೆಯಲ್ಲಿಯೇ ಮಾರುತಿಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದರು. ಸಮರ್ಥರಿಂದ ಸ್ಥಾಪಿತವಾದ ಮೊದಲನೆಯ ಮಾರುತಿಯ ಮಂದಿರವೆಂದೇ ಆ ಸ್ಥಳವೆಂದು ಪ್ರಸಿದ್ಧಿಗೆ ಬರತೊಡಗಿತು. (ಈ ಮಂದಿರದಲ್ಲಿ ಮಾರುತಿಯ ವಿಗ್ರಹವು ಹಸುವಿನ ಸಗಣಿಯಿಂದ (ಗೋಮಯ) ನಿರ್ಮಾಣವಾಗಿದೆ. ಅದು ಇಂದಿಗೂ ಎಂದಿನಂತೆ ಪೂಜೆಗೊಳ್ಳುತ್ತಲಿದೆ). ದೇವಮಂದಿರದ ಮುಂಭಾಗದಲ್ಲಿ ಮಠವನ್ನು ನಿರ್ಮಿಸಲಾಯಿತು. ಆ ಮಠಕ್ಕೆ ಉದ್ಧವನನ್ನೇ ಮಠಾಧಿಪತಿ ಎಂದು ನಿಯಮಿಸಿದರು. ಇಂದು ನಾಸಿಕದಲ್ಲಿರುವ ಉಡುಪಿಯ ಹೋಟೆಲಿನ ಮಾಲೀಕರೊಬ್ಬರು ಈ ಪುಣ್ಯ ಸ್ಥಳವು ಮೊದಲಿನಂತೆ ವೈಭವದಿಂದ ಪ್ರಸಿದ್ಧಿ ಹೊಂದಲು ಅದರ ಜೀರ್ಣೋದ್ಧಾರ ಕಾರ್ಯದಲ್ಲಿ ನಿರತರಾಗಿರುವರು.

ನಮ್ಮ ನಾಡಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂ
ಇಲ್ಲಿರುವ ಕರ್ನಾಟಕ ಸಂಘಕ್ಕೆ ನನ್ನನ್ನು ಆಮಂತ್ರಿಸಿದಾಗ ಸಮರ್ಥ
ರಾಮದಾಸರಿಂದ ಪ್ರತಿಷ್ಠಾಪಿತವಾದ ಮಾರುತಿಯ ವಿಗ್ರಹವನ್ನು ಕಂಡ
ಪುನೀತನಾಗುವ ಭಾಗ್ಯವು ನನಗೆ ದೊರೆಯುವಂತಾಯಿತು
ಕೃತಜ್ಞತಾಭಾವದಿಂದ ಈ ದೇವನಿಗೆ ನಮಿಸಿ ನಾನು ಪಂಚವಟಿಯನ
ನೋಡಲು ಹೊರಟುಬಿಟ್ಟೆ.



# ಪಶ್ಚಿಮಾಭಿಮುಖವಾಗಿ ನಿಂತ ವಾಯುಪುತ್ರನ ಅಂತಃಕರಣ

ಮಾನವನ ಸುತ್ತ ಮುತ್ತ ಮೇಲೆ ಕೆಳಗೆ ಕಣ್ಣಿಗೆ ಕಾಣದಂತಹ ಅನೇಕ ಚೈತನ್ಯಕಣಗಳು ತುಂಬಿಕೊಂಡಿವೆ. ಒಲಿದರೆ ಒಳಿತಾಗಬಹುದು, ಮುನಿದರೆ ಕೆಡುಕಾಗಬಹುದು. ಈ ಕೆಡುಕಿನಿಂದ ನಮ್ಮ ರಕ್ಷಣೆಗೆ ದೇವಮೂಲವೇ ಆಧಾರ. ಈ ಕಲ್ಪನೆ ಇಂದು ನಿನ್ನೆಯದಲ್ಲ. ಯುಗ ಯುಗಾಂತರದಿಂದ ಬೆಳೆದು ಬಂದುದು.

ನಮ್ಮ ಪೂರ್ವಜರು ತಮ್ಮ ಆರಾಧ್ಯ ದೇವತೆಗಳನ್ನು ಶಿಲ್ಪದಲ್ಲಿ ಮೂಡಿಸುವಾಗ ತಮ್ಮದ್ದೇ ಆದ ಕೆಲವು ಭಾವನೆಗಳನ್ನು ಹೊಂದಿದ್ದರು. ದಕ್ಷಿಣ ಭಾರತದಲ್ಲಿಯೂ ಚೋಳರ ಕಾಲದಲ್ಲಿ ಕೆಲವು ದೇವಾಲಯಗಳು ರೂಪುಗೊಂಡವು. (ಕ್ರಿ.ಶ. ೯ಆಠರಿಂದ ೧೧೧ಳ) ಇದರೊಂದಿಗೆ ಹಲವಾರು ಸಂಪ್ರದಾಯಗಳೂ ಕೂಡ ಬೆಳೆದು ಬಂದವು. ದೇವಾಲಯಗಳನ್ನು ಹೇಗೆ ಮತ್ತು ಯಾವ ಸ್ಥಳದಲ್ಲಿ ನಿರ್ಮಿಸಬೇಕೆಂಬ ಬಗ್ಗೆ ಕೆಲವು ಶಾಸ್ತ್ರಗಳೇ ನಿರ್ಮಾಣಗೊಂಡವು. ದೇವನೊಂದಿಗೆ ಆತನ ಪರಿವಾರ ವರ್ಗದವರಿಗೂ ಸಹ ಒಳ್ಳೆಯ ಸ್ಥಾನಮಾನಗಳನ್ನೀಯಲಾಯಿತು.

ವಾಸ್ತು ವಿದ್ಯೆಯು ಯಾವಾಗ ಮೈದಳೆಯಿತೆಂದು ಹೇಳುವದು ಬಹು ಕಷ್ಟಸಾಧ್ಯವಾದ ಮಾತು. ಆದರೂ ವೇದ ಯುಗದಲ್ಲಿ

ವಾಸ್ತುಶಾಸ್ತ್ರಕ್ಕೆ ಮಹತ್ವವನ್ನಿತ್ತಿರುವುದುಂಟು. ದಾಕ್ಷಿಣಾತ್ಯ ವಾಸ್ತುಶಿಲ್ಪವೂ ಸಹ ಒಂದು ಶಾಸ್ತ್ರವೆಂದು ಗುರುತಿಸಲಾರಂಭಿಸಿದರು. ವಿಶ್ವಕರ್ಮ, ಮಯ, ನಾರದ, ಪುರಂದರ, ಗರ್ಗ ಮೊದಲಾದ ಹದಿನೆಂಟು ಋಷಿಗಳು ವಾಸ್ತು ಶಾಸ್ತ್ರ ವಿದ್ಯೆಯ ಪ್ರವರ್ತಕರೆಂದು ಗುರುತಿಸ ತೊಡಗಿದರು. ಅವುಗಳಲ್ಲಿ ವಿಶ್ವಕರ್ಮ ಹಾಗೂ ಮಯಮತ ಎಂಬ ವಾಸ್ತುವಿದ್ಯೆಯು ಇಂದಿಗೂ ಬಳಕೆಯಲ್ಲಿರುವುದು. ಶುಕ್ರಾಚಾರ್ಯರು ವಿಂಧ್ಯೆಯ ದಕ್ಷಿಣದಲ್ಲಿ ವಾಸಮಾಡಿಕೊಂಡಿದ್ದು ಹಲವಾರು ಕಟ್ಟಡಗಳನ್ನು ರಚಿಸಿದರು.

ದೇವಾಲಯಗಳನ್ನು ಹೇಗೆ ನಿರ್ಮಾಣ ಮಾಡಬೇಕು, ಅವುಗಳಲ್ಲಿ ಪ್ರತಿಮೆಗಳನ್ನು ಹೇಗೆ ಮತ್ತು ಯಾವ ಆಕಾರದಲ್ಲಿ ಸಿದ್ಧಪಡಿಸಬೇಕು ಎಂಬ ವಿಚಾರಗಳನ್ನು ಸರಿಯಾಗಿ ತಿಳಿದವರನ್ನು ಸ್ಥಪತಿಗಳೆಂದು ಕರೆಯತೊಡಗಿದರು. ವಾಸ್ತುವಿದ್ಯೆಯ ನೆಲೆಯಲ್ಲಿ ದೇವಾಲಯಕ್ಕೆ ವಿಶೇಷವಾದ ಅಸ್ತಿತ್ವವಿರುವುದು. ಮಾನವನ ದೇಹರಚನೆಯಂತೆಯೇ ದೇವಾಲಯಗಳ ರಚನೆ ಎಂಬ ಭಾವವು ಮೂಡಿ ಬಂದಿತು. ಇದೇ ಮಾತಿಗೆ "ದೇಹೋ ದೇವಾಲಯಃ ಪ್ರೋಕ್ತಃ ಜೀವೋ ದೇವಃ ಸನಾತನಃ" ಎಂಬ ಶ್ಲೋಕವು ಆಧಾರವಾಗಿರುವದು.

ಗುಡಿಯು ಆಯಾ ದೇವನ ಹೆಸರಿನಲ್ಲಿರುವುದೇ ವಾಡಿಕೆಯಾಗಿರುವದು. ದೇವತೆಯ ಮೂರ್ತಿಯನ್ನಿರಿಸಿದ ಸ್ಥಳಕ್ಕೆ ಗರ್ಭಗುಡಿ ಎಂದು ಕರೆಯುವರು. ಗರ್ಭಗುಡಿಯ ಮೇಲ್ಭಾಗದಲ್ಲಿ ಕಟ್ಟುವ ಗೋಪುರವು ಅತ್ಯಂತ ಸುಂದರವಾಗಿದ್ದು, ಅದು ಸಮಗ್ರ ದೇವಾಲಯದ ಪ್ರತೀಕವಂತಿರಬೇಕು. ದಕ್ಷಿಣ ಭಾರತದಲ್ಲಿ ಗೋಪುರಗಳ ವೈಭವವಂತೂ ಆಶ್ಚರ್ಯವನ್ನುಂಟು ಮಾಡುವಂತಹ ರೀತಿಯಲ್ಲಿ ನಿರ್ಮಾಣಗೊಂಡಿರುವವು.

ಈ ಸಂಸ್ಕೃತಿಯು ಮುಂದುವರೆದಂತೆಲ್ಲಾ "ತಸ್ಮಾತ್ ಸರ್ವ ಪ್ರಯತ್ನೇನ ಸ್ಥಣಾಂ ಪೂಜ್ಯಾಂ ದಿವೌರಸಃ" (ವಿಷ್ಣು ಧರ್ಮೋತ್ತರ) ಎಂಬ ಭಾವವು ವಿಕಸಿತವಾಗತೊಡಗಿತು. ದೇವಪೂಜಾದಿಗಳನ್ನು

ದುರಿತಕ್ಷಯಕ್ಕಾಗಿಯೂ, ಪುಣ್ಯ ಸಂಚಯಕ್ಕಾಗಿಯೂ ಜನರು ಕೈಗೊಳ್ಳಲಾರಂಭಿಸಿದರು. ಮುಕ್ತಿ ಪ್ರಾಪ್ತವಾಗುವಂತಿದ್ದರೆ ಅದನ್ನು ಬೇಡ ಎಂದು ಹೇಳುವವರಾರು. ಮತ್ಸ್ಯ ಪುರಾಣದಲ್ಲಿ ಒಂದು ಸಂದರ್ಭದಲ್ಲಿ ದೇವತಾರ್ಚನೆಯ ಹಿಂದಿರುವ ಮನೋಭಾವವನ್ನು ಕುರಿತು ಹೀಗೆ ಹೇಳಲಾಗಿದೆ.

ಕ್ರಿಯಾಯೋಗಂ ಪ್ರವಕ್ಷ್ಯಾಮಿ ದೇವತಾರ್ಚನ ಕೀರ್ತನಂ।
ಭುಕ್ತಿ ಮುಕ್ತಿಪ್ರದಂ ಯಸ್ಮಾತ್ ನಾನ್ಯ ಶ್ಲೋಕೇಷು ವಿದ್ಯತೇ ॥

ಕೊಡುವವರು ದೇವತೆಗಳು, ಬೇಡುವವರು ನಾವು. ಬೇಡುವುದಕ್ಕೂ ಒಂದು ಬಗೆಯುಂಟು. ಪದ್ಧತಿಯುಂಟು. ಅದನ್ನೇ ಉಪಾಸನೆ ಎಂದು ಕರೆದಿರುವರು. ಬ್ರಹ್ಮಸೂತ್ರಗಳಲ್ಲಿ "ಯತ್ರ ಏಕಾಗ್ರತಾ ತತ್ರ ಅವಿಶೇಷಾತ್" ಎನ್ನುವ ಮಾತಿದೆ. ಮನಸ್ಸಿಗೆ ಹಿಡಿತದಲ್ಲಿಡುವ ಸಾಧನವೆಂದರೆ ಧ್ಯಾನವು. ಇದೇ ಮಾತನ್ನು ನಮ್ಮ ನಾಡಿನ ಹರಿದಾಸರು "ತೈಲಧಾರೆಯಂತೆ ಮನಸ್ಸು ಕೊಡು ಹರಿಯಲ್ಲಿ" ಎಂದು ಪ್ರಾರ್ಥಿಸಿರುವದುಂಟು. ದೇವತಾಮೂರ್ತಿಯನ್ನು ಅನನ್ಯಭಾವದಿಂದ ಚಿಂತನೆ ಮಾಡುವದು, ಪೂಜಿಸುವದು, ಆರಾಧಿಸುವುದು ಭಕ್ತಿಮಾರ್ಗದ ಪ್ರಕಾರಗಳೆನಿಸುವುವು. ಪೂಜೆಗೆ ಪ್ರತಿಮೆಗಳನ್ನು ಮಾಡಿಟ್ಟುಕೊಂಡು ಮನಸ್ಸನ್ನು ಅದರಲ್ಲಿ ನಿಲ್ಲಿಸುವುದನ್ನು ಸಗುಣೋಪಾಸನೆ ಎಂದು ಗುರುತಿಸಲಾಗುವುದು. ಶಾಸ್ತ್ರಶುದ್ಧವಾಗಿ ಪೂಜೆಗೆಂದು ಗುಡಿಯಲ್ಲಿ ಸಿದ್ಧಪಡಿಸಿದ ಮೂರ್ತಿಗಳಲ್ಲಿ ಚಲ ಹಾಗೂ ಅಚಲ ಎಂಬ ಪ್ರಭೇದಗಳಿರುವವು.

ಶಿಲ್ಪಶಾಸ್ತ್ರದಲ್ಲಿ ಪ್ರತಿಮೆಗಿಂತಲೂ ಧ್ಯಾನಶ್ಲೋಕಕ್ಕೆ ಹೆಚ್ಚಿನ ಮಹತ್ವವಿದೆ. ಪೂಜೆಯಲ್ಲಿ ಮಂತ್ರ, ತಂತ್ರಗಳ ಕಲಾಷಪವೂ ಇದೆ. ಅಭಯಮುದ್ರೆಯಲ್ಲಿರುವ ದೇವತಾ ಮೂರ್ತಿಯು ತನ್ನ ಭಕ್ತರಿಗೆ 'ಹೆದರಬೇಡ, ನಾನು ನಿನ್ನನ್ನು ಕಾಪಾಡುತ್ತೇನೆ' ಎಂಬ ಭರವಸೆಯನ್ನೀಯುವ ಮುದ್ರೆ ಅಥವಾ ಭಂಗಿ ಎಂದು ಭಾವಿಸಲಾಗುವದು.

ಶಿಲ್ಪಶಾಸ್ತ್ರದಲ್ಲಿ ವಿಗ್ರಹಗಳನ್ನು ಪ್ರತಿಷ್ಠಾಪಿಸುವಾಗ ಪೂರ್ವ ಅಥವಾ ಉತ್ತರಾಭಿಮುಖವಾಗಿ ದೇವನನ್ನು ಪ್ರತಿಷ್ಠಾಪಿಸಲಾಗುತ್ತದೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಅವುಗಳ ದಿಕ್ಕನ್ನು ಬದಲಿಸಿದ ವಿಗ್ರಹಗಳನ್ನೂ ಸಹ ನಾವು ಕಾಣಬಹುದು. ಬೆಂಗಳೂರಿನಿಂದ ಮೈಸೂರಿಗೆ ಪ್ರಯಾಣ ಮಾಡುವಾಗ ಮಾರ್ಗಮಧ್ಯದಲ್ಲಿ "ಗಾಳೀ ಆಂಜನೇಯ" ಸ್ವಾಮಿಯ ದೇವಾಲಯವು ದೊರಕುತ್ತದೆ. ಈ ದೇವನು ಪಶ್ಚಿಮಾಭಿಮುಖವಾಗಿ ನಿಂತಿದ್ದಾನೆ. ಹೀಗೆ ಈ ದೇವನನ್ನು ಪ್ರತಿಷ್ಠಾಪಿಸಲು ಏನಾದರೂ ಬಲವಾದ ಕಾರಣಗಳಿವೆಯೇ? ಎಂದು ಅನೇಕರು ಪ್ರಶ್ನೆ ಮಾಡುವುದುಂಟು.

ಈ ಮೊದಲೇ ನಿರೂಪಿಸಿದಂತೆ ಮಾನವ ದೇಹಕ್ಕೂ ದೇವಾಲಯ ನಿರ್ಮಾಣಕ್ಕೂ ಬಹು ನಿಕಟ ಸಂಬಂಧಗಳಿವೆ. ಆದುದರಿಂದಲೇ ಗಾಳಿ ಆಂಜನೇಯ ಸ್ವಾಮಿಯು ಪಶ್ಚಿಮಾಭಿಮುಖವಾಗಿ ಬೀಸುವ ಗಾಳಿಯನ್ನು ತಡೆಹಿಡಿದು ತನ್ನನ್ನೇ ನಂಬಿದ ಭಕ್ತರಿಗೂ ಬೇಸಾಯಗಾರರಿಗೂ, ಪೈರಿಗೂ ಕೆಡಕಾಗದಂತೆ ಅವರನ್ನೆಲ್ಲ ಕಾಪಾಡುವ ಮಹೋದ್ದೇಶದಿಂದಲೇ ಪಶ್ಚಿಮಾಭಿಮುಖವಾಗಿ ನಿಂತಿದ್ದಾನೆ. ಆಯುರ್ವೇದ ಶಾಸ್ತ್ರ ರೀತ್ಯ ಪಶ್ಚಿಮದ ಗಾಳಿ ಎಲ್ಲ ರೀತಿಯಿಂದಲೂ ಅಹಿತಕಾರಕವೆಂದು ಹೇಳಲಾಗಿದೆ. ಈ ನಿಮಿತ್ತವಾಗಿಯೇ ಪಶ್ಚಿಮದ ಗಾಳಿಯಿಂದ ರಕ್ಷಿಸುವವನಾದುದರಿಂದ "ಗಾಳಿ ಆಂಜನೇಯಸ್ವಾಮಿ" ಎಂದು ಕರೆಯುವ ಸಂಪ್ರದಾಯವಿರಬಹುದು.

ಒಂದು ಕಾಲದಲ್ಲಿ ವೃಷಭಾವತಿ ದಡದಲ್ಲಿದ್ದ ಈ ದೇವನು ಬೆಂಗಳೂರಿನ ಗಡಿಭಾಗದಲ್ಲಿದ್ದುಕೊಂಡು ಎಲ್ಲರ ಭಯಭೀತಿಗಳನ್ನು ನಿವಾರಿಸುತ್ತಲಿದ್ದ. ಆದುದರಿಂದ ಇಂದಿಗೂ ಆತನ ಭಕ್ತರು ಸಾವಿರಾರು ಸಂಖ್ಯೆಯಲ್ಲಿ ಬಂದು ಆಂಜನೇಯನ ವರಪ್ರಸಾದವನ್ನು ಪಡೆದುಕೊಂಡು ನಿರ್ಭಯರಾಗಿ ಮರಳಿ ಹೋಗುತ್ತಾರೆ. ಹೀಗೆ ಪಶ್ಚಿಮಾಭಿಮುಖವಾಗಿ ನಿಂತ ಆಂಜನೇಯನ ವಿಗ್ರಹಗಳು ತೀರ ಅಪರೂಪವೆಂದೆನಿಸಿ ಕೊಂಡಿವೆ. ತುಮಕೂರಿನ ಸಮೀಪದಲ್ಲಿಯೂ ಸಹ ಇದೇ ರೀತಿಯಲ್ಲಿ ಪಶ್ಚಿಮಾಭಿ ಮುಖವಾಗಿ ನಿಂತ ಆಂಜನೇಯನ ವಿಗ್ರಹವಿದೆ.

ಗಾಳಿ ಆಂಜನೇಯನ ದೇವಾಲಯದಲ್ಲಿ ಆತನ ಸಮ್ಮುಖದಲ್ಲಿ ಶ್ರೀರಾಮರ ಪಂಚಾಯತನವಿದೆ. ಶ್ರೀ ಸತ್ಯನಾರಾಯಣಸ್ವಾಮಿಯ ಸುಂದರ ದೇವಾಲಯವೂ ಇದೆ. ಪ್ರಾಕಾರದಲ್ಲಿ ನವಗ್ರಹ ದೇವತೆಗಳನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನಿಗೆ ರಾಜಗೋಪುರ ನಿರ್ಮಿಸುವ ಹಂಬಲದಿಂದ ಭಕ್ತರು ವೇದಶಾಸ್ತ್ರ ಆಗಮ ಘನ ಪಂಡಿತರೂ ಆಗಿದ್ದ ದಿವಗಂತ ಶ್ರೀ ವಾಸುದೇವ ಭಟ್ಟಾಚಾರ್ಯರನ್ನು ಮುಂದಿಟ್ಟುಕೊಂಡು ಗೋಪುರ ಕಾರ್ಯವನ್ನಾರಂಭಿಸಿದರು. ಇಂದು ಆ ಎಲ್ಲ ಭಕ್ತರ ಕನಸು ನನಸಾಗುವ ರೀತಿಯಲ್ಲಿ ರಾಜಗೋಪುರವು ಗಗನದೆತ್ತರಕ್ಕೆ ನಿಂತಿರುವುದನ್ನು ಕಂಡಾಗ ಎಂಥವರಿಗೂ ಭಕ್ತಿಯಿಂದ ತಲೆಬಾಗಿಸಬೇಕೆನಿಸುತ್ತದೆ.

ಮಾನವನ ಮನೋಬಯಕೆಗಳು ನಿರ್ಮಲಭಾವದಿಂದ ಕೂಡಿದಾಗ ಮಾತ್ರ ಎಂಥ ಮಹಾಕಾರ್ಯಗಳನ್ನೂ ಸಹ ನಾವು ಸಾಧಿಸಬಹುದು ಎಂಬ ಮಾತಿಗೆ ಗಾಳೀ ಆಂಜನೇಯ ಸ್ವಾಮಿಯ ರಾಜಗೋಪುರವೇ ಸಾಕ್ಷಿ ಎಂದು ಹೇಳಬಹುದಾಗಿದೆ.



# ಶಕ್ತಿ ದೇವತಾರಾಧನೆಯ ಮೂಲ ಮಂತ್ರ, ತಂತ್ರ, ಯಂತ್ರ

ಮಾನವನು ತನ್ನ ಬಾಳು ನೆಮ್ಮದಿಯಿಂದ ಸಾಗುವಂತಾಗಬೇಕೆಂದು ಅಹರ್ನಿಶಿ ಪ್ರಯತ್ನಿಸುವುದು ಸ್ವಾಭಾವಿಕ. ಏಕೆಂದರೆ ಬದುಕಿನ ಬಯಕೆಗಳನ್ನು ಆತನು ಬಿಡುವಂತಿಲ್ಲ. ಇದರಿಂದಾಗಿ ನೆಮ್ಮದಿಯನ್ನೂ ಪಡೆಯುವಂತಿಲ್ಲ, ಬಯಕೆಗಳನ್ನು ಪೂರೈಸಿಕೊಳ್ಳಲು ಅವಕಾಶದೊಂದಿಗೆ ಅನುಕೂಲತೆ ಹಾಗೂ ಆರೋಗ್ಯ ಇವು ಅತಿ ಮುಖ್ಯ.

ವ್ಯಕ್ತಿಯು ತನ್ನ ಸುಖಸಂತೋಷಗಳ ಪೂರೈಕೆಗಾಗಿ ಸಂಘಜೀವಿಯಾಗುವುದುಂಟು; ಕೆಲವು ಕಟ್ಟಳೆಗಳಿಗೆ ಆತನು ಬದ್ಧನಾಗುವದೂ ಸಹಜ. ವ್ಯಕ್ತಿಯ ಬಯಕೆಗಳು ಸಮುದಾಯದ ಸಂಪ್ರದಾಯದಿಂದಲೇ ಕಾಣಿಸಿಕೊಳ್ಳುವದುಂಟು.

ಪ್ರಪಂಚದಲ್ಲಿ ಕಣ್ಣಿಗೆ ಕಾಣದ, ಕೈಗೆಟುಕದ ಪ್ರಬಲವಾದ ಶಕ್ತಿಗಳಿವೆ ಎಂಬ ನಂಬಿಕೆ ಅತಿ ಪ್ರಾಚೀನವಾದುದು. ಈ ಶಕ್ತಿಗೆ ಸ್ಥಳದ ನಿರ್ಬಂಧವಾಗಲೀ ಅಥವಾ ದೇಶ ಕಾಲಗಳ ನಿರ್ಬಂಧವಾಗಲೀ ಇರುವುದಿಲ್ಲ. ಮಳೆ, ಗಾಳಿ, ಗುಡುಗು, ಸಿಡಿಲು, ಕಗ್ಗತ್ತಲೆ, ಬಿಸಿಲು ಇವೇ ಮೊದಲಾದ ನಿಸರ್ಗ ಶಕ್ತಿಗಳನ್ನು ತಡೆಯಲು ಅಸಾಧ್ಯವೆನಿಸಿದಾಗ ಆತನು ತನ್ನ ರಕ್ಷಣೆಗಾಗಿ ಆ ಶಕ್ತಿ ದೇವತೆಗಳ ಅನುಗ್ರಹ ಸಂಪಾದಿಸಲು

ಪ್ರಯತ್ನಗಳನ್ನಾರಂಭಿಸಿದನು. ವಿಶ್ವದ ಪ್ರತಿಯೊಂದು ಜನಾಂಗಗಳಲ್ಲಿ ಶಕ್ತಿಯ ಸಾಕ್ಷಾತ್ಕಾರಕ್ಕಾಗಿ ನಾನಾ ರೀತಿಯ ಪ್ರಾರ್ಥನೆ, ಸ್ತವನ, ಸ್ತುತಿ, ಸ್ತೋತ್ರಗಳ ರಚನೆಯಾದುದು ಕಂಡುಬರುವುದು.

ಭಾರತೀಯ ಪ್ರಾಚೀನ ಇತಿಹಾಸದಲ್ಲಿ ಸೈಂಧವ ಸಂಸ್ಕೃತಿ ಹಾಗೂ ವೈದಿಕ ಸಂಸ್ಕೃತಿ ಬೆಳೆದು ಬಂದವು. ಈ ಸಂಸ್ಕೃತಿಯು ಕ್ರಿಸ್ತಪೂರ್ವ ಮೂರು ಅಥವಾ ನಾಲ್ಕು ಸಾವಿರ ವರ್ಷಗಳಷ್ಟು ಪ್ರಾಚೀನವಾದುದೆಂದು ಪಂಡಿತರು ಅಭಿಪ್ರಾಯಪಡುವುದುಂಟು. ವೈದಿಕ ಸಂಸ್ಕೃತಿಯಲ್ಲಿ ಪ್ರತಿಮೆಗಳಿರಲಿಲ್ಲ. ಸೈಂಧವ ಸಂಸ್ಕೃತಿಯಲ್ಲಿ ಪ್ರತಿಮೆಯೇ ಪ್ರಧಾನವೆನಿಸಿತು.

ಕ್ರಿಯಾಯೋಗಂ ಪ್ರವಕ್ಷ್ಯಾಮಿ ದೇವತಾರ್ಚಾನುಕೀರ್ತನಂ ।
ಭಕ್ತಿಮುಕ್ತಿಪ್ರದಂ ಯಸ್ಮಾತ್ ನಾನ್ಯಲೋಕೇಷು ವಿದ್ಯತೇ ॥

ಕೊಡುವವರು ದೇವತೆಗಳು, ಬೇಡುವವರು ನಾವು. ಇದನ್ನೇ ಉಪಾಸನೆ ಎಂದು ಗುರುತಿಸತೊಡಗಿದರು. ಯಾವುದಾದರೊಂದು ವಸ್ತುವನ್ನು ಕುರಿತು ಆಳವಾಗಿ ಚಿಂತಿಸಿ ಅದರಲ್ಲಿಯೇ ಏಕಾಗ್ರ ಚಿತ್ತವನ್ನು ನಿಲ್ಲಿಸುವುದನ್ನೇ ಉಪಾಸನ ಕ್ರಮವೆಂದೆನಿಸಿಕೊಂಡಿತು. ತಂತ್ರಸಾರದ ನೆಲೆಯೊಂದಿಗೆ ಮಂತ್ರವಿದ್ಯೆಯು ವಿಪುಲವಾಗಿ ಬೆಳೆದುಬಂದಿತು.

ಮನನಂ ವಿಶ್ವವಿಜ್ಞಾನಂ ತ್ರಾಣಂ ಸಂಸಾರಬಂಧನಾತ್ ।
ಯತಃ ಕರೋತಿ ಸಂಸಿದ್ಧೊ ಮಂತ್ರ ಮಂತ್ರ ಇತ್ಯುಚ್ಯತೇ ಬುಧೈಃ
(ಪಿಂಗಳ ಮತ)

ಮಂತ್ರಗಳಲ್ಲಿ ಬೀಜಾಕ್ಷರ ಪ್ರಯೋಗ ಅತಿ ಮುಖ್ಯ. ಈ ಮಂತ್ರಗಳಲ್ಲಿ ಮೂರರಿಂದ ಒಂಭತ್ತು ಅಕ್ಷರಗಳಿದ್ದರೆ ಅದನ್ನು ಬೀಜಮಂತ್ರವೆಂದೂ, ಎರಡಕ್ಷರಗಳಿದ್ದರೆ ಅದು ಕರ್ತರೀ ಎಂದೂ, ಒಂದೇ ಅಕ್ಷರವಿದ್ದರೆ ಪಿಂಡ ಎಂದೂ ಅಂದರೆ ಓಂ, ಹ್ರೀಂ, ಗಂ, ಶ್ರೀಂ ಎಂಬವುಗಳೆಲ್ಲ ಏಕಾಕ್ಷರ ಮಂತ್ರಗಳನಿಸಿಕೊಂಡವು.

ಮಂತ್ರಗಳಿಗೆ ರೂಪವನ್ನಿತ್ತಲ್ಲಿ ಅದು ಮಂಡಲ ರೂಪ ತಾಳುತ್ತದೆ. ರೇಖೆಗಳು, ವೃತ್ತಗಳು, ತ್ರಿಕೋಣಗಳು, ಮಂಡಲ ಅಥವಾ

ಚಕ್ರಗಳೆನಿಸಿಕೊಳ್ಳುತ್ತವೆ. ಈ ಚಕ್ರಗಳಲ್ಲಿ ಶ್ರೀಚಕ್ರವು ಲಲಿತಾಪರಮೇಶ್ವರಿಯ ರೂಪವೆಂಬ ಕಲ್ಪನೆಯೂ ಇದೆ. ಈ ಚಕ್ರದ ಪೂಜಾವಿಧಾನ ವಿದ್ಯೆಯು ಬಹು ದೊಡ್ಡ ಶಾಸ್ತ್ರವಾಗಿ ಪರಿವರ್ತನೆ ಗೊಂಡಿದೆ. ಶ್ರೀಚಕ್ರವನ್ನು ಕಲ್ಲಿನ ಮೇಲೆ ಅಥವಾ ತಾಮ್ರದ ತಗಡಿನ ಮೇಲೆ ಬಿಡಿಸುವದುಂಟು. ಬೇರೆ ಬೇರೆ ಸಿದ್ಧಿಗಳಿಗಾಗಿ ಬೇರೆ ಬೇರೆ ಯಂತ್ರಗಳ ರಚನೆ ಮಾಡುವ ಪದ್ಧತಿಯೂ ಇದೆ. ಕೆಲವು ಯಂತ್ರಗಳನ್ನು ಚಂದನದಲ್ಲಿಯೂ ಮತ್ತೆ ಕೆಲವನ್ನು ಕುಂಕುಮದಲ್ಲಿಯೂ ಬಿಡಿಸುವುದುಂಟು. ಮತ್ತೆ ಕೆಲವನ್ನು ಕೇಶರದಲ್ಲಿ ಬಿಡಿಸಿಕೊಳ್ಳುತ್ತಾರೆ. ಮಂಡಲ ಮಧ್ಯದಲ್ಲಿ ಮೂರ್ತಿಯನ್ನಿಟ್ಟು ಪೂಜಿಸುವುದರಿಂದ ಹೆಚ್ಚು ಫಲಕಾರಿ ಎಂಬ ನಂಬಿಕೆಯೂ ಇದೆ. ಆದಿವಾಸಿಗಳಲ್ಲಿ ಈ ಯಂತ್ರಗಳ ಬಳಕೆಯಿಂದ ದೇವತೆಗಳನ್ನು, ಭೂತಗಳನ್ನೂ ವಶಪಡಿಸಿಕೊಳ್ಳುವ ಪರಿಪಾಠವಿದೆ. ವಿಶೇಷವಾಗಿ ಈ ಸಂಪ್ರದಾಯವು ದಕ್ಷಿಣ ಭಾರತದ ಕೇರಳದಲ್ಲಿ ನಮಗೆ ಕಾಣಸಿಗುತ್ತದೆ.

**ವಿನಾಯಕನ ವಿಚಾರ:** ಋಗ್ವೇದದಲ್ಲಿ ಗಣಪತಿಯ ಪ್ರಾಸ್ತಾಪವು ಒಂದಲ್ಲ ಎರಡು ಸಲ ಕಾಣಸಿಗುತ್ತದೆ. "ಎಲೆ ಗಣಪತಿಯೇ! ಗಣಗಳಿಗೆ ಒಡೆಯರಾದ ನಿನ್ನನ್ನು ಬೇಡಿಕೊಳ್ಳುವೆ. ನೀನು ಕವಿಗಳಲ್ಲಿ ದ್ರಷ್ಟಾರ, ಹಿರಿಯರಿಗೆಲ್ಲ ನೀನು ಹಿರಿಯ. ಯಜ್ಞಕಾರ್ಯದಲ್ಲಿ ನಿನ್ನ ಆಸನವು ಪ್ರಥಮ" ಎಂಬರ್ಥವನ್ನೇ ಈ ಕೆಳಗಿನ ಶ್ಲೋಕವು ಹೇಳುತ್ತದೆ.

ಗಣಾನಾಂ ತ್ವಾ ಗಣಪತಿಂ ಹವಾಮಹೇ
ಕವಿಃ ಕವೀನಾಂ ಉಪಮಶ್ರ ವಸ್ತಮಂ।
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ
ಆನಃ ಶೃಣ್ವನ್ನೂತಿಭಿಃ ಸೀದಸಾದನಂ ॥ (೨-೨೩-೨)

ಋಗ್ವೇದದಂತೆ ಯಜುರ್ವೇದದಲ್ಲಿಯೂ ಗಣಪತಿಯ ಪ್ರಸ್ತಾಪವಿದೆ. ಆದರೆ ಇಲ್ಲಿ ಗಣಪತಿ ಎಂದರೆ ರುದ್ರ ಎಂಬರ್ಥವಿದೆ. ಗಾಣಪತ್ಯ ಎನ್ನುವುದಕ್ಕೆ ಸಾಯಣರು "ಪಶು ಸಮೂಹ ಪತಿತ್ವಂ" ಅಂದರೆ ರುದ್ರ ಎಂದು ವಿವರಿಸಿದ್ದಾರೆ. ಅದರಂತೆ ಶುಕ್ಲ ಯಜುರ್ವೇದ ಹದಿನಾರನೇ ಅಧ್ಯಾಯದಲ್ಲಿ "ನಮೋ ಗಣೇಭ್ಯೋ ಗಣಪತಿಶ್ಚವೋ ನಮಃ"

ಎಂದುಗಣಪತಿಗೆ ನಮಸ್ಕಾರ ಸಲ್ಲಿಸಲಾಗಿದೆ. ವಾಜಪೇಯಿ ಸಂಹಿತೆಯಲ್ಲಿಯೂ ಈ ಮಂತ್ರವಿದೆ. "ದೇವಸ್ಯಾನುಚರಾ ಭೂತವಿಶೇಷಗಣಾಃ ತೇಷಾಂ ಪಾಲಕಾ ಗುಣಪತಯಃ" ಭೂತವಿಶೇಷಗಳ ಒಡೆಯನೆಂದು ಗಣಪತಿಗಳೆಂದೂ, ಮಹೀಧರನು ಭಾಷ್ಯ ಮಾಡಿದ್ದಾನೆ.

ಈ ವಿನಾಯಕನ ವಿಚಾರದಲ್ಲಿ ಭಾಗವತ ಗ್ರಂಥದಲ್ಲಿ

ಡಾಕಿನ್ಯೋ ಯಾತುಧಾನ್ಯಶ್ಚ ಕೂಷ್ಮಾಂಡಾಯೇರ್ಭಕಗ್ರಹಾಃ
ಭೂತಪ್ರೇತ ಪಿಶಾಚಾಶ್ಚ ಯಕ್ಷರಕ್ಷೋ ವಿನಾಯಕಾಃ ॥
(೧೦-೬-೨೮)

ಗಣಪತಿಯನ್ನು ಬೃಹಸ್ಪತಿ, ಅಗ್ನಿ, ಇಂದ್ರ, ರುದ್ರ, ಇವರೊಂದಿಗೆ ಸಮೀಕರಿಸಿರುವುದುಂಟು. ಬೃಹಸ್ಪತಿಯೇ ಗಣಪತಿ ಎಂದು ಬಗೆದಾಗ ಗಣಪತಿಯು ಸುರಾಗ್ರಜನಾಗಿ ವಿದ್ಯಾಭಿಮಾನಿ ದೇವತೆ ಎಂದೆನಿಸಿ ಕೊಂಡನು. ವಿಘ್ನ ಎಂಬ ರಾಕ್ಷಸನ ಸಂಹಾರಕ್ಕಾಗಿ ಗಣಪತಿಯು ಹೊರಟಾಗ ಶಿವನು ತನ್ನ ಅರ್ಧಚಂದ್ರನನ್ನೂ, ಬ್ರಹ್ಮನು ತನ್ನ ನಡುಪಟ್ಟಿಯನ್ನೂ, ಸೂರ್ಯದೇವನು ತನ್ನ ಮಣಿಯನ್ನೂ, ವರುಣನು ತನ್ನ ಪಾಶವನ್ನೂ, ವಿಷ್ಣು ತನ್ನ ಶಂಖ ಮತ್ತು ಗದೆಯನ್ನೂ, ಇಂದ್ರನು ತನ್ನ ವಜ್ರವನ್ನೂ, ಯಮನು ತನ್ನ ದಂಡವನ್ನೂ ಕೊಟ್ಟರೆಂದು ವಿವರಿಸಲಾಗಿದೆ. ಒಂದು ರೀತಿಯಲ್ಲಿ ಗಣಪತಿಯಲ್ಲಿ ಎಲ್ಲ ವೈದಿಕ ರೂಪಗಳ ಸಮಾವೇಶವಾದಂತೆ ಚಿತ್ರಿಸಲಾಗಿದೆ.

ಪುರಾಣಗಳಲ್ಲಿ ಕಾಣಬರುವ ಗಣಪತಿ ಶಿವನ ಮಗನಾಗಿ ಮೈದಳೆದು ಬಂದಿದ್ದಾನೆ. ಈತ ಪಾರ್ವತಿಯ ಮಾನಸ ಪುತ್ರನೂ ಆಹುದು. ಆದುದರಿಂದ ಉಮಾಸುತನೆಂಬ ನಾಮಧೇಯ. ಇದರಿಂದಾಗಿ ಗೌರಿ ಹಾಗೂ ಗಣೇಶರ ಸಂಬಂಧ ತಾಯಿ ಮಗನಾಗಿ ರೂಪುಗೊಂಡಿದೆ. ಈ ಗಣಪತಿಗೆ ಗಜಮುಖನೆಂದೂ ಕರೆಯುತ್ತಾರೆ. ಐದುತಲೆಯ ಗಣಪತಿಯ ಪೂಜೆಯೂ ನಡೆಯುತ್ತದೆ. ನೇಪಾಳದಲ್ಲಿ ಹಾಗೂ ದಕ್ಷಿಣ ಭಾರತದಲ್ಲಿ ಹೇರಂಬ ಗಣಪತಿಯ ಪೂಜೆಗಳು ನಡೆಯುತ್ತವೆ. ಮಹಾಗಣಪತಿ, ಪಿಂಗಳಗಣಪತಿ, ಹರಿದ್ರಾಗಣಪತಿ,

ಶಕ್ತಿಗಣಪತಿ, ಉಚ್ಛಿಷ್ಟ ಗಣಪತಿ, ಅರ್ಕಗಣಪತಿ ಮೊದಲಾದವುಗಳೆಲ್ಲ ತಾಂತ್ರಿಕ ಕಲ್ಪನಾ ವಿಭಾಗದಲ್ಲಿ ಕಾಣಿಸಿಕೊಳ್ಳುತ್ತವೆ. ಇಂಥ ಗಣಪತಿಗಳನ್ನು ಪೂಜಿಸುವಾಗ "ಓಂ ಹ್ರೀಂ, ಸಂ, ವಿರಿ ವಿರಿ ಗಣಪತಿ ತೇ ವರ ವರದ ಸರ್ವಜನಂ ಮೇ ವಶಮಾನಯ ಸ್ವಾಹಾ" ಎಂಬ ಮಂತ್ರವು ಜನವಶೀಕರಣ ಮಂತ್ರವೆಂದೆನಿಸಿಕೊಳ್ಳುತ್ತದೆ. ಧ್ಯಾನಶ್ಲೋಕದಲ್ಲಿ ದೇವಿಯನ್ನಪ್ಪಿಕೊಂಡು ಕುಳಿತಿರುವ ಗಣಪತಿಯ ವರ್ಣನೆಯು ಹೀಗಿದೆ.

ನಾರೀಯೋನಿ ಮುಖಾಸ್ವಾದಲೋಲುಪಂ ಕಾಮಮೋಹಿತಾ।
ಸ್ವವಾಮಾರಕಸ್ಥ ದಾರಾಣಾಂ ಗಾಢಾಲಿಂಗನತತ್ಪರಂ ॥

ತಾಂತ್ರಿಕ ನೆಲೆಯಲ್ಲಿ ಗಣಪತಿಗೆ ವಿಶೇಷ ಸ್ಥಾನ ಕಲ್ಪಿಸಲಾಗಿದೆ. ಯಂತ್ರ- ಮಂತ್ರ-ತಂತ್ರ ಬಳಕೆಯಲ್ಲಿ ಪತಂಜಲಿಯು "ಓಂ ನಮಃ ಸಿದ್ಧಂ" ಎಂದು ಹೇಳಿರುವುದರಿಂದ ಗಣಪತಿಯ ಸಿದ್ಧಿ ಮಂತ್ರದ ಮಹತಿಯನ್ನು ಎತ್ತಿ ತೋರಿಸಿರುವುದುಂಟು, ಅಲ್ಲದೆ ಗಣಪತಿ ಪಂಚಭೂತಗಳನ್ನೊಳಗೊಂಡ ಮಹಾಶಕ್ತಿ ಎಂಬ ಕಲ್ಪನೆಯೂ ಇದೆ.

**ಶಿವಗಣರಾಧನೆ:** ಕಾರಣಾಗಮನದಲ್ಲಿ ಶಿವನ ನೃತ್ಯಗಳನ್ನು ಕುರಿತು ಹೇಳಲಾಗಿದೆ. ಆತನ ತಾಂಡವದಲ್ಲಿ ಆನಂದ ತಾಂಡವವೆಂಬುದು ಮೊದಲನೇಯದು. ಅನಂತರ ಸಂಧ್ಯಾ ತಾಂಡವ, ಉಮಾ ತಾಂಡವ, ಗೌರೀ ತಾಂಡವ, ಕಾಳೀ ತಾಂಡವ, ತ್ರಿಪುರ ತಾಂಡವ, ಸಂಹಾರ ತಾಂಡವಗಳೆಂಬ ಪ್ರಭೇದಗಳಿವೆ. ಈತನು ಪಂಚಾಕ್ಷರ ಉಳ್ಳವನು. "ಓಂ, ಹ್ರೀಂ, ಶ್ರೀಂ ನಮಶ್ಶಿವಾಯ, ಓಂ ಹ್ರೀಂ ಓಂ" ಮಂತ್ರಕ್ಕೆ ಧ್ಯಾನಶ್ಲೋಕವಿದೆ.

ವಾಮಹಸ್ತೇ ಥ ವಹ್ನಿಂ ನಯಿತು ಮಥ ಕರೇ ದಕ್ಷಣೆ ಚಿತ್ತರೂಪಂ।
ಶಬ್ದಬ್ರಹ್ಮೆ ಕನಿಷ್ಟಂ ಡಮರುಮಭಯದಂ ಯಂ ವಕಾರಂ ಚ ವಾಮೇ॥
ಹಸ್ತೇ ಶ್ರೀ ದಕ್ಷಿಣೇನ ಸ್ವಪದ ಸರಸಿಜೇ ನಾತ್ಮ ಮೋಹಂ ಚ ಧಾಮ್ನಾ।
ಚಾಕ್ರ ವ್ಯವಸ್ಥಿತಂ ತ್ವಾಂ ಭಜತಿ ಹಿ ನಿಟತೀ ನಿಗ್ರಾಹಾನುಗ್ರಹಾಭ್ಯಾಂ ॥

ರುದ್ರನ ಉಗ್ರರೂಪಗಳ ಗುಂಪಿಗೆ ಸೇರಿದ ಇನ್ನೊಂದು ರೂಪವು ವೀರಭದ್ರನದು. ಯಜ್ಞಯಾಗಾದಿಗಳ ಮನೋವೃತ್ತಿಗೆ ವಿರುದ್ಧವಾಗಿ

ಮೈದಳೆದು ಕ್ರಾಂತಿಯ ಸಂಕೇತವಿದು. ವೀರಭದ್ರನು ರುದ್ರಪುತ್ರನೆಂದೂ, ರುದ್ರಕೋಪಸಂಭವನೆಂದೂ ಅಲ್ಲದೇ ಆತನು ರುದ್ರಗಣದಲ್ಲಿ ಸೇರಿದವನೆಂದೂ, ಹೇಳಿ ಮುಂದೆ ಅದೆ ಶಿವನನ್ನು ಉಗ್ರ, ಅತಿಕ್ರೂರ, ಸರ್ವದುಷ್ಟ ನಿಬರ್ಹಣ, ಕರಾಳಾಟ್ಟಹಾಸ, ಗದಾಮುಷ್ಟಿ ಹಸ್ತ, ಭುಜಂಗಗಣ ಭೂಷಿತ. ಫಾಲ ನೇತ್ರಾನನ, ದಿಗಂಬರ ಎಂದೆಲ್ಲ ವರ್ಣಿಸಲಾಗಿದೆ. ದಕ್ಷಿಣದಲ್ಲಿ ವೀರಭದ್ರನ ಪೂಜೆ ವಿಶೇಷ. ಶಿವನ ಲೀಲಾ ಮೂರ್ತಿಗಳಲ್ಲಿ ತುಂಬ ಮೋಹಕವಾದ ರೂಪವೆಂದರೆ ಅರ್ಧನಾರೀಶ್ವರ ರೂಪ. ಇದು ಶಿವ-ಶಕ್ತಿಯರ ಸಂಯೋಗ ಸೂಚಕ. ತಂತ್ರದಲ್ಲಿ ಹಾಗೂ ಸಂಯೋಗ ದರ್ಶನದಲ್ಲಿ ಈ ಮಾತು ಬಹು ಪ್ರಿಯವಾಗಿ ಹೊರಹೊಮ್ಮಿ ಬಂದಿದೆ. ಕವಿ ಕಾಳಿದಾಸನು,

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ॥

ಎಂಬುದಾಗಿ ತನ್ನ ಗ್ರಂಥದ ಮಂಗಳಾಚರಣ ಶ್ಲೋಕದಲ್ಲಿ ಪಾರ್ವತೀ ಪರಮೇಶ್ವರರಿಬ್ಬರನ್ನೂ ಮುಕ್ತಮನದಿಂದ ಕೊಂಡಾಡಿದ್ದಾನೆ.

ವಿಶ್ವಕ್ಕೊಬ್ಬ ಮಾತೆ. ಈ ಮಾತು ವಿಶ್ವದ ಎಲ್ಲ ಧರ್ಮಗಳ ಮೊದಲ ಹಂತವನ್ನಭ್ಯಾಸ ಮಾಡಿದಾಗ ಮನದಟ್ಟಾಗುತ್ತದೆ. ತಾಯಿಯ ಕಲ್ಪನೆಯೊಂದಿಗೆ ಸ್ತ್ರೀ ಸಹಜವಾದ ಶಕ್ತಿ, ಸ್ವಭಾವ, ಮೋಹಕತೆ, ಅದ್ಭುತವಾದ ಸಹನಶೀಲತೆ ಇವೆಲ್ಲ ಕಣ್ಮುಂದೆ ನಿಲ್ಲುತ್ತವೆ. ಮನುಷ್ಯನ ಆಗುಹೋಗುಗಳಿಗೆಲ್ಲ ಹೆಂಗಸೇ ಕಾರಣಗಳು, ಉತ್ತರಿಣಿಯೂ ಅವಳೇ. ಸಂಹಾರಿಣಿಯೂ ಅವಳೇ. ಪ್ರಚಂಡೆಯೂ ಅಹುದು.

ಮಾತೃಮರ್ಯಾದೆಯು ತಾಂತ್ರಿಕ ಅಥವಾ ಶಾಕ್ತ ಸಂಪ್ರದಾಯಗಳಿಗೆ ಮೂಲಧಾರ. ಅದು ವೈದಿಕ ಸಂಪ್ರದಾಯಕ್ಕಿಂತಲೂ ಹಿಂದಿನದು. "ಜಗತ್ ಶಕ್ತಿಮಯಂ ದದ್ಯಾತ್ ಶಕ್ತಿಃ ಪ್ರೇರಯಿತಾ ಶಿವಃ" (ಇದು ಕಾರಣಾಗಮ). ಇದರಲ್ಲಿ ದಕ್ಷಿಣಾಚಾರ ಹಾಗೂ ವಾಮಾಚಾರಗಳೆಂಬ ಎರಡು ಪ್ರಭೇದಗಳು. ಮೊದಲನೆಯದು ಸಾತ್ವಿಕ. ಇದರಲ್ಲಿ ವೇದಾವಲಂಬಿ ಪಂಥ ಪ್ರಭಾವ ಬಹಳ. ಎರಡನೆಯದು ರಾಜಸ.

ಇದು ವೇದ ಬಾಹ್ಯ. ಇದರಲ್ಲಿ ಶಿವನಿಂಗತಲೂ ಶಕ್ತಿಗೆ ಹೆಚ್ಚಿನ ಪ್ರಾಶಸ್ತ್ಯ. "ಶಕ್ತೇಃ ಪ್ರಾಧಾನ್ಯಂ ಸರ್ವದಾ ಪರಿಕೀರ್ತನಂ" ಶಿವನು ತಂದೆ ಎಂದಾದಲ್ಲಿ ಶಕ್ತಿಯು ತಾಯಿ. ಇದೇ ಮಾತನ್ನು "ಸರ್ವೇಷಾಂ ಜಗತಮೇಷಾಂ ಮಾತಾ ಶಕ್ತಿಃ ಪಿತಾ ಶಿವಃ" ಎಂದು ಹೇಳಲಾಗಿದೆ. ನಿಜವಾಗಿ ನೋಡಿದಲ್ಲಿ ಶಿವ ಹಾಗೂ ಶಕ್ತಿ ಎರಡರಲ್ಲಿಯೂ ಅವಿನಾಭಾವ ಸಂಬಂಧವಿರುವದು.

ಕೇನೋಪನಿಷತ್ತಿನಲ್ಲಿ ಹೈಮವತಿ ಉಮೆಯು ಇಂದ್ರನಿಗೆ ಅರಿವು ಮೂಡಿಸಿದ ಪ್ರಸಂಗವಿದೆ (೩.೨೫) ಋಗ್ವೇದರಾತ್ರೀಸೂಕ್ತ ದೇವೀಸೂಕ್ತಗಳು ಅಭ್ಯಾಸಕ್ಕೆ ಗಮನಾರ್ಹವಾದವುಗಳು. ಅದೇ ರೀತಿ ವಾಜಪೇಯಿ ಸಂಹಿತೆ (೩.೫೭) ತೈತ್ತಿರೀಯ ಬ್ರಾಹ್ಮಣ (೧-೬-೧೦೪) ಇವುಗಳಲ್ಲಿ ಅಂಬಿಕೆಯು ರುದ್ರನೋದರಿ ಎಂಬ ಭಾವವಿದೆ. ಇವಳನ್ನು ದುರ್ಗೆ, ವೈರೋಚನೀ, ಕಾತ್ಯಾಯನಿ, ಕನ್ಯಾಕುಮಾರಿ, ವರದಾ, ವೇದಮಾತಾ, ಕಾಲಿ, ಕರಾಲಿ, ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ಮುಂದೆ ಜಾನಪದ ಪ್ರಿಯವಾದ ಶಕ್ತಿ ಉಪಾಸನೆಯಲ್ಲಿ (ಸ್ತ್ರೀಯಃ ಸಮಸ್ತಾಃ ಸಕಲಾ ಜಗತ್ಸು) ಎಂಬ ತತ್ವದಂತೆ ಕಾಲಾಂತರದಲ್ಲಿ ಶಕ್ತಿಯ ರೂಪವು ನಾನಾ ವಿಧವಾಗಿ ಬೆಳೆದು ಬರುವಂತಾಗಿದೆ. ಸರ್ವಾಂಬಾ, ಫಲಗೌರಿ, ಭೇರುಂಡಾ, ರೇಣುಕಾ, ಬಗಲಾ, ಮಾರಿಕಾ, ಮೀರಾಂಬಾ, ಮೂಕಾಂಬಾ, ತೃಣಾಂಬಾ, ವ್ಯಾಘ್ರೇಶ್ವರಿ, ಲಂಕಿಣಿ, ರಾಕ್ಷಸಿ ಹೀಗೆ ನಾನಾ ರೀತಿಯ ನಾಮಧೇಯಗಳಿಂದ ಸಮಾಜದ ಬಹು ಜನರು ಪೂಜಿಸುವ ಸಂಪ್ರದಾಯವು ಬೆಳೆದು ಬಂದಿದೆ. ಈ ಮಾತನ್ನೇ ಸಂಸ್ಕೃತದಲ್ಲಿ ಈ ರೀತಿಯಲ್ಲಿ ಹೇಳಲಾಗಿದೆ.

ಇಂದ್ರಾಣಿ ಪ್ರಮುಖಾ ದೇವ್ಯಃ ಸರ್ವ ದೇವಾಂಶ ಸಂಭವಾಃ ।
ಶಕ್ತಯಸ್ತತ್ರ ಪೂಜ್ಯಂತೇ ನಾನಾ ರೂಪಾ ಕೃತೌ ಯುಗೆ ॥

ಶಕ್ತಿದೇವತೆಗಳಲ್ಲಿ ಗ್ರಾಮದೇವತೆಗೆ ವಿಶೇಷ ಮಹತ್ವವನೀಯಲಾಗುತ್ತದೆ. ಅವಳು ಗ್ರಾಮದ ಪ್ರಜೆಗಳ ಯೋಗಕ್ಷೇಮದ ಹೊರೆಹೊತ್ತವಳೆಂಬ ಭಾವನೆಯೇ ಇದಕ್ಕೆ ಮೂಲ ಕಾರಣವಾಗಿದೆ.

ಶಕ್ತಿಪೂಜೆಯ ಕೇಂದ್ರಗಳನ್ನೂ ಸಹ ನಾವು ಭಾರತದ ಉದ್ದಗಲಕ್ಕೂ ಕಾಣಬಹುದಾಗಿದೆ.

ಈ ಮಾತಿಗೆ ಸಾಕ್ಷಿಯಾಗಿ ಈ ಕೆಳಗಿನ ಸ್ತೋತ್ರವನ್ನಭ್ಯಾಸ ಮಾಡಿದಲ್ಲಿ ಆ ಕೇಂದ್ರಗಳು ಆರಾಧಕನ ಮನದಲ್ಲಿ ಸದಾಕಾಲವೂ ಉಳಿಯುವಂತಾಗುತ್ತವೆ.

ಅಷ್ಟಾ ದಶ ಪೀಠ ಶ್ರೀಶಕ್ತಿ ದೇವತಾ ಸ್ತೋತ್ರಂ

ಲಂಕಾಯಾಂ ಶಾಂಕರೀದೇವೀ ಕಾಮಾಕ್ಷೀ ಕಂಚಿಕಾಪುರೇ।
ಪರ್ಜನ್ಯೇ ಸಿಂಹಲಾದೇವೀ ಚಾಮುಂಡೀ ಕ್ರೌಂಚ ದ್ವೀಪಿಕೇ
ಅಹಿಕ್ಷೇತ್ರೇ ಕಾಮರೂಪೀ ಪೈಠಣೇ ಪೀಠಿಕಾಪುರೀ।
ಒಡ್ಯಾಣೇ ಗಿರಿಜಾದೇವಿ ಮಾಣಿಕ್ಯಾ ಚಿತ್ರಕೂಟಕೇ
ಮಾಹುರ್ಯಾಮೇಕವೀರಾ ಚ ಪ್ರಯಾಗೇ ಮಾಧವೀತಥಾ।
ಜಾಲಂಧರೇ ವಿಷ್ಣು ದೇವೀ ಕಾಶ್ಯಾಂ ಮಂಗಲಗೌರಿಕಾ
ಕುರುಕ್ಷೇತ್ರೇ ಮಾಹಾಮಾಯಾ ಉಜ್ಜಯಿನ್ಯಾಂ ತು ಕಾಲಿಕಾ।
ಸನ್ನತ್ಯಾಂ ಚಂದಲಾದೇವೀ ಕರವೀರೇ ತು ಲಕ್ಷ್ಮಿಕಾ
ಆಲಂಪುರ್ಯಾಂ ಜೋಗುಲಾಂಬಾ ಶ್ರೀ ಶೈಲೇ ಭ್ರಮರಾಂಬಿಕಾ।
ಇತ್ಯಷ್ಟಾದಶಪೀಠೇಷು ಶಕ್ತಯಶ್ಚ ಮುನಿಶ್ರುತಾಃ
ಶ್ರವಣಾತ್ ಪಠನಾತ್ಪಾಪಂ ಸರ್ವೋಪದ್ರನಾಶನಮ್।
ಸರ್ವಸೌಭಾಗ್ಯದಂ ನೃಣಾಂ ಸರ್ವಕಾಮ ಫಲಪ್ರದಂ
ಅಷ್ಟಾದಶ ಮಹಾಪೀಠಾ ಋಷಿಭಿರ್ನಿರ್ಮಿತಾ ಪುರಾ।
ತ್ರಿಸಂಧ್ಯಂ ಯಃಪಠೇನ್ನಿತ್ಯಂ ಸರ್ವಕಾಮಾರ್ಥಸಿದ್ಧಿದಮ್
(ಇತಿ ಶ್ರೀ ಮಾರ್ಕಂಡೇಯ ಪುರಾಣೇ ಅಷ್ಟಾದಶಪೀಠ ಶ್ರೀ ಶಕ್ತಿದೇವತಾ ಸ್ತೋತ್ರಂ ಸಂಪೂರ್ಣಂ).

**ಶಕ್ತಿಶಾಸ್ತ್ರದ ಆಚಾರ್ಯಪುರುಷ:** ಕಾಶ್ಮೀರದ ಶೈವಸಂಪ್ರದಾಯವನ್ನಭ್ಯಾಸ ಮಾಡಿದ ಕನ್ನಡಿಗರಲ್ಲಿ ನಮ್ಮ ನಾಡಿನ ವಿಜಾಪುರದ ಆದಿಲ್‌ಶಾಹೀ ರಾಜ್ಯದ ಪ್ರಜೆಯಾಗಿದ್ದ ಭಾಸ್ಕರರಾಯ ಅಥವಾ ಭಾಸ್ಕರಾಚಾರ್ಯನ ಹೆಸರು ಅಗ್ರಮಾನ್ಯವೆನಿಸುತ್ತದೆ. ಈತನಿಂದ ಅನೇಕ ಶಾಕ್ತ ಗ್ರಂಥಗಳು ನಿರ್ಮಾಣಗೊಂಡಿವೆ. ಶ್ರೀ ಚಕ್ರ ಪೂಜೆಯೊಂದಿಗೆ

ಲಲಿತಾಸಹಸ್ರ ನಾಮಕ್ಕೆ ಟೀಕಾ ಗ್ರಂಥ ಬರೆದವರಲ್ಲಿ ಈತ ಮೊದಲಿಗನಾಗಿದ್ದಾನೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಶಾಕ್ತ ಪಂಥವನ್ನು ಬೆಳೆಸಿದ ಈ ಕನ್ನಡಿಗನು ತನ್ನ ಕೊನೆಗಾಲದಲ್ಲಿ ಕಾವೇರಿ ತೀರದಲ್ಲಿರುವ ಭಾಸ್ಕರಪುರವೆಂಬ ಅಗ್ರಹಾರದಲ್ಲಿ ಕೊನೆಗಾಲವನ್ನು ಕಳೆಯುತ್ತಾನೆ. ಈ ಮಹಾನುಭಾವನ ಜೀವನವೇ ಒಂದು ಬೃಹದ್ಗ್ರಂಥವಾಗಿದೆ. ಕನ್ನಡಿಗರು ಆತನ ಜೀವನವನ್ನಭ್ಯಾಸ ಮಾಡುವುದು ವಿಹಿತ. ಶಾಕ್ತ ಸಂಪ್ರದಾಯಕ ಆಚಾರ ವಿಚಾರಗಳಿಗೆಲ್ಲ ಈತನು ಆಚಾರ್ಯಪುರುಷನೆಂದು ಗೌರವಾದರಗಳನ್ನು ಹೊಂದಿದ್ದಾನೆ.



# ಮಹಾಭಾರತದ ಕಾಲ ನಿರ್ಣಯ

---

ಭಗವಾನ್ ವೇದವ್ಯಾಸರು ತಮ್ಮ ಕಣ್ಮುಂದೆ ನಡೆದುಹೋದ ಎಲ್ಲ ಘಟನೆಗಳನ್ನು ಸ್ವತಃ ಕಂಡು ಅವುಗಳ ನಲಿವು ನೋವುಗಳನ್ನು ಮುಂದಿನ ಸಂತಾನರಿಗೆ ತಿಳುವಳಿಕೆಯ ರೂಪದಲ್ಲಿ ಮಾರ್ಗದರ್ಶನಕ್ಕಾಗಿ ಸಾಧಾರಣ ರೂಪದಲ್ಲಿ ವಿವರಗಳನ್ನೊದಗಿಸಿದ್ದಾರೆ. ಸತ್ಯವತೀ ಪುತ್ರರೂ, ಮಹಾ ತೇಜಸ್ವಿ ಪುರುಷರೂ ಆದ ವ್ಯಾಸರು ಪಾಂಡವರ ಕಥೆಯನ್ನು ಒಂದು ಲಕ್ಷ ಶ್ಲೋಕಗಳಲ್ಲಿ ಅದನ್ನೊದಗಿಸಿದ್ದಾರೆ. ಈ ಮಾತನ್ನು ಮಹಾಭಾರತದಲ್ಲಿ ಕಾಣುವ ಶ್ಲೋಕಗಳಿಂದ ಗುರುತಿಸಬಹುದಾಗಿದೆ.

ಮಹಾಭಾರತದ ಯುದ್ಧವು ಒಂದು ಕುಟುಂಬಕ್ಕೆ ಸೇರಿದ ಹಕ್ಕು ಬಾಧ್ಯತೆಗಳ ಹೋರಾಟದ ಕಥೆ ಎಂದು ಅನೇಕರ ಅಭಿಪ್ರಾಯ. ಈ ಮಾತು ಮೇಲು ನೋಟಕ್ಕೆ ಸರಿಯೆನಿಸಿದರೂ ಸಹ ಮುಂದಿನವರಿಗೆ ಅಂದಿನ ಸತ್ಯನಿಷ್ಠೆ, ಜನಜೀವನ, ಕರ್ಮಪ್ರಾಧಾನ್ಯವಾದ ಬದುಕಿನ ಈ ಹೋರಾಟದಿಂದ ನಾವು ಅನೇಕ ವಿಚಾರಗಳನ್ನು ಅರ್ಥಮಾಡಿಕೊಳ್ಳ ಬಹುದು.

ಮಹಾಭಾರತದ ಯುದ್ಧ ನಡೆದುದು ೨೨ನೇ ನವೆಂಬರ್ ಶುಕ್ರವಾರ ಕ್ರಿಸ್ತಪೂರ್ವ ೩೦೬೭ನೇ ಇಸವಿಯಲ್ಲಿ. ಇದನ್ನೇ ಯುದ್ಧಾರಂಭದ ದಿನವೆಂದು ಗ್ರಹಿಸಿರುವುದುಂಟು. ಈ ಮಾತಿಗೆ

ಸಾಕ್ಷಿಯಾಗಿ ಜ್ಯೋತಿಷ್ಯಶಾಸ್ತ್ರದ ನೆರವನ್ನು ಪಡೆಯಲಾಗಿದೆ. ಸೂರ್ಯ, ಚಂದ್ರ, ರಾಹು, ಶನಿ, ಗುರು ಹಾಗೂ ಮಂಗಳ ಶುಕ್ರರ ಗೋಚಾರ ಸ್ಥಿತಿಯೊಂದಿಗೆ ಭೀಷ್ಮರು ಕೆಳಗುರುಳಿದದಿನ ಯಾವಗ್ರಹಗಳ ಸ್ಥಿತಿಗಳಿದ್ದವು, ಎಂಬುದನ್ನು ಭಗವಾನ್ ವ್ಯಾಸರು ತಪ್ಪದೆ ಮಹಾಭಾರತ ಗ್ರಂಥದಲ್ಲಿ ನಮೂದಿಸಿದ್ದಾರೆ.

ಶ್ರೀಕೃಷ್ಣನು ಉಪಪ್ಲಾವ್ಯ ನಗರದಿಂದ ಪಾಂಡವರ ರಾಯಭಾರಿಯಾಗಿ ಕಾರ್ತೀಕ ಶುಕ್ಲಪಕ್ಷ ದ್ವಾದಶೀ ರೇವತಿ ನಕ್ಷತ್ರದಲ್ಲಿ ಬೆಳಿಗ್ಗೆ ೭-೩೦ರಿಂದ ೮-೨೪ರ ಮಧ್ಯದಲ್ಲಿದ್ದ ಮೈತ್ರ ಮಹೂರ್ತದಲ್ಲಿ ತನ್ನ ಪ್ರಯಾಣವನ್ನಾರಂಭಿಸುತ್ತಾನೆ. (ಉದ್ಯೋಗಪರ್ವ ೮೨-೮೩-೮೪) ಭರಣೀ ನಕ್ಷತ್ರವಿರುವಾಗ ಹಸ್ತಿನಾಪುರವನ್ನು ತಲುಪುತ್ತಾನೆ. ಸಂಧಾನದ ಮಂತ್ರಾಲೋಚನೆಗಳು ಪುಷ್ಯ ನಕ್ಷತ್ರದವರೆಗೆ ಸಾಗುತ್ತವೆ. ಮುಂದೆ ೧೮೦ನೇ ಅಧ್ಯಾಯದಲ್ಲಿ ಕಾಣಬರುವಂತೆ ದುರ್ಯೋಧನನು ಕೃಷ್ಣನ ಸಂಧಾನವನ್ನು ತಿರಸ್ಕರಿಸುತ್ತಾನೆ.

ಕೃಷ್ಣನು ಹಸ್ತಿನಾಪುರವನ್ನು ಬಿಟ್ಟು ಕರ್ಣನೊಂದಿಗೆ ಮಂತ್ರಾಲೋಚನೆ ನಡೆಸಿದುದು ಉತ್ತರ ಫಲ್ಗುನಿಯ ದಿನದಂದು. ಮುಂದೆ ಕೇವಲ ಏಳು ದಿನಗಳಲ್ಲಿ ಅಮಾವಾಸ್ಯೆಯು ಬರುತ್ತದೆ. ಆಗ ಜೇಷ್ಠ ನಕ್ಷತ್ರ ಬೇರೆ. ಯುದ್ಧಕ್ಕೆ ಸಿದ್ಧನಾಗಿರಲು ನಿನ್ನ ಮಿತ್ರನಾದ ದುರ್ಯೋಧನನಿಗೆ ತಿಳಿಸು ಎಂದು ಕರ್ಣನಿಗೆ ಕೃಷ್ಣನು ಹೇಳಿ ಹೋಗುತ್ತಾನೆ (ಅಧ್ಯಾಯ ೧೪೨).

ಹಸ್ತಿನಾಪುರದಿಂದ ಶ್ರೀಕೃಷ್ಣ ಉಪಪ್ಲಾವ್ಯ ನಗರಕ್ಕೆ ಮರುಳಿ ಬಂದಾಗ ಚಿತ್ತಾ ನಕ್ಷತ್ರವಿತ್ತು. ಅಲ್ಲಿಂದ ಮೂರು ದಿನಗಳು ಕಳೆದ ಮೇಲೆ ಅನುರಾಧಾ ನಕ್ಷತ್ರವಿರುವಾಗ ಬಲರಾಮನ ಆಗಮನವಾಗುತ್ತದೆ. ಮುಂದೆ ಕೇವಲ ಹದಿನೇಳು ದಿನಗಳ ಮೇಲೆ ಬಲರಾಮನು ತೀರ್ಥಯಾತ್ರೆಗೆಂದು ಹೊರಡುತ್ತಾನೆ. ಆಗ ಪುನರ್ವಸು ನಕ್ಷತ್ರವಿರುತ್ತದೆ. (ಶಲ್ಯ ಅಧ್ಯಾಯ ೩೪) ತನ್ನ ಈ ಯಾತ್ರೆಯಿಂದ ಬಲರಾಮನು ಮರುಳಿ ಬಂದಾಗ ನಲವತ್ತೆರಡು ದಿನಗಳಾಗಿರುತ್ತವೆ. ಆ ವೇಳೆಗಾಗಲೇ ಮಹಾಭಾರತ ಯುದ್ಧವು ಆರಂಭವಾಗಿ ಹದಿನೆಂಟು ದಿನಗಳಾಗಿರುತ್ತದೆ. ಆತನು ಮರಳಿದ ಮಾರನೆಯ ದಿನ ಅಂದರೆ ಹತ್ತೊಂಬತ್ತನೆಯ ದಿನ

ಶ್ರವಣ ನಕ್ಷತ್ರದಲ್ಲಿ ದುರ್ಯೋಧನನ ಅವಸಾನವಾಗುತ್ತದೆ. ಈ ಮಹಾಭಾರತ ಯುದ್ಧವು ಮುಗಿದ ನಂತರ ಮುಂದೆ ಮುವತ್ತಾರು ವರುಷಗಳ ಮೇಲೆ ಯಾದವರಲ್ಲಿ ಕಲಹಗಳಾಗಿ ಅವರ ಕುಲವೇ ನಾಶವಾಗಿ ಹೋಗುತ್ತದೆ. (ಮೌಸಲ ಪರ್ವ- ಅಧ್ಯಾಯ-೩)

ಭೀಷ್ಮರ ಮರಣವು ಮಾಘಶುದ್ಧ ಅಷ್ಟಮಿ ರೋಹಿಣಿ ನಕ್ಷತ್ರದ ಮಧ್ಯಾಹ್ನ ಕಾಲದಲ್ಲಾಗುತ್ತದೆ. (ಶಾಂತಿ ಹಾಗೂ ಅನುಶಾಸನ ಪರ್ವ-೨೭೨-೨೭೪). ಅಂದರೆ ಯುದ್ಧಾರಂಭವಾದ ದಿನದಿಂದ ಮುಂದೆ ಐವತ್ತೆಂಟನೇ ದಿನ ಅವರ ನಿರ್ಯಾಣವಾಗುತ್ತದೆ. ಆ ವೇಳೆಗಾಗಲೇ ಕಲಿಯುಗವು ಆರಂಭವಾಗಿ ಮೂವತ್ತೆಂಟು ವರ್ಷಗಳಾಗಿರುತ್ತವೆ. ಈ ಮಾತಿಗೆ ಮಹಾಭಾರತದಲ್ಲಿ ಅನೇಕ ಮಾಹಿತಿಗಳು ದೊರೆಯುತ್ತವೆ. ಅದನ್ನೆಲ್ಲ ಅಭ್ಯಾಸ ಮಾಡಿದಾಗ ೧೩ನೇ ಅಕ್ಟೋಬರ್ ಕ್ರಿ.ಪೂ. ೩೧೦೫ ಅಮಾವಾಸ್ಯೆ ಮಂಗಳವಾರ ಜೇಷ್ಠಾ ನಕ್ಷತ್ರದ ದಿನ ಕಲಿಯು ಹುಟ್ಟಿಕೊಂಡನೆಂಬ ನಿರ್ಧಾರಕ್ಕೆ ಬರಲಾಗಿದೆ. ಈ ಕಾಲವನ್ನು ಬಹು ಅಮಂಗಳ ಕಾಲವೆಂದು ವರ್ಣಿಸಲಾಗಿದೆ. ಅನಂತರದಲ್ಲಿನ ಪೌರ್ಣಿಮೆಯ ಚಂದ್ರಗ್ರಹಣದ ದಿನ ಬೆಳಿಗ್ಗೆ [illegible] ಗಂಟೆಗೆ ಅಂದರೆ ದಿನಾಂಕ ಕ್ರಿ.ಪೂ. ೧೦-೧-೩೧೦೪ ಧನಿಷ್ಠಾ ನಕ್ಷತ್ರದಲ್ಲಿ ಪಂಚಗ್ರಹಗಳಿದ್ದ ಕಾರಣ ದುರ್ಯೋಗವು ಸೂಚಿಸುತ್ತದೆ.

ಧರ್ಮರಾಜನು ರಾಜಸೂಯ ಯಾಗ ಮಾಡಿದ್ದು ಈ ಮಹಾಭಾರತ ಯುದ್ಧಕ್ಕೆ ಹದಿನೈದು ವರುಷ ಮೊದಲು. ಅಂದು ಅಮಾವಾಸ್ಯೆಯ ಸಮಯ ಜೇಷ್ಠಾ ಮೂಲಾ ಸಂಧಿ ಕಾಲದ ದಿನ. ಆ ದಿನವೇ ಪಾಂಡವರು ಮುಂದಾಗುವ ಯುದ್ಧಕ್ಕೆ ಕಾಲ ಬಲಿ ಹಾಗೂ ಯುದ್ಧಾಂಗ ಹೋಮ ಆಚರಿಸುತ್ತಾರೆ.

ಶ್ರೀ ಕೃಷ್ಣನ ಅವತಾರವಾದ ಕಾಲವನ್ನು ಕ್ರಿ.ಪೂ. ೩೧೧೨ ಜುಲೈ ೭೨, ಶುಕ್ರವಾರ ರಾತ್ರಿ ೧೧-೪೦ ಎಂದು ನಿರ್ಧರಿಸಲಾಗಿದೆ. ಅದೇ ರೀತಿ ಯುಧಿಷ್ಠಿರನ ಜನನ ಕಾಲವನ್ನು ಕ್ರಿ.ಪೂ. ೩೧೧೪ ಆಗಸ್ಟ್ ೩೧ ಮಂಗಳವಾರ ಶುಕ್ಲ ಪಂಚಮಿ ಜೇಷ್ಠಾ ನಕ್ಷತ್ರದಲ್ಲಿ ಎಂದು ಹೇಳಲಾಗಿದೆ. ಅಂದರೆ ಯುಧಿಷ್ಠಿರನು ಶ್ರೀ ಕೃಷ್ಣನಿಗಿಂತ ೬೯೬

ದಿನಗಳಷ್ಟು ಹಿರಿಯ. ಭೀಮ ಧರ್ಮರಾಜನಿಗಿಂತ ೩೪೭ ದಿನ ಚಿಕ್ಕವನು. ಭೀಮ ತ್ರಯೋದಶಿ ಮಘಾನಕ್ಷತ್ರದಂದು ಜನಿಸಿದವನು. ಅರ್ಜುನನು ಭೀಮನಿಗಿಂತ ೩೦೩ ದಿನಗಳಷ್ಟು ಚಿಕ್ಕವನು. ಆತ ಶುಕ್ಲ ಚತುರ್ಥಿ ಸೋಮವಾರ ಉತ್ತರ ಫಲ್ಗುನೀ ನಕ್ಷತ್ರದಲ್ಲಿ ಜನಿಸಿದವನು.

ಪಾಂಡವರೈವರೂ ಅರಣ್ಯದಲ್ಲಿ ತಂದೆಯನ್ನು ಕಳೆದುಕೊಂಡು ಅನಾಥರಾಗಿ ಹಸ್ತಿನಾವತಿಯಲ್ಲಿ ಕಾಲಿರಿಸಿದಾಗ ಧರ್ಮರಾಜನಿಗೆ ೧೪ ವರುಷ ೯ ತಿಂಗಳು ೧೧ ದಿನಗಳಾಗಿದ್ದವು. ಅಂದರೆ ಜುಲೈ ಕ್ರಿ.ಪೂ. ೩೦೯೯. ಭೀಷ್ಮರು ಧರ್ಮನಿಗೆ ಯುವರಾಜ ಪಟ್ಟ ಕಟ್ಟಿದಾಗ ಆತನಿಗೆ ಇಪ್ಪತ್ತು ವರುಷ ಒಂದು ತಿಂಗಳು ಇಪ್ಪಾತ್ತಾರು ದಿನಗಳಾಗಿದ್ದವು. ಅಂದರೆ ನವಂಬರ್ ಕ್ರಿ.ಪೂ. ೩೦೯೯. ಮುಂದೆ ಧೃತರಾಷ್ಟ್ರನು ಇವರನ್ನು ಮೋಸದಿಂದ ವಾರಣಾವತಕ್ಕೆ ಕಳುಹಿಸಿದ್ದು ಫಾಲ್ಗುಣ ಶುದ್ಧ ಅಷ್ಟಮಿ ರೋಹಿಣೀ ನಕ್ಷತ್ರದಲ್ಲಿ ನಂತರ ಆರು ತಿಂಗಳಗಳವರೆಗೆ ಶಾಲಿಹೋತ್ರ ಮುನಿಗಳ ಆಶ್ರಮದಲ್ಲಿದ್ದರು. ಮುಂದೆ ಏಳು ತಿಂಗಳುಗಳವರೆಗೆ ಏಕಶಿಲಾನಗರದಲ್ಲಿ ವಾಸಿಗಳಾಗಿದ್ದರು, ಅನಂತರ ದ್ರೌಪದಿ ಸ್ವಯಂವರ ನಡೆದುದು ಏರ್ಪಿಲ್ ಕ್ರಿ.ಪೂ. ೩೧೯೧ರಲ್ಲಿ.

ಇಂದ್ರಪ್ರಸ್ಥದ ನಿರ್ಮಾಣ ಹಾಗೂ ಅಲ್ಲಿ ರಾಜ್ಯಾಭಿಷೇಕ ನಡೆದುದು ನವೆಂಬರ್ ಕ್ರಿ.ಪೂ. ೩೧೯೧ರಲ್ಲಿ. ಅನಂತರ ಒಂಭತ್ತು ವರುಷಗಳ ನಂತರ ರಾಜಸೂಯ ಯಾಗಮಾಡುತ್ತಾರೆ. ಈ ಒಂಭತ್ತು ವರುಷಗಳ ಕಾಲಾವಧಿಯಲ್ಲಿಯೇ ಅರ್ಜುನನು ಐದು ವರುಷ ಆರು ತಿಂಗಳುಗಳ ಕಾಲ ದಿಗ್ವಿಜಯ ಯಾತ್ರೆ ಮಾಡಿದ್ದಾನೆ. ಅರ್ಜುನ ಹಾಗೂ ಸುಭದ್ರೆಯ ವಿವಾಹವಾದುದು ಏಪ್ರಿಲ್ ಕ್ರಿ.ಪೂ. ೩೦೮೪ರಲ್ಲಿ. ಆಮೇಲೆ ಮೂರು ತಿಂಗಳುಗಳಲ್ಲಿ ಖಾಂಡವವನ ದಹನವು ಜುಲೈ ೩೦೮೪. ಅಭಿಮನ್ಯುವಿನ ಜನನ ಫೆಬ್ರವರಿ ಕ್ರಿ.ಪೂ. ೩೦೮೩ ರಾಜಸೂಯ ಯಾಗ ಆರಂಭ ಮಾಡಿದ್ದು ನವಂಬರ್ ೩೦೮೩ರಲ್ಲಿ. ದ್ಯೂತ ಹಾಗೂ ವನವಾಸದ ದಿನಗಳ ಆರಂಭವು ನವಂಬರ್ ೩೦೮೧. ಮಾರ್ಗಶೀರ್ಷ ಶುಕ್ಲಪಕ್ಷದಲ್ಲಿ. ಹನ್ನೆರಡು ವರುಷ ವನವಾಸ, ಒಂದು ವರುಷ ಅಜ್ಞಾತವಾಸ, ಹದಿಮೂರು ಚಾಂದ್ರ ವರುಷ. ಅದರಲ್ಲಿ ಐದು

ಚಾಂದ್ರಮಾಸಗಳು ಹನ್ನೆರಡು ದಿನ ಅಥವಾ ಹದಿಮೂರು ಸೌರವರ್ಷ. ಹೀಗಾಗಿ ಹದಿನೆಂಟು ದಿನಗಳು ಹೆಚ್ಚಿನ ಕಾಲ. ಇದರಿಂದಾಗಿಯೇ ದುರ್ಯೋಧನನ ಲೆಕ್ಕವು ತಪ್ಪಾಗುತ್ತದೆ. ಅದನ್ನೇ ಭೀಷ್ಮರು ಆತನಿಗೆ ಎಚ್ಚರಿಕೆ ಕೊಡುತ್ತಾರೆ.

ಮಹಾಯುದ್ಧ ೨೨ ನವಂಬರ್ ೩೦೬೭ ಶುಕ್ರವಾರ ಕೃತ್ತಿಕಾ ನಕ್ಷತ್ರದಲ್ಲಿ ಆರಂಭ. ಹದಿನೆಂಟು ದಿನ ಯುದ್ಧ ನಡೆದು ಅವರಲ್ಲಿ ಪಾಂಡವರಿಗೆ ಜಯ. ಧರ್ಮರಾಜ ಪಟ್ಟಾಭಿಷಿಕ್ತನಾಗಿ, ಮೂವತ್ತಾರು ವರುಷಗಳ ಕಾಲ ರಾಜ್ಯಭಾರವನ್ನು ಮಾಡುತ್ತಾನೆ.

ಧರ್ಮರಾಜನ ರಾಜ್ಯಭಾರವು ಆರಂಭವಾದ ಮೇಲೆ ಹದಿನೈದು ವರುಷಗಳಾದ ನಂತರ ಧೃತರಾಷ್ಟ್ರ, ಗಾಂಧಾರಿ, ವಿದುರ, ಕುಂತಿ ಹಾಗೂ ಸಂಜಯ ಇವರುಗಳೆಲ್ಲ ತಮ್ಮ ಆತ್ಮಶ್ರಾದ್ಧಗಳನ್ನು ಮುಗಿಸಿಕೊಂಡು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಾರೆ. ಮುಂದೆರಡು ವರುಷಗಳ ನಂತರ ಧೃತರಾಷ್ಟ್ರ, ಗಾಂಧಾರಿ, ಕುಂತಿ ಇವರು ಕಾಡುಗಿಚ್ಚಿಗೆ ಸಿಕ್ಕಿ ಹಾಕಿಕೊಂಡು ಮರಣ ಹೊಂದುತ್ತಾರೆ.

ಶ್ರೀ ಕೃಷ್ಣನ ಪರಂಧಾಮ ನಿರ್ಗಮನವು ಶುಕ್ರವಾರ ೧೩ನೇ ಏಪ್ರಿಲ್ ಕ್ರಿ.ಪೂ. ೩೦೩೧. ಅನಂತರ ಮುಂದೆ ಪಾಂಡವರು ನವಂಬರ್ ಕ್ರಿ.ಪೂ. ೩೦೩೧ರಲ್ಲಿ ತಮ್ಮ ಮಹಾಪ್ರಸ್ಥಾನವನ್ನು ಬೆಳೆಸುತ್ತಾರೆ.

ಈ ವಿಚಾರಗಳನ್ನೆಲ್ಲ ಶ್ರೀ ಕೆ. ಶ್ರೀನಿವಾಸ ರಾಘವನ್ ಹಾಗೂ ವಾಸುದೇವ ಅಗರವಾಲ ಮತ್ತು ಸೌರಾಷ್ಟ್ರದ ವಿದ್ಯಾಪೀಠದ ಕುಲಪತಿಗಳಾಗಿದ್ದ ಶ್ರೀ ಡಿ.ಆರ್. ಪಂಡಿತ ಮೊದಲಾದವರು ತಮ್ಮ ಸಂಶೋಧನೆಗಳಿಂದ ಪ್ರಕಟಪಡಿಸುತ್ತಾರೆ. ಇದರಿಂದಾಗಿ ಮಹಾಭಾರತ ಯುದ್ಧವಂತೂ ಖಂಡಿತವಾಗಿ ನಡೆಯಿತೆಂಬ ಮಾತಿನಲ್ಲಿ ಯಾವ ಸಂಶಯಗಳಿರುವುದಿಲ್ಲ.



# ನೀರಾ - ನಾರಸಿಂಹ

ವೈದಿಕ ಸಾಹಿತ್ಯದಲ್ಲಿ ನರಸಿಂಹನ ಪಾತ್ರವು ಬಲು ಹಿರಿದಾದುದು. ಅಸುರಿ ಶಕ್ತಿಯನ್ನು ಹೋಗಲಾಡಿಸಲು ಮೃಗಮಾನವ ರೂಪ ಧರಿಸಿದ ಕಥೆಯೂ ಬಹು ರೋಮಾಂಚಕಾರಿ. ನರಸಿಂಹಾವತಾರವಾದುದು ಮೂಲಸ್ಥಾನ ಅಥವಾ ಮುಲ್‌ತಾನ ಎಂಬ ಪ್ರತೀತಿ. ಇಂದು ಈ ಸ್ಥಳವು ಪಾಕಿಸ್ಥಾನಕ್ಕೆ ಸೇರಿದೆ. ಪ್ರಹ್ಲಾದನಿಂದ ಪ್ರತಿಷ್ಠಾಪಿತವಾದ ದೇವಾಲಯವಿರುವುದನ್ನು ಅಲ್ಲಿ ಇಂದಿಗೂ ತೋರಿಸುತ್ತಾರೆ.

ನರಸಿಂಹೋಪಾಸನೆಯು ಅತಿ ಪ್ರಾಚೀನವಾದುದು. ರಾಮಕೃಷ್ಣೋಪಾಸನೆಗಿಂತ ಮೊದಲಿನದು. ನಮ್ಮ ನಾಡಿನಲ್ಲಿ ಐದನೇ ಶತಮಾನದಿಂದ ಈ ದೇವನ ಪೂಜಾರಾಧನೆ ನಡೆದು ಬಂದುದಕ್ಕೆ ನಾಗಪುರದ ಸಮೀಪದಲ್ಲಿರುವ ರಾಮಟೇಕ್ ಎಂಬಲ್ಲಿ ಕಾಣಸಿಗುವ ಗುಪ್ತರ ಕಾಲದ ವಾಕಾಟಕ ರಾಣಿ ಪ್ರಭಾವತಿಯು ತನ್ನ ದಿವಂಗತ ಪತಿಯ ಸ್ಮರಣಾರ್ಥವಾಗಿ ನರಸಿಂಹ ದೇವಮಂದಿರವನ್ನು ಪ್ರತಿಷ್ಠಾಪಿಸಿದಳೆಂಬ ಶಿಲಾಲೇಖವಿದೆ. ಶ್ರೀಮದ್ಭಾಗವತ ಗ್ರಂಥದಲ್ಲಿಯೂ ಸಹ ಒಂದು ಕಾಲದಲ್ಲಿ “ಕಾಂಕಟ ಕರ್ನಾಟಕಾನ್ ದಕ್ಷಿಣ ದೇಶಾನ್” ಅಂದರೆ ಕರ್ನಾಟಕವು ನಾಗಪುರದವರೆಗಿತ್ತೆಂದು ಸೂಚಿಸಲಾಗಿದೆ.

ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶಗಳಲ್ಲಿ ಅನೇಕ ಪ್ರಸಿದ್ಧ ನರಸಿಂಹ ದೇವಾಲಯಗಳಿವೆ. ಅವುಗಳಲ್ಲಿ ಗೋದಾವರಿ

ತೀರದಲ್ಲಿರುವ ಮುದ್ಗಲ ಕ್ಷೇತ್ರ, ರಾಕ್ಷಸಭವನ, ಕೃಷ್ಣಾ ತೀರದಲ್ಲಿರುವ ಶೂರ್ಪಾಲಿ, ಕೊಪ್ಪರ ಹಾಗು ವಿಜಾಪುರದ ಸಮೀಪದಲ್ಲಿರುವ ತೊರವೆ ನರಸಿಂಹ, ಮೇಲುಕೋಟೆಯ ನರಸಿಂಹ, ದೇವರಾಯನ ದುರ್ಗದ ನರಸಿಂಹ, ಮುಳಬಾಗಿಲ ದಲ್ಲಿರುವ ನರಸಿಂಹ, ಹಂಪೆಯಲ್ಲಿರುವ ಬೃಹದಾಕಾರದ ಲಕ್ಷ್ಮೀ ನರಸಿಂಹ - ಹೀಗೆ ಒಂದಲ್ಲ ಎರಡಲ್ಲ ಅನೇಕ ನರಸಿಂಹ ದೇವಾಲಯಗಳಿವೆ.

**ನೀರಾನರಸಿಂಹ:** ವಿಜಾಪುರದ ಆದಿಲ್‌ಶಾಹಿ ಮನೆತನಕ್ಕೂ, ಈ ನರಸಿಂಹ ದೇವನಿಗೂ ವಿಶೇಷ ಸಂಬಂಧವಿರುವುದು. ಇತಿಹಾಸದ ಅಭ್ಯಾಸದಿಂದ ಇದು ಗೋಚರವಾಗುತ್ತದೆ. ನರಸಿಂಹನ ಸಾನ್ನಿಧ್ಯವಿರುವ ತೊರವೆಯನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಳ್ಳುವ ಪ್ರಯತ್ನವೂ ಇಬ್ರಾಹಿಮ ಆದಿಲ್ ಶಹರಿಂದ ನಡೆದುದಕ್ಕೆ ಇಂದಿಗೂ ಸಂಗೀತ ಮಹಲ್ ಸಾಕ್ಷಿಯಾಗಿದೆ. ಅದೇ ರೀತಿ ನೀರಾ ನರಸಿಂಹನಿಗೂ ಆದಿಲ್‌ಶಾಹಿ ಮನೆನಕ್ಕೂ ಸಹ ಒಂದು ನಂಟು.

ನೀರಾ ನರಸಿಂಹ ಕ್ಷೇತ್ರವು ಭೀಮಾ ಹಾಗೂ ನೀರಾ ನದಿಗಳ ಸಂಗಮ ಸ್ಥಾನದಲ್ಲಿದೆ. ಕನ್ನಡ ನಾಡಿನ ಅನೇಕ ಕುಟುಂಬಗಳಿಗೆ ನೀರಾ ನರಸಿಂಹಸ್ವಾಮಿ ಕುಲದೇವನಾಗಿದ್ದಾನೆ. ನೀರಾ ನದಿಯ ದಂಡೆಗುಂಟ ಲಕ್ಷ್ಮೀತೀರ್ಥ, ಪದ್ಮತೀರ್ಥ, ಶಂಖತೀರ್ಥ, ಗದಾತೀರ್ಥ, ಪಿಶಾಚವಿಮೋಚನತೀರ್ಥ, ಗರುಡತೀರ್ಥ, ಇಂದ್ರತೀರ್ಥ, ನರಸಿಂಹತೀರ್ಥ, ಹಂಸತೀರ್ಥ, ತಾರಾತೀರ್ಥ, ಕಪಿಲತೀರ್ಥ ಎಂಬ ತೀರ್ಥಗಳ ವರ್ಣನೆಯು ಇದೆ. ಅದೇ ರೀತಿಯಲ್ಲಿ ಭೀಮಾ ತೀರದ ದಂಡೆಗುಂಟ ದುರ್ಗಾತೀರ್ಥ, ಗೋತೀರ್ಥ, ಭಾನುತೀರ್ಥ, ಚಕ್ರತೀರ್ಥ, ನಂದತೀರ್ಥ, ಮೌಸಲತೀರ್ಥ ಎಂಬ ತೀರ್ಥಗಳಿವೆ. ಆದುದರಿಂದ ನೀರಾ ನರಸಿಂಹ ಕ್ಷೇತ್ರವು ಬಹು ಪವಿತ್ರವಾದ ತೀರ್ಥ ಕ್ಷೇತ್ರವೆಂಬ ನಂಬಿಕೆ ಅತಿ ಪ್ರಾಚೀನವಾದುದಾಗಿದೆ. ಗುರುಚರಿತೆಯಲ್ಲಿ (೧೫೦೦) ಈ ತೀರ್ಥಗಳ ಉಲ್ಲೇಖವಿದೆಯಾದರೂ ಈ ಕ್ಷೇತ್ರಪರಿಚಯದ ಆರಂಭದ ಕಾಲವು ಮಾತ್ರ ಹದಿನಾರನೇ ಶತಮಾನದ ಮಧ್ಯಭಾಗದಿಂದ ಎಂದು ಹೇಳಬಹುದಾಗಿದೆ.

ಪ್ರಾಚೀನ ದಂತಕಥೆಗಳೊಂದಿಗೆ ಸಂಬಂಧ ಪಡೆದುಕೊಂಡಂತೆ ಇತಿಹಾಸಿಕ ಘಟನೆಗಳಿಗೂ ಈ ಕ್ಷೇತ್ರದ ಮಹತಿಗೆ ಪೂರಕವಾಗಿವೆ. ವಿಜಾಪುರದ ಆಲಿ ಆದಿಲ್‌ಶಹನು ಈ ಸಂಗಮ ಸ್ಥಳವನ್ನು ನೋಡಿದಾಗ, ಮೂರು ಭಾಗದಲ್ಲಿ ಹರಿವ ಪ್ರವಾಹ, ಒಂದು ಭಾಗದಲ್ಲಿರುವ ನೆಲ ಇದೆಲ್ಲವನ್ನು ಕಂಡಾಗ ಆತನು ತನ್ನ ಸೇನಾಠಾಣೆಗೆ ಇದು ಯೋಗ್ಯವಾದ ಸ್ಥಳವೆಂದು ಭಾವಿಸಿ ಭದ್ರವಾದ ಕೋಟೆಯ ನಿರ್ಮಾಣ ಕಾರ್ಯಕ್ಕಾಗಿ ತಕ್ಷಣವೇ ಆಜ್ಞೆ ಮಾಡುತ್ತಾನೆ. ಅದೇ ಸಮಯದಲ್ಲಿ ನರಸಿಂಹಪುರದಲ್ಲಿ ದೇಶಪಾಂಡೆ ಮನೆತನದ ಉಮಾಪತಿ ಪಂಡಿತರೆಂಬ ಭಕ್ತರು ಆ ಸ್ಥಳದಲ್ಲಿ ಉಪಾಸನಾನಿರತನಾಗಿರುತ್ತಾರೆ. ಪವಿತ್ರತೀರ್ಥ ಕ್ಷೇತ್ರದ ದಂಡೆಯ ಮೇಲೆ ಕೋಟೆ ನಿರ್ಮಾಣಗೊಂಡಲ್ಲಿ ಅದರ ಪಾವಿತ್ರ್ಯವು ನಷ್ಟವಾಗಬಹುದಲ್ಲ ಎಂಬ ಕೊರಗು ಆತನಿಗೆ ಆರಂಭವಾಗುತ್ತದೆ. ಆಗ ಒಂದು ದಿನ ಇದಕ್ಕಿದ್ದಂತೆ ಬಾದಶಹನಿಗೆ ವಿಪರೀತ ಉದರಶೂಲೆಯು ಆರಂಭವಾಯಿತಂತೆ. ಆಗ ಪ್ರಧಾನ ವಜೀರರು ಬಂದು ಆ ಸ್ಥಳಮಹಾತ್ಮವನ್ನು ವಿವರಿಸಿದಾಗ ಬಾದಶಹನು ಕೋಟೆ ಕಟ್ಟಿಸುವುದನ್ನು ನಿಲ್ಲಿಸಿದನಂತೆ. ನರಸಿಂಹನ ತೀರ್ಥಪ್ರಸಾದ ಸ್ವೀಕರಿಸಿದ ನಂತರ ಆತನ ರೋಗವು ಗುಣವಾಯಿತಂತೆ. ಇದರಿಂದ ಪ್ರಭಾವಿತನಾದ ಆದಿಲ್‌ಶಹನು ದೇವನ ಹೆಸರಿನಿಂದ ಅನೇಕ ಗ್ರಾಮಗಳನ್ನು ದಾನ ಮಾಡಿದನೆಂದೂ, ದೇವಾಲಯದ ನೌಕರ ವರ್ಗದವರಿಗೆ ಭೂಮಿಗಳನ್ನು ಇನಾಮಾಗಿ ಕೊಟ್ಟನೆಂದೂ, ಇಂದಿಗೂ ಅರ್ಚಕ ವರ್ಗದವರು ಆ ಭೂಮಿಯ ಒಡೆತನವನ್ನು ಹೊಂದಿರುವರೆಂದೂ "ಶ್ರೀಕ್ಷೇತ್ರ ನರಸಿಂಹಪುರ" ಎಂಬ ಗ್ರಂಥವನ್ನು ಬರೆದು ಮುದ್ರಿಸಿದ ಶ್ರೀ ಗೋ.ಹ. ದಂಡವತೆ ಇವರು ತಿಳಿಸುತ್ತಾರೆ.

ಆಲಿ ಆದಿಲ್‌ಶಹನು ಈ ಕ್ಷೇತ್ರಕ್ಕೆ ಬಂದು ಹೋದಂದಿನಿಂದ ಭಕ್ತರು ಸಾಕಷ್ಟು ಪ್ರಮಾಣದಲ್ಲಿ ಈ ಕ್ಷೇತ್ರಕ್ಕೆ ಬರತೊಡಗಿದರು. ನರಸಿಂಹಪುರದ ಎರಡೂ ಬದಿಯಲ್ಲಿ ಭೀಮಾ ಹಾಗೂ ನೀರಾ ನದಿಗಳು ಹರಿಯುವುದುಂಟು. ಬಹು ರಮಣೀಯವಾದ ದೃಶ್ಯದಿಂದ ಕೂಡಿದ ಈ ಪ್ರದೇಶವು ಎಂಥವರ ಮನವನ್ನೂ ತನ್ನತ್ತ ಆಕರ್ಷಿಸುವು

ದುಂಟು. ಈ ನದಿಗಳ ದಂಡೆಗುಂಟ ಅನೇಕ ಸ್ನಾನ ಘಟ್ಟಗಳನ್ನು ನಿರ್ಮಿಸಿದ ದಾಸಿಗಳ ಶಿಲಾಲೇಖಗಳಿವೆ. ಆಲಿ ಆದಿಲ್‌ಶಹನ ಚಾಕರಿಯಲ್ಲಿದ್ದ ಮುಧೋಜಿ ಹಾಗೂ ನಳದುರ್ಗದ ದೇಶಮುಖರಿಂದಲೂ ಸ್ನಾನಘಟ್ಟಗಳು ನಿರ್ಮಾಣಗೊಂಡಿವೆ. ಕ್ರಿ.ಶ. ೧೬೦೫ ವಿಶ್ವಾವಸು ನಾಮ ಸಂವತ್ಸರ ಮಾಘ ಶುದ್ಧ ಏಕಾದಶಿಯ ದಿನ ಈ ಸ್ನಾನಘಟ್ಟವನ್ನು ನಿರ್ಮಿಸಲಾಯಿತೆಂದು ಆ ಶಿಲಾಲೇಖಗಳಿಂದ ತಿಳಿದುಬರುತ್ತದೆ. ಮಧೋಜಿ ಸೋದರರು ಹದಿನಾರು ಕಂಬಗಳಿಂದ ಕೂಡಿದ ದೇವಾಲಯವನ್ನು ನಿರ್ಮಿಸಿದರು. ಮುಧೋಜಿ ಕ್ರಿ.ಶ. ೧೬೦೯ರವರೆಗೆ ಜೀವಿತನಾಗಿದ್ದನೆಂದು ತಿಳಿಯು ಬರುವುದು. ಇಲ್ಲಿ ಅಶ್ವತ್ಥ ರೂಪಿ ನರಸಿಂಹನ ಪೂಜೆಯೂ ಇದೆ. ದೇವಾಲಯದ ಹಿಂಭಾಗದಲ್ಲಿರುವ ಅತ್ಯಂತ ಹಳೆಯದಾದ ವಟವೃಕ್ಷವನ್ನು ಅಕ್ಷಯವಟವೆಂದು ಪೂಜಿಸುತ್ತಾರೆ.

ಈ ಕ್ಷೇತ್ರದಲ್ಲಿ ಸೇವೆಗೈದ ಅನೇಕ ಪ್ರಮುಖರ ಹೆಸರುಗಳನ್ನು ಸಹ ನಾವು ಕಾಣಬಹುದು. ಕುಲಕರ್ಣಿ, ಜೀನಸೀವಾಲೆ, ಗಂಗಾಖೇಡಕರ, ಬಾಬಾ ಬಾವಡೇಕರ -ಹೀಗೆ ಅನೇಕ ಮಹನೀಯರು ದೇವನ ಸೇವೆಗೈದ ವಿಚಾರವಾಗಿ ಶಿಲಾಲೇಖಗಳನ್ನು ನಾವು ನೋಡಬಹುದಾಗಿದೆ. ಗ್ರಂಥಕಾರರಾದ ಶ್ರೀ ದಂಡವತೆಯವರು ಇಲ್ಲಿರುವ ನರಸಿಂಹ ಮೂರ್ತಿಯನ್ನು ಅದ್ಯಶಂಕರಾಚಾರ್ಯರು ಪ್ರತಿಷ್ಠಾಪನೆ ಮಾಡಿದರೆಂದು ಹೇಳಿ ಅವರಿಂದ ರಚಿತವಾದ ನರಸಿಂಹ ಸ್ತುತಿಯ ಉಲ್ಲೇಖವನ್ನು ಮಾಡುತ್ತಾರೆ.

ಛತ್ರಪತಿ ಶಿವಾಜಿ ಮಹಾರಾಜರ ಗುರುಗಳಾಗಿದ್ದ ಸಮರ್ಥ ರಾಮದಾಸರು ತಮ್ಮ ಪ್ರವಾಸಕಾಲದಲ್ಲಿ ಕ್ರಿ.ಶ. ೧೬೪೧ರ ಸುಮಾರಿನಲ್ಲಿ ಈ ನೀರಾ ನರಸಿಂಹ ಕ್ಷೇತ್ರಕ್ಕೆ ಬಂದು ಹೋದರೆಂದು ಅವರು ರಚಿಸಿದ ಒಂದು ಪದ್ಯದಿಂದಲೇ ತಿಳಿದು ಬರುತ್ತದೆ.

ಮಹಾಭಕ್ತ ಪ್ರಹ್ಲಾದ ಕಷ್ಟವಿಲಾ
ಹ್ಮಣೋನಿ ತಯಾಕಾರಣೆ ಸಿಂಹರೂಲಾ
ಮಹಾಭಕ್ತ ಪ್ರಹ್ಲಾದ ಹಾದ್ಯೆತ್ಯಕುಳಿ

ಪಿತಾಪಾಪರೂಪಿ ತಯಾ ದೇಖವೇನಾ
ಜನೀ ದೈತ್ಯತೋ ರಾಮ ಮುಖೀಹ್ಮಣೇನಾ

ಅಲ್ಲದೆ ಶ್ರೀ ರಾಮದಾಸ ಪ್ರಭುಗಳು ಈ ದೇವನ ಅರ್ಚನೆಯ ಕಾಲದಲ್ಲಿ ಹೇಳಿದ ಒಂದು ಪದ್ಯವು ಇದೆ.

ಚರಚರ ಫಾಡೀ ವಿಭಾಂಡಿ
ತರತರ ಅಂತ್ರಮಾಳಾಜಧೋನೀ ಕಾಠಿ
ಭರಭರ ಆವೇಶ ಫೋಟೀ ಕ್ರೋಧ ಭಡಾಡಿ
ಬ್ರಹ್ಮಪ್ರಲಯ ಜೈಸಾಪಾವಕ ಧಡಾಡಿ

ಈ ಪದ್ಯದಿಂದ ಸಮರ್ಥರು ಹಿರಣ್ಯಕಶ್ಯಪನ ಕೋಪ ಹಾಗೂ ಸಂಹಾರವಾದುದನ್ನು ವರ್ಣಿಸಿದ್ದಾರೆ.

ಶ್ರೀ ಸಮರ್ಥರು ಕೊನೆಯ ಪಕ್ಷ ಎರಡು ಸಲವಾದರೂ ಈ ಕ್ಷೇತ್ರಕ್ಕೆ ಬಂದು ಹೋಗಿರಬಹುದು. ಕ್ರಿ.ಶ. ೧೬೩೧ರ ಸ್ಪಷ್ಟ ಉಲ್ಲೇಖವು ದೊರೆಯುತ್ತದೆ. ಅವರು ಈ ಕ್ಷೇತ್ರದಲ್ಲಿದ್ದಾಗ ನಡೆದ ಸಂಗತಿಯೊಂದನ್ನು ಹೇಳುತ್ತಾರೆ.

ಸಮರ್ಥರು ನೀರಾ-ಭೀಮಾ ಸಂಗಮ ಸ್ನಾನದಲ್ಲಿ ತಮ್ಮ ನಿತ್ಯವಿಧಿಗಳನ್ನು ಮುಗಿಸಿಕೊಂಡು ಪಾಲಿಯ ಕಡೆಗೆ ಪ್ರಯಾಣಸನ್ನದ್ಧರಾಗಿದ್ದರು. ಪ್ರತಿ ದಿನ ಅವರು ಭಿಕ್ಷಾಟನೆಯಿಂದ ತಂದ ಅನ್ನವನ್ನು ತೀರ್ಥಪ್ರೋಕ್ಷಣೆ ಮಾಡಿ ಅದರಲ್ಲಿ ಒಂದು ಭಾಗ ದೇವನಿಗಾಗಿಯೂ, ಇನ್ನೊಂದನ್ನು ಹಸುವಿಗೂ, ಮೂರನೇ ಭಾಗವನ್ನು ಜಲಚರ ಪ್ರಾಣಿಗಳಿಗೂ, ನಾಲ್ಕನೆಯ ಭಾಗವನ್ನು ತಮ್ಮೊಂದಿಗಿದ್ದ ಶಿಷ್ಯರೊಂದಿಗೆ ಭೋಜನ ಮಾಡುತ್ತಿದ್ದರು. ಒಂದು ದಿನ ವೃದ್ಧ ಬ್ರಾಹ್ಮಣ ಹಸಿದಿರುವುದನ್ನು ಕಂಡಾಗ ಅತಿಥಿದೇವೋ ಭವ ಎಂದು ತಮ್ಮ ಅನ್ನವನ್ನು ಆತನಿಗೆ ಕೊಟ್ಟರಂತೆ. ಭೋಜನಾ ನಂತರ ಮುಖ ಶುದ್ಧಿಗಾಗಿ ತುಲಸೀದಲವನ್ನಿತ್ತರಂತೆ. ಹೊಟ್ಟೆ ತುಂಬ ಭೋಜನ ಮಾಡಿದ ಆ ವೃದ್ಧ ಬ್ರಾಹ್ಮಣನು ಅಲ್ಲಿಯೇ ವಿಶ್ರಾಂತಿಗಾಗಿ ಮಲಗಿದನಂತೆ. ಸಮರ್ಥರು

ತಮ್ಮ ಪ್ರಯಾಣದ ಸಿದ್ಧತೆಯಲ್ಲಿ ನಿರತರಾದಾಗ ಆ ವೃದ್ಧ ಬ್ರಾಹ್ಮಣನು ಇಷ್ಟೇಕೆ ಅವಸರ ಇಂದು ನರಸಿಂಹ ದೇವಾಲಯದಲ್ಲಿ ನಿಮ್ಮ ಕೀರ್ತನವಾಗಲಿ ಎಂದನಂತೆ. ಅದನ್ನು ಕೇಳುವ ಅಪೇಕ್ಷೆಯು ನಮಗಿದೆ ಎಂದು ಹೇಳಿ ಆ ವೃದ್ಧನು ಹೊರಟು ಹೋದನಂತೆ. ಸಾಯಂ ಸಂಧ್ಯಾ ಮುಗಿದ ನಂತರ ಮಾರುತಿಗೆ ವಂದಿಸಿ ನರಸಿಂಹ ದೇವಾಲಯದಲ್ಲಿ ಸಮರ್ಥರು ಕೀರ್ತನಕ್ಕಾಗಿ ಸಿದ್ಧರಾದರು. ಕಣ್ಮುಚ್ಚಿಕೊಂಡು ತದೇಕ ಚಿತ್ತದಿಂದ ಧ್ಯಾನಾಸಕ್ತರಾದರು. ಶ್ರೋತೃಗಳ ಗುಂಪಿನಲ್ಲಿ, ಮಧ್ಯಾಹ್ನ ಕಂಡ ವೃದ್ಧನು ಎಲ್ಲಿಯಾದರೂ ಕಾಣಬರುತ್ತಾನೆಯೋ ಎಂದು ನೋಡಿದರು. ಆಗ ಇದ್ದಕ್ಕಿದ್ದಂತೆ ಅವರ ಮುಖದಿಂದ -

ಉಭಾಸಿಂಹಾಸನಿ ತೋಚಿದ್ವಿಜ
ವಿಕಾಸಲೆ ಆಸೆಮುಖಾಂಭುಜ

ಎಂದು ಹೇಳಿದಾಗ ಧಾರಾಕಾರವಾಗಿ ನೇತ್ರಗಳು ತುಂಬಿ ಬಂದವು.

ಆದಿಲ್‌ಶಾಹೀ ರಾಜ್ಯದಿಂದ ಈ ದೇವನಿಗೆ ಕೊಡಲ್ಪಟ್ಟ ಜಮೀನುಗಳನ್ನೆಲ್ಲ ಯಥಾರೀತಿಯಲ್ಲಿ ಮರಾಠರು ಹಿಂದಿನಂತೆ ಮುಂದುವರಿಸಿಕೊಂಡು ಬಂದಿದ್ದಾರೆ. ಔರಂಗಜೇಬನು ನೀರಾ ನರಸಿಂಹ ಕ್ಷೇತ್ರದ ಹತ್ತು ಮೈಲಿನ ಅಂತರದಲ್ಲಿರುವ ಅಕಲೂಜ ಎಂಬಲ್ಲಿ ತನ್ನ ಛಾವಣಿಯನ್ನು ಹಾಕಿದ್ದನೆಂದು ತಿಳಿದುಬರುತ್ತದೆ. ಆಗ ನರಸಿಂಹಪುರ ನಿವಾಸಿಗಳು ಈ ದೇವನನ್ನು ಗುಪ್ತ ರೀತಿಯಿಂದ ರಕ್ಷಿಸಿಕೊಂಡು ಬಂದರೆಂದು ತಿಳಿದುಬರುತ್ತದೆ.

ನೀರಾ ನರಸಿಂಹ ಕ್ಷೇತ್ರವು ಕರ್ನಾಟಕ ಹಾಗೂ ಮಹಾರಾಷ್ಟ್ರದ ನರಸಿಂಹ ಭಕ್ತರಿಗೆಲ್ಲ ಮಹಾ ಪುಣ್ಯ ಸ್ಥಳವೆನಿಸಿಕೊಂಡಿದೆ. ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಈ ಕ್ಷೇತ್ರಕ್ಕೆ ಬಂದು ಹೋಗುತ್ತಾರೆ.



# ಮಹಿಪತಿದಾಸರು

ದಾಸ ಸಾಹಿತ್ಯ ಶ್ರೀಮನ್ ಮಧ್ವಾಚಾರ್ಯರ ದ್ವೈತ ತತ್ತ್ವವನ್ನು ಅನುಸರಿಸಿಕೊಂಡು 'ದಾಸೋಹಂ' ಎಂಬ ಅಭಿದಾನದಿಂದ ದಕ್ಷಿಣ ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ ಪ್ರಚಾರಕ್ಕೆ ಬರುವಂತಾಯಿತು. ಇದೇ ಸಮಯದಲ್ಲಿ ನಮ್ಮ ನೆರೆ ನಾಡಾದ ಮಹಾರಾಷ್ಟ್ರದಲ್ಲಿ ನಾಥ ಸಂಪ್ರದಾಯವು ಬೆಳೆದು ಬಂದಿದ್ದರೆ, ಆಂಧ್ರ ಭಾಗದಲ್ಲಿ ತಾಳ್ಲಪಾಕಂ ಮನೆತನದವರು ಅನೇಕ ರೀತಿಯ ಭಕ್ತಿಗೀತೆಗಳನ್ನು ರಚಿಸಿದರು. ತಮಿಳು ನಾಡಿನಲ್ಲಿ ಆಳ್ವಾರರು ಪ್ರಾದೇಶಿಕ ಭಾಷೆಯಲ್ಲಿ ಅನೇಕ ಪ್ರಬಂಧಗಳನ್ನು ರಚಿಸಿ, ಜನಸಾಮಾನ್ಯರಲ್ಲಿ ಭಕ್ತಿ ಪಂಥವು ಬೆಳೆಯುವಂತೆ ಮಾಡಿದರು. ಹೀಗೆಯೇ ಇಡೀ ದಕ್ಷಿಣಾಪಥದಲ್ಲಿ ತಮ್ಮ ಪ್ರಾದೇಶಿಕ ಭಾಷೆಗಳನ್ನು ಬಳಸಿಕೊಂಡು ಸಂಸ್ಕೃತದಲ್ಲಿ ಅಪಾರವಾಗಿ ಹೊಮ್ಮಿಕೊಂಡಿದ್ದ ಭಕ್ತಿ ಪ್ರಧಾನವಾದ ಸಾಹಿತ್ಯವನ್ನು ಪ್ರಾಂತೀಯ ಭಾಷೆಗಳಿಗೆ ಅಳವಡಿಸಿಕೊಂಡು ಅನೇಕ ಗೀತೆಗಳನ್ನು ರಚಿಸಲಾಯಿತು.

ಕರ್ನಾಟಕ ಹರಿದಾಸಪಂಥವು ನರಹರಿ ತೀರ್ಥರಿಂದ ಪ್ರಾರಂಭಗೊಂಡು ಶ್ರೀಪಾದರಾಜರಿಂದ ಘೋಷಿತವಾಗಿ ವ್ಯಾಸರಾಯರಿಂದ ಅನೇಕ ಮುಖಗಳ ಹರವನ್ನು ಕಾಣುವಂತಾಯಿತು. ಮರೆಯಲಾಗದ ಮಹಾ ಸಾಮ್ರಾಜ್ಯವೆಂದು ಕರೆಸಿಕೊಂಡ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಈ ಸಾಹಿತ್ಯಕ್ಕೆ ವಿಶೇಷ ರೀತಿಯ ಬೆಂಬಲವೂ

ಪ್ರೋತ್ಸಾಹವೂ ದೊರೆತುದು ವಿಶೇಷದ ಸಂಗತಿ. ಅಂದು ವ್ಯಾಸರಾಯರ ಶಿಷ್ಯರಾದ ಪುರಂದರದಾಸರು, ಕನಕದಾಸರು, ವಾದಿರಾಜರು ಇವರೇ ಮೊದಲಾದವರಿಂದ ಈ ಭಕ್ತಿ ಪಂಥವು ನಾಡಿನ ತುಂಬೆಲ್ಲ ಮನೆ ಮನೆಗೂ, ಮನ ಮನಕ್ಕೂ ಮುಟ್ಟುವ ರೀತಿಯಲ್ಲಿ ಲಕ್ಷೋಪಲಕ್ಷ ರೂಪದಲ್ಲಿ ಅನುಭವಜನ್ಯವಾದ ಸಾಹಿತ್ಯವು ಹೊರಬರುವಂತಾಯಿತು.

ಹೀಗೆ ವಿಪುಲವಾಗಿ ಬೆಳೆದ ಈ ಸಾಹಿತ್ಯವು ಆ ಸಾಮ್ರಾಜ್ಯದ ವಿಪತ್ತಿನೊಂದಿಗೆ ತಾನೂ ಮರೆಯಾಗಬೇಕಾದುದು ಕನ್ನಡ ನಾಡಿನ ಸಾಹಿತ್ಯಾಭ್ಯಾಸದ ದೃಷ್ಟಿಯಿಂದ ಬಹು ವಿಷಾದನೀಯ ಸಂಗತಿ. ವಿಜಯನಗರದ ಪತನಾನಂತರ ಪುರಂದರದಾಸರಿಂದ ರಚಿತವಾದ ಪದಪದ್ಯಗಳ ಕಟ್ಟು ಹೇಗೆ ಮಾಯವಾಯಿತೋ? ಯಾವ ರೀತಿಯಲ್ಲಿ ನಶಿಸಿಹೋಯಿತೋ? ಎಂಬ ಮಾತು ಇಂದಿಗೂ ನಿಗೂಢವಾಗಿರುವುದು. ಅಂದು ಸುದೈವದಿಂದ ಜನರ ಹೃದಯದಲ್ಲಿ ಅಚ್ಚಳಿಯದೆ ಮೂಡಿದ ಭಾವ ಗೀತೆಗಳು ಕಾಲಾಂತರದಲ್ಲಿ ಅನೇಕರಿಂದ ಅನೇಕ ಬಗೆಯಾಗಿ ದೊರೆಯಲ್ಪಟ್ಟು ಪರಿಶ್ರಮ ಸಂಗ್ರಹಣೆಯಿಂದಾಗಿ ಪುರಂದರ ದಾಸರ ಸಾಹಿತ್ಯದ ಹೊತ್ತಿಗೆಗಳನ್ನು ಇಂದು ನಾವು ಕಾಣುವಂತಾಗಿರುವದು.

ವಿಜಯನಗರ ಪತನಾನಂತರ ಈ ದಾಸ ಸಾಹಿತ್ಯದ ಪ್ರವಾಹವನ್ನು ರಕ್ಷಿಸಿಕೊಂಡು ಬಂದ ಕೀರ್ತಿ ಬಿಜಾಪುರದ ಆದಿಲ್‌ಶಾಹಿ ಸಾಮ್ರಾಜ್ಯಕ್ಕೆ ಸಲ್ಲುತ್ತದೆ. ಏಕೆಂದರೆ ಪುರಂದರದಾಸರು ಕಾಲವಾದ ನಂತರ ನೂರು ವರ್ಷಗಳ ಮೇಲೆ ವಿಜಯದಾಸರು ಜನ್ಮತಾಳಿದರು. ಈ ವಿಜಯದಾಸರಿಂದ ಮುಂದೆ ಹರಿದಾಸಪಂಥದ ಪ್ರವಾಹವು ಓತಪ್ರೋತವಾಗಿ ಹರಿದುದನ್ನು ಜನಸಾಮಾನ್ಯರು ಅರ್ಥಮಾಡಿ ಕೊಂಡಿದ್ದಾರೆ. ಪುರಂದರದಾಸರು ಹಾಗೂ ವಿಜಯದಾಸರು ಇವರ ಕಾಲಾವಧಿಯ ಮಧ್ಯದಲ್ಲಿ ಕನ್ನಡ ದಾಸ ಸಾಹಿತ್ಯವನ್ನು ರಕ್ಷಿಸಿಕೊಂಡು ಬಂದ ಮಹಿಪತಿರಾಯರ ಕೃತಿಗಳನ್ನು ಕುರಿತು ಅಭ್ಯಾಸ ಮಾಡಬೇಕಾದುದು ಕನ್ನಡಿಗರ ಆದ್ಯಕರ್ತವ್ಯವೆನಿಸುತ್ತದೆ.

ವಿಜಯನಗರದ ಪತನಾನಂತರ ಹಿಂದು ಸಂಸ್ಕೃತಿ, ಹಿಂದೂ ಸಾಹಿತ್ಯ ಇವುಗಳಿಗೆ ಯಾವ ಸ್ಥಾನಮಾನಗಳೂ ಇಲ್ಲದಂತಹ

ಪರಿಸ್ಥಿತಿಯೊದಗಿದಾಗ ಆದಿಲ್‌ಶಾಹಿ ಮನೆತನದವರು ತಾವು ಸ್ವತಃ ಅನೇಕ ಭಕ್ತಿಗೀತೆಗಳನ್ನು ಪಾರ್ಸಿ ಭಾಷೆಯಲ್ಲಿ ರಚಿಸಿದರಲ್ಲದೆ ಹಿಂದೂ ದೇವತೆಗಳಾದ ಸರಸ್ವತಿ, ನರಸಿಂಹ, ಗಣಪತಿ ಹಾಗೂ ಮಹದೇವನನ್ನು ಸ್ತುತಿಸಿರುವ ಇಬ್ರಾಹಿಂ ಆದಿಲ್‌ಷಹನಿಂದ ರಚಿತವಾದ ಇಬ್ರಾಹಿಂನಾಮಾ ಗ್ರಂಥವು ಅತ್ಯಮೂಲ್ಯವಾದ ಸಂಗೀತ ಸಾಹಿತ್ಯವೆನಿಸಿಕೊಳ್ಳುತ್ತದೆ.

ಮಹಿಪತಿರಾಯರು ೧೬೧೧ರಲ್ಲಿ ಜನಿಸಿದರು, ಇವರು ಹುಟ್ಟಿದ ೨೦ ವರುಷಗಳ ಮೇಲೆ ಶಿವಾಜಿ ಜನ್ಮತಾಳಿದ. ರಾಯರು ಮೂಲತಃ ಕಾಥವಟೆ ಮನೆತನದವರು. ಇವರ ತಾತನ ಹೆಸರು ರಂಗಭಟ್ಟ. ತಂದೆಯ ಹೆಸರು ಕೋನೇರಿ ರಾಯ. ನಮಗೆ ತಿಳಿದಂತೆ ಈ ಮನೆತನದವರು ಮೊಟ್ಟಮೊದಲು ಭಾಗವತ ಸಂಪ್ರದಾಯದವರಿರ ಬಹುದೆಂದು ಭಾಸವಾಗುತ್ತದೆ. ರಾಯರು ನರಸಿಂಹ ಭಾರತೀ ದೇವಮಂದಿರದಲ್ಲಿ ಪುರಾಣ ಹೇಳುತ್ತಿದ್ದ ಕಾಲದಲ್ಲಿ ಅಂದಿನ ಪ್ರಧಾನ ಸಚಿವರ ಮಗನಾದ ಖವಾಸ್‌ಖಾನನ ಗಮನಕ್ಕೆ ಮೊಟ್ಟಮೊದಲು ಇವರು ಬರುವಂತಾದರೆಂದು ಅವರ ಜೀವನದ ಅಭ್ಯಾಸದಿಂದ ತಿಳಿದುಬರುತ್ತದೆ.

ವಿಜಾಪುರದ ಕೋಟೆಯ ಸಮೀಪದಲ್ಲಿರುವ ನರಸಿಂಹ ದೇವಾಲಯವು ದ್ವಾದಶ ರೂಪಗಳಲ್ಲೊಂದಾದ ನರಸಿಂಹನ ದೇವಾಲಯ ವಲ್ಲ. ಅದು ನರಸಿಂಹ ಭಾರತಿಗಳ ಪಾದುಕೆಗಳಿರುವ ಸನ್ನಿಧಾನದಿಂದ ಕೂಡಿದ ಒಂದು ಮಂದಿರ. ಅಲ್ಲಿ ಇವರು ಪುರಾಣ ಹೇಳುತ್ತಿದ್ದರೆಂಬುದು ಜನಜನಿತ. ಅಂದು ಇವರು ಹೇಳುತ್ತಿದ್ದ ಪುರಾಣ ಅಂದಿನ ಕಾಲದಲ್ಲಿ ಅತ್ಯಂತ ಪ್ರಚಲಿತವಾಗಿದ್ದ ಸಂತ ಏಕನಾಥ ಭಾಗವತ ಆಗಿರಬೇಕು ಎಂದು ಊಹಿಸಲು ಸಾಧ್ಯತೆಗಳಿವೆ. ನಾನು ಚಿಕ್ಕವನಿರುವಾಗ ಈ ಮಂದಿರದಲ್ಲಿ 'ಧನ್ಯಧನ್ಯಪ್ರೋ ಪ್ರದಕ್ಷಿಣ ಸದ್ಗುರುರಾಯಾಚಿ' ಎಂದು ಪಲ್ಲಕ್ಕಿ ಸೇವೆಯಲ್ಲಿ ಹಾಡುತ್ತಿದ್ದುದನ್ನು ಕೇಳಿದ್ದೇನೆ.

ವಿಜಾಪುರವನ್ನಾಳಿದ ಮಹಮದೀಯರು ತಮ್ಮ ರಾಜ್ಯದ ಆಡಳಿತ ಭಾಷೆಯನ್ನಾಗಿ ಮೋಡಿಲಿಪಿ ಹಾಗೂ ಮರಾಠಿಭಾಷೆಯನ್ನು ಹೆಚ್ಚಾಗಿ

ಬಳಸುತ್ತಿದ್ದರೆಂಬುದು ಅಂದಿನ ಕಾಲದ ದಾಖಲೆಗಳನ್ನು ಅಭ್ಯಾಸ ಮಾಡಿದಲ್ಲಿ ತಿಳಿದುಬರುತ್ತದೆ. ರಾಯರಿಗೆ ಕನ್ನಡ, ಉರ್ದು, ಪಾರ್ಸಿ ಹಾಗೂ ಮಾರಾಠೀ, ಸಂಸ್ಕೃತ ಭಾಷೆಗಳಲ್ಲಿ ಒಳ್ಳೆಯ ಪ್ರಭುತ್ವವಿತ್ತೆಂಬುದು ಅವರ ಜೀವನದ ಅಭ್ಯಾಸದಿಂದ ತಿಳಿದುಬರುವುದು. ರಾಯರು ೧೬೩೪ರಲ್ಲಿ ಮೊದಲು ಖಪಾಸ್‌ಖಾನನ ಸೇವೆಯನ್ನು ಅಂಗೀಕರಿಸಿದರು. ನಂತರ ೩೫ರಿಂದ ೫೫ರವರೆಗೆ ಅಂದರೆ ೨೦ ವರ್ಷಗಳ ಕಾಲ ಸಾಮ್ರಾಜ್ಯದ ಖಜಾಂಚಿಗಳಾಗಿ ಹಾಗೂ ಒಳ್ಳೆ ತಜ್ಞ ಎಂಜಿನಿಯರರಾಗಿ ಸೇವೆ ಸಲ್ಲಿಸಿದರು. ಈ ಇಪ್ಪತ್ತು ವರ್ಷಗಳ ಕಾಲಾವಧಿಯಲ್ಲಿ ರಾಜಧಾನಿಯಾದ ವಿಜಾಪುರ ನಗರವನ್ನು ಸರ್ವಾಂಗ ಸುಂದರವಾಗಿ ಬೆಳೆಸಿದ ಕೀರ್ತಿಗೆ ಕಾರಣರಾದವರೆಂದರೆ ಮಹಿಪತಿರಾಯರು. ಬಾದಷಹನ ಅಪ್ಪಣೆಯಂತೆ ಬಹು ಎತ್ತರದ ಸ್ಥಳ ಹುಡುಕಿ 'ಬೇಗಂ ತಾಲಾಬ್' ಎಂಬ ಕೆರೆಯನ್ನು ಕಟ್ಟಿಸಿ, ಆ ಕೆರೆಯ ನೀರು ವಿಜಾಪುರದ ತುಂಬೆಲ್ಲ ಹರಿದು ಉದ್ಯಾನವನಗಳಲ್ಲಿ ಮುಗಿಲೆತ್ತರಕ್ಕೆ ತಾನೇತಾನಾಗಿ ಕಾರಂಜಿಗಳ ರೂಪದಲ್ಲಿ ಹಾರುವಂತೆ ಮಾಡಿದವರು ಮಹಿಪತಿರಾಯರು. ಅವರ ಈ ಸಾಹಸ ಆಗ್ರಾದ ಹಾಗೂ ದಿಲ್ಲಿಯ ಕೆಂಪು ಕೋಟೆಗಳಲ್ಲಿ ತೋರುವ ವೈಭವವನ್ನು ಮೀರಿಸುವಂತೆ ಮಾಡಿತು.

ರಾಯರ ಕಾಲದಲ್ಲಿ ಆದಿಲ್‌ಷಾಹಿ ಸಾಮ್ರಾಜ್ಯದ ವೈಭವವು ಉತ್ತುಂಗ ಶಿಖರವನ್ನು ಮುಟ್ಟಿತೆಂಬ ಬಗ್ಗೆ ಇಂದು ಅವರ ಕಾಲದಲ್ಲಿ ರಚಿತವಾಗಿ ಅಳಿದುಳಿದುಕೊಂಡು ಬಂದಿರುವ ಸ್ಮಾರಕಗಳೇ ಸಾಕ್ಷಿಯಾಗಿ ನಿಂತಿವೆ.

ಮತಾಂಧನಾದ ಔರಂಗಜೇಬನು ದಕ್ಷಿಣಾ ಪಥಕ್ಕೆ ಸರ್ ಸುಬೇದಾರನೆಂದು ನಿಯುಕ್ತನಾಗಿ ಔರಂಗಾಬಾದಿಗೆ ಬಂದಾಗ ಮಹಾನುಭಾವರಾದ ಹಾಗೂ ಸೂಫಿ ಪಂಥಾನುಯಾಯಿಗಳಾದ ಶಾನುಂಗರು ಮುಂದಾಗಬಹುದಾದ ಭವಿಷ್ಯತ್ತನ್ನು ತಮ್ಮ ದೂರದೃಷ್ಟಿಯಿಂದ ಅರಿತುಕೊಂಡು ಚಿಂತಿಸಿ ಅಕಸ್ಮಿಕವಾಗಿ ಮಹಿಪತಿರಾಯರನ್ನು ಅಡ್ಡಗಟ್ಟಿ ಅವರ ಅಂತರಾತ್ಮವನ್ನು ಪರೀಕ್ಷೆಮಾಡಿ, (ಮೌತ್ ಕಾ ಫಾನ್)

ದುರ್ನಾತ ಎಂದು ಹೇಳಿ ಅದೃಶ್ಯರಾದಾಗ, ರಾಯರ ಜೀವನದ ಹೊಸದೊಂದು ಭಾಗವು ಪ್ರಾರಂಭವಾಗುತ್ತದೆ. ಅವರು ಬಾದಶಹರನ್ನು ಕಂಡು ತಮ್ಮ ಸಾಧನೆಗಾಗಿ ಅವರಿಂದ ಅಪ್ಪಣೆಯನ್ನು ಪಡೆದು ೧೬೫೫ರಿಂದ ೮೧ ರವರೆಗೆ ಕಾಖಂಡಕೀ ಗ್ರಾಮದಲ್ಲಿ ಬಂದು ವಾಸಮಾಡಬಯಸುತ್ತಾರೆ. ಈ ಕಾಲಾವಧಿಯಲ್ಲಿ ಅವರಿಗೆ ಭಾಸ್ಕರ ಸ್ವಾಮಿಗಳ ಸಹವಾಸವು ಪ್ರಾಪ್ತವಾಗುತ್ತದೆ. ಅಂದು ನಮ್ಮ ನಾಡಿನ ಪರಿಸರದಲ್ಲೆಲ್ಲಾ ಸಮರ್ಥ ರಾಮದಾಸರ ಪ್ರಭಾವವು ಸಾಕಷ್ಟು ಪ್ರಚಾರದಲ್ಲಿತ್ತು. ಮಹಾಮಹಿಮರಾದ ರುಕ್ಮಿಣಿ ಪಂಡಿತರು ೧೬೧೦ರಿಂದ ೧೭೧೦ರವರೆಗೆ ಅಂದರೆ ೧೦೦ ವರ್ಷಗಳ ಕಾಲ ಬಾಳಿದವರು. ಈ ರಾಜ್ಯದಲ್ಲಿಯೇ ಬಾಳಿದರು. ಇದೇ ಕಾಲದಲ್ಲಿ ಅಗರಖೇಡದ ದ್ವೈಪಾಯನಾಚಾರ್ಯರು, ಸಿಂದಗಿಯ ಜಕ್ಕಪ್ಪಯ್ಯನವರು ಈ ನಾಡಿನಲ್ಲಿ ಆಗಿಹೋದರೆಂದು ತಿಳಿದುಬರುವುದು. ರಾಯರು ಕಾಖಂಡಕೀ ಗ್ರಾಮಕ್ಕೆ ಬಂದನಂತರ ಸುಮಾರು ಎಂಟು ವರ್ಷಗಳ ಮೇಲೆ ಅಂದರೆ ೧೬೬೩ರಲ್ಲಿ ಅವರಿಗೆ ಮೊದಲ ಸಂತಾನವಾಯಿತೆಂದು ತಿಳಿದುಬರುವುದು.

ರಾಯರು ಸರಕಾರಿ ಚಾಕರಿಯಲ್ಲಿದ್ದಾಗ ೧೬೬೩ರಲ್ಲಿ ಗೋಲ್ಕೊಂಡದವರೊಂದಿಗೆ ಒಪ್ಪಂದವಾಗುವಂತೆ ನೋಡಿಕೊಂಡರು. ಮುಂದೆ ಕೇವಲ ಹತ್ತು ವರ್ಷಗಳಲ್ಲಿ ಶಿವಾಜಿ ತೋರಣಗಡವನ್ನು ಸ್ವಾಧೀನಪಡಿಸಿಕೊಂಡನು. ಎಲ್ಲಿಯವರೆಗೆ ಜಾವಳಿ ಪ್ರಾಂತ್ಯವು ಆದಿಲ್‌ಷಹರ ಕೈಯಲ್ಲಿತ್ತೋ, ಅಲ್ಲಿಯವರೆಗೆ ಶಿವಾಜಿಯ ಯಾವುದೇ ತರಹದ ಚಟುವಟಿಕೆಗಳ ಬಗ್ಗೆ ವಿಜಾಪುರದವರು ಅಷ್ಟೊಂದು ಗಮನಿಸಿದಂತೆ ತೋರಿಬರುವುದಿಲ್ಲ. ೧೬೫೬ರಲ್ಲಿ ಜನವರಿ ತಿಂಗಳು ಜಾವಳಿ ಪ್ರಾಂತ್ಯ ಕೈಬಿಟ್ಟು ಹೋದಮೇಲೆ ಇಡೀ ಕೊಂಕಣೂಪಥವು ಆದಿಲ್‌ಷಾಹಿ ಸಾಮ್ರಾಜ್ಯದಿಂದ ಕೈಬಿಟ್ಟು ಹೋಗುವ ಭೀತಿಯ ಪ್ರಾರಂಭವಾಯಿತು.

ರಾಯರು ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತವಾಸಿಗಳಾಗಿ ಯೋಗಾಭ್ಯಾಸ ನಿರತರಾದುದು ದಾಸ ಸಾಹಿತ್ಯದಲ್ಲಿಯೇ ವಿಶೇಷದ ಸಂಗತಿ ಎಂದೆನಿಸಿಕೊಳ್ಳುವುದು. ದಾಸ ಸಾಹಿತ್ಯದಲ್ಲಿ ಯೋಗಾಭ್ಯಾಸಕ್ಕೆ

ಅತ್ಯಂತ ಮಹತ್ವದ ಸ್ಥಾನವನ್ನಿತ್ತವರಲ್ಲಿ ಮಹಿಪತಿರಾಯರೇ ಮೊಟ್ಟಮೊದಲಿಗರೆಂಬ ಮಾತನ್ನು ನಾವು ಒಪ್ಪಿಕೊಳ್ಳಲೇ ಬೇಕಾಗುವುದು.

ಪುರಂದರದಾಸರ ನಂತರ ಆ ಸಾಹಿತ್ಯದ ಪ್ರವಾಹವನ್ನು ರಕ್ಷಿಸಿಕೊಂಡು ಬಂದವರಲ್ಲಿ ಹಿರಿಯರಾದ ಮಹಿಪತಿರಾಯರು. ಅಲ್ಲದೆ ಪುರಂದರದಾಸರಿಗೆ ದೊರೆತಂತೆ ರಾಜಾಶ್ರಯವನ್ನು ಹೊಂದಿದ ದಾಸರೆಂದರೆ ಮಹಿಪತಿದಾಸರೊಬ್ಬರೇ ವಿನಃ ಇನ್ನೊಬ್ಬರಿಲ್ಲ. ಇನ್ನುಳಿದ ದಾಸರಂತೆ ಪುರಂದರ ವಿಠಲ ಅಥವಾ ವಿಠಲ ಎಂಬ ಅಂಕಿತವನ್ನಿಟ್ಟುಕೊಳ್ಳದೆ ಅವರು ಮಹಿಪತಿ, ದಾಸ ಮಹಿಪತಿ, ಚಿಣ್ಣಮಹಿಪತಿ, ಕಂದ ಮಹಿಪತಿ, ಮೂಢ ಮಹಿಪತಿ ಎಂಬ ಹೆಸರಿನಿಂದ ಪದಪದ್ಯಗಳನ್ನು ರಚಿಸಿದರು. ಇದೇ ರೀತಿಯಾಗಿ ವಿಜಾಪುರ ಜಿಲ್ಲೆಯವರಾದ ಹಾಗೂ ಪೂರ್ವದಲ್ಲಿ ಕಾಖಂಡಕೀ ಗ್ರಾಮದವರಾದ ಮತ್ತು ವಿಜಯದಾಸರ ಸಮಕಾಲೀನವರಾದ ಪ್ರಸನ್ನ ವೆಂಕಟದಾಸರೂ ಕೂಡ ವಿಠ್ಠಲ ಪದವನ್ನು ಅಂಕಿತವಾಗಿಟ್ಟುಕೊಳ್ಳದೆ ಪ್ರಸನ್ನ ವೆಂಕಟ ಎಂಬ ಅಂಕಿತದಿಂದಲೇ ಪದಪದ್ಯಗಳನ್ನು ಬರೆದಿರುವುದರಿಂದ ವಿಜಾಪುರ ಜಿಲ್ಲೆಯು ದಾಸ ಸಾಹಿತ್ಯಕ್ಕೆ ಕೊಟ್ಟ ಒಂದು ವಿಶೇಷದ ಕೊಡುಗೆಯಾಗಿ ಮಹಿಪತಿರಾಯರು ಹಾಗೂ ಪ್ರಸನ್ನ ವೆಂಕಟದಾಸರನ್ನು ನಾವು ಕಾಣುವಂತಾದೆವು.

ಭಾಗವತ ಪಂಥದ ಪ್ರಭಾವ ಇಲ್ಲವೆ ರಾಮದಾಸ ಪಂಥೀಯರ ಪ್ರಭಾವ, ಅಥವಾ ಸೂಫೀ ಪಂಥದ ಪ್ರಭಾವದಿಂದಾಗಿ ಮಹಿಪತಿರಾಯರು ರಚಿಸಿದ ಮೊದಲನೆಯ ಕೆಲವು ಕೃತಿಗಳಲ್ಲೆಲ್ಲ ಅವರು ತಮಗೆ ಮಾರ್ಗದರ್ಶಕರಾದ ಭಾಸ್ಕರ ಸ್ವಾಮಿಗಳ ಗುರುಕಾರುಣ್ಯವನ್ನು ಕುರಿತುಬಾಯ್ತುಂಬ ಹೊಗಳಿರುವುದುಂಟು. ಹಾಗೆಯೇ ಅವರ ಮೇಲೆ ದತ್ತನ ಪ್ರಭಾವವೂ ವಿಶೇಷವಾಗಿದ್ದುದು ಕಂಡುಬರುವುದು. ಹೀಗಿದ್ದರೂ ಸಹ ಮುಂದೆ ಅವರ ಕುಲಗುರುಗಳಾದ ಪ್ರಹ್ಲಾದ ಕೃಷ್ಣಾಚಾರ್ಯರ ಸಹವಾಸ, ಉಪದೇಶಗಳು ಬೆಳೆದಂತೆಲ್ಲಾ ರಾಯರ ಮನಸ್ಸು ಸಂಪೂರ್ಣವಾಗಿ ದ್ವೈತತತ್ವದತ್ತ ಹೊರಳಿದುದು ಸ್ಪಷ್ಟವಾಗಿ ಕಂಡುಬರುವುದು. ಶ್ರೀಯುತರ ಕೃತಿಗಳಲ್ಲಿ ಪ್ರಾದೇಶಿಕ ಭಾಷಾಗಾಂಭೀರ್ಯವು ಸಾಕಷ್ಟು

ಪ್ರಮಾಣದಲ್ಲಿವೆ. ಪ್ರಾಕೃತ ಶಬ್ದಗಳು ಸ್ವಚ್ಛಂದವಾಗಿ ತಾಳ ಲಯಬದ್ಧವಾಗಿ ಅವರ ಗೀತಗಳಲ್ಲಿ ಒಕ್ಕೂಡಿಕೊಂಡು ಬಂದಿವೆ. ಅವರು ರಚಿಸಿದ ಕೆಲ ಪದ್ಯಗಳಲ್ಲಿ ಮರಾಠೀ, ಕನ್ನಡ, ಉರ್ದು ಭಾಷೆ ಸಮ್ಮಿಶ್ರಗೊಂಡು ಮೈದಳೆದು ಬಂದಿವೆ. ಇನ್ನು ಕೆಲವು ಉರ್ದು ಭಾಷೆಯಲ್ಲಿಯೇ ಪದ್ಯಗಳು ರಚಿತವಾಗಿವೆ. ಹೀಗೆ ಅವರ ಸಾಹಿತ್ಯ, ಸೃಷ್ಟಿ ಪರಿಸರದೊಂದಿಗೆ ಒಂದುಗೂಡಿಕೊಂಡು ಭಗವದನುಗ್ರಹದ ರೂಪವಾಗಿ ತಾನೇತಾನಾಗಿ ಹೊರಬಂದಿರುವುದು ವಿಶೇಷದ ಸಂಗತಿಯಾಗಿದೆ. ಶ್ರೀಯುತರ ಕಾಲದಲ್ಲಿ ಶ್ರೀಮದುತ್ತರಾದಿ ಮಠಕ್ಕೆ ಸತ್ಯನಾಥ ತೀರ್ಥರು ಮಠದ ಯತಿವರ್ಯರಾಗಿ ಇದ್ದರೆಂದೂ, ಅವರ ಕೊನೆಗಾಲದಲ್ಲಿ ಶ್ರೀ ಸತ್ಯಭೋದರು ಬಂದಿರಬಹುದೆಂದೂ ಊಹಿಸಲು ಸಾಧ್ಯತೆಗಳಿವೆ. ರಾಯರು ಮಧ್ವಾಚಾರ್ಯರಿಂದಾರಂಭ ಮಾಡಿಕೊಂಡು ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯ ತೀರ್ಥ ಇವರೇ ಮೊದಲಾದ ಯತಿವರೇಣ್ಯರ ಸ್ತೋತ್ರಗಳನ್ನು ಮಾಡಿದ್ದಾರಲ್ಲದೆ ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು ಮೊದಲಾದವರನ್ನು ಸಹ ಹೊಗಳಿದ್ದಾರಲ್ಲದೆ ತಾಳ್ಳಪಾಕಂ ಅನ್ನಮಾಚಾರ್ಯರನ್ನೂ ಸಹ ಸ್ಮರಿಸಿಕೊಂಡಿದ್ದಾರೆ. ಆದ್ಯ ಮನೆತನದ ಹಿರಿಯರನ್ನು ಬಾಯ್ತುಂಬ ಕೊಂಡಾಡಿದ್ದಾರೆ.

ಹರಿರೇವಪರೋ ಹರಿರೇವ ಗುರೋ
ಹರಿಯೇ ಗುರುವಿಂದ್ರರವಿ ಹರರೋ

- ಎಂದು ಹೇಳಿದ ರಾಯರೇ "ಹರಿ ಹರಿ ಎಂದು ನೆನೆಯೋ ಮನುಜಾ ಮರೆಯದೇ" ಎಂದು ಎಚ್ಚರಿಸಿರುವುದೂ ಉಂಟು. "ಹರಿಭಕ್ತರ ಸಂಗ ಸ್ನಾನ ಗಂಗಾ, ತುಂಗಾ, ಹರಿಮಹಿಮರ ಅಂಗ ಅಂತರಂಗ" ಎಂದು ಹೇಳಿದ ರಾಯರ ಕೀರ್ತನೆಗಳಲ್ಲಿ ಅನೇಕ ಅವತಾರಗಳ ವರ್ಣನೆ ಕಾಣಸಿಗುತ್ತದೆ. ಒಂದು ಸಂದರ್ಭದಲ್ಲಿ ಅವರು "ಸ್ವಾನಂದ ಸುಖ ಏನೆಂದು ಹೇಳಲಿ ಕೌತುಕ, ಒಡೆದು ಹೇಳುವುದಿಲ್ಲ, ಹಿಡಿದು ತಾ ಕೊಡಲಿಕ್ಕಿಲ್ಲ, ಪಡೆದುಕೊಂಡವನೆ ಬಲ್ಲ, ಗೂಡಿದನಲ್ಲ"

ಎಂದು ಅಧ್ಯಾತ್ಮದ ನಿಗೂಢತೆಯನ್ನು ತತ್ತ್ವರೂಪದಲ್ಲಿ ಎತ್ತಿತೋರಿಸಿದ್ದಾರೆ. ಮತ್ತೊಂದೆಡೆಯಲ್ಲಿ "ಸೂರ್ಯನಿಲ್ಲದೆ ಸೂರ್ಯಪ್ರಕಾಶ ತುಂಬ್ಯಾದ ಹೇಳಲೇನ ತುರೀಯಾವಸ್ಥೆಯೊಳ್ ಬೆರದು ಕೂಡಿದ ಜ್ಞಾನಿ ಬಲ್ಲಖೂನ" ಎಂದು ಭಗವದ್ರೂಪದ ಸಾಕ್ಷಾತ್ಕಾರದ ವರ್ಣನೆಯನ್ನು ಅತಿ ಸೂಕ್ಷ್ಮವಾಗಿ ಎತ್ತಿತೋರಿಸಿದ್ದಾರೆ.

ಮಹಿಪತಿರಾಯರು ಕರ್ಮಾಚರಣೆಯನ್ನು ಎತ್ತಿ ಹೇಳಲು ಇಚ್ಛಿಸದಿದ್ದರೂ ಒಂದು ಪದ್ಯದಲ್ಲಿ "ಹುರುಳಿಲ್ಲದ ಕರ್ಮಾಚರಣೆಯೊಳು ಮರುಳಾದರು ಜನರೆಲ್ಲ" - ಎಂದು ಹಾಡಿದ್ದಾರೆ. ಜ್ಞಾನಮಾರ್ಗ, ಯೋಗಮಾರ್ಗಗಳತ್ತ ಮನಸ್ಸನ್ನು ವಿಶೇಷವಾಗಿ ಹರಿಸಿದ್ದರಿಂದ ಇಂಥ ಅಮೂಲ್ಯವಾದ ಕೃತಿರಚನೆ ಅವರಿಂದ ಲಭ್ಯವಾಯಿತೆಂದು ಹೇಳಿದರೆ ತಪ್ಪಾಗಲಾರದು. ಅವರ ಪದ್ಯಗಳಲ್ಲಿ ಅಂದಿನ ಯುದ್ಧ ಸಾಮಗ್ರಿಗಳನ್ನೇ ಬಳಸಿ, ಅದನ್ನು ಆಧ್ಯಾತ್ಮ ಪರವಾಗಿ ಹಾಡಿದ ಒಂದು ಪದ್ಯವೂ ಇದೆ. "ಕಾಯದ ಕೋವಿಯನೆ ಮಾಡಿ, ಭಾವನೆಯ ಮದ್ದನೆ ತುಂಬಿ, ನೋಹ್ಯ ಸೊನ್ನೆಂದು ರಂಜಕವನಿಕ್ಕಿ, ಲಯ ಲಕ್ಷವೆಂಬ ಗುಂಡಿನಲ್ಲಿ ಭವಪಾಶವೆಂಬ ಗುರಿಯ ಕೆಡುಹಿದ ಗುರುನಾಥ" - ಇದು ನಿತ್ಯಜೀವನದ ಹೋರಾಟದಲ್ಲಿಯೂ ಆಧ್ಯಾತ್ಮದ ಗಹನತೆಯನ್ನು ತುಂಬಿದ ಮಹತಿ ಕೇವಲ ಮಹಿಪತಿರಾಯರಿಗೆ ಮಾತ್ರ ಸಲ್ಲುತ್ತದೆ.

ರಾಯರು ರಾಜಕೀಯ ಜಂಜಾಟವನ್ನು ದೂರ ತಳ್ಳಿ, ಕೆಲವು ದಿನಗಳ ಕಾಲ ಷಹಾಪೂರ್ ಗುಡ್ಡದ ಮೇಲಿರುವ ಆಂಜನೇಯನ ಬಳಿ ನಿಂತು ತಪಗೈದರೆಂದು ಐತಿಹ್ಯವಿದೆ. ಅನೇಕ ಸಲ ಗುರುಗಳನ್ನು ಹುಡುಕಿಕೊಂಡು ಕೃಷ್ಣಾತೀರದ ಕೊಲ್ಹಾರಕ್ಕೆ ಹೋಗಿ ಬರುತ್ತಿರುವುದೂ ಪದ್ಧತಿಯಾಗಿತ್ತು. ಶಿವಾಜಿಯು ಪನ್ಹಾಳಕೋಟೆಯನ್ನು ಹಿಡಿದಾಗ ಮೌಕ್ತಿಕ ಮಣಿಯಂತಿದ್ದ ಆ ಕೋಟೆಯನ್ನು ಬಿಡಿಸಿಕೊಂಡು ಬರಲು ಅಫಜಲ್ ಖಾನನ ಮರಣಾನಂತರ ಬಲಾಢ್ಯನಾದ ಯಾವ ಸರದಾರನೂ ವಿಜಾಪುರದಲ್ಲಿ ಇಲ್ಲದಿರುವಾಗ ಬಡೀ ಬೇಗಂ ತನ್ನ ಆಪ್ತ ಸಚಿವನಾದ ಕಾಶೀನಾಥ ತಿಮ್ಮಾಂಜಿಪಂತರನ್ನು ವಿಚಾರ ವಿನಿಮಯಕ್ಕಾಗಿ ರಾಯರ ಸಲಹೆಯನ್ನು ಪಡೆದುಕೊಂಡು ಬರಲು ಕಾಖಂಡಕೀ ಗ್ರಾಮಕ್ಕೆ

ಕಳುಹಿಸಿಕೊಡುತ್ತಾಳೆ. ರಾಜಕೀಯದಿಂದ ದೂರ ಉಳಿಯಲು ಪ್ರಯತ್ನಿಸಿದರೂ ಸಹ ಸಾಧ್ಯವಾಗದೆ 'ಜನನೀ ಜನ್ಮ ಭೂಮಿಶ್ಚ, ಸ್ವರ್ಗಾದಪಿ ಗರೀಯಸೀ' ಎಂಬ ಮಾತಿನಂತೆ ರಾಯರ ಮನಸ್ಸು ಕರಗಿ ಮಹಾ ಬಲಾಢ್ಯನಾದ ಸಿದ್ದಿ ಜೋಹಾರನನ್ನು ಕರೆತಂದಲ್ಲಿ ಶಿವಾಜಿಯ ಉಪಟಳವು ನಿಲ್ಲುವಂತಾಗಬಹುದೆಂಬ ಸೂಚನೆಯನ್ನು ಮಹಾರಾಣಿ ಒಪ್ಪಿಕೊಳ್ಳುತ್ತಾಳೆ. ಈ ಕೆಲಸದಲ್ಲಿ ನಿರತರಾದ ಹಾಗೂ ಯಶಸ್ವಿಗಳಾದ ಕಾಶೀನಾಥ ತಿಮಾಜಿ ಪಂತರಿಗೆ ತುಂಬಿದ ದರಬಾರಿನಲ್ಲಿ ಶಾಹೀ ದರ್ಬಾರಿನವರು ದಿಯಾನತ್ ರಾವ್ ಎಂಬ ಪದವಿಯನ್ನಿತ್ತು ಗೌರವಿಸುತ್ತಾರೆ. ಹೀಗಿದ್ದರೂ ಸಹ ಹಿಂದೂ ಪದ ಪಾದಶಾಹಿತ್ವದ ಪುನರುತ್ಥಾನದ ಸಂಕಲ್ಪದಿಂದ ಹಾಗೂ ಸಮರ್ಥ ರಾಮದಾಸರ ಸಂಪೂರ್ಣ ಅನುಗ್ರಹದಿಂದ ಈ ವಿಪತ್ತಿನಿಂದ ಶಿವಾಜಿಯು ಪಾರಾಗಿ ಹೋದುದನ್ನು ಕೇಳಿದಾಗ "ದೈವ ಮುನಿದರೆ ಯಾರೇನು ಮಾಡಬಲ್ಲರು" ಎಂಬ ಉದ್ಗಾರವನ್ನು ರಾಯರು ತಳೆಯುತ್ತಾರೆ. ಶ್ರೀಯುತರ ಕಾಲಾವಧಿಯಲ್ಲಿ ಮಥುರಾ ಹಾಗೂ ಕಾಶೀ ಕ್ಷೇತ್ರಗಳು ಮಹಮದೀಯರ ದಾಳಿಗೆ ತುತ್ತಾದಾಗ ಅವರ ಅಂತರಾತ್ಮವು ಮಮ್ಮಲ ಮರುಗುತ್ತದೆ. ೧೬೬೬ರಲ್ಲಿ ಶಿವಾಜಿಯು ಆಗ್ರಾ ಕೋಟೆಯಲ್ಲಿ ಬಂಧಿತನಾದನೆಂದು ಕೇಳಿದಾಗ ಹಿಡಿಸಲಾರದಷ್ಟು ಅವರು ವ್ಯಥೆ ಪಡುತ್ತಾರೆ. ಅನಂತರ ಆತ ಸುರಕ್ಷಿತವಾಗಿ ಬಿಡುಗಡೆ ಹೊಂದಿದನೆಂಬ ಮಾತು ಕೇಳಿಬಂದಾಗ ಸಂತೋಷ ಪಡುತ್ತಾರೆ. ರಾಯರ ಜೀವಿತ ಕಾಲದಲ್ಲಿ ಅಹಮದ್ ಆದಿಲ್‌ಷಹ, ೧೬೨೭ರಿಂದ ೧೬೫೬, ಎರಡನೆಯ ಅಲಿ ಆದಿಲ್‌ಷಹ ೧೬೫೬ರಿಂದ ೧೬೭೨, ಸಿಕಂದರ್ ಷಹ ೧೬೭೨ರಿಂದ ೧೬೮೬. ಹೀಗೆ ಮೂರು ಜನ ಆದಿಲ್‌ಷಾಹಿ ಸಾಮ್ರಾಟರು ಆಳಿಹೋಗುತ್ತಾರೆ.

ವಿಜಾಪುರ ನಗರವನ್ನು ಔರಂಗಜೇಬನು ಸರ್ವನಾಶ ಮಾಡಿ ಸಿಕಂದರ್ ಶಹನಿಗೆ ಬೆಳ್ಳಿಯ ಬೇಡಿಗಳನ್ನು ತೊಡಿಸಿ ಮೆರವಣಿಗೆ ಮಾಡುವ ಮೊದಲೇ ಐದು ವರ್ಷಕ್ಕೆ ಮುಂಚಿತವಾಗಿ ರಾಯರ ಕಾಲವಾಗುತ್ತದೆ. ಶಿವಾಜಿ ಸಾಯುವುದಕ್ಕಿಂತ ಒಂದು ವರ್ಷ ಮೊದಲು

ರಾಯರ ನಿರ್ಯಾಣವಾಗುತ್ತದೆ. ೭೦ ವರ್ಷಗಳ ಸುದೀರ್ಘ ಕಾಲದಲ್ಲಿ ರಾಯರು ಸಾಮ್ರಾಜ್ಯದ ಮಹೋನ್ನತಿಯ ದಿನಗಳನ್ನು ಕಂಡಿದ್ದಾರೆ. ಶಿವಾಜಿಯ ಅಭ್ಯುದಯವನ್ನು ಕಂಡು ಆನಂದಿಸಿದ್ದಾರೆ. ಆಶ್ರಯವಿತ್ತ ಆದಿಲ್‌ಷಾಹಿ ಸಾಮ್ರಾಜ್ಯವು ದಿನಗಳೆದಂತೆಲ್ಲ ಕುಸಿಯುತ್ತ ಮತಾಂಧರಾದ ಮಹಮದೀಯರ ಪೈಶಾಚಿಕ ವೃತ್ತಿಗೆ ಗುರಿಯಾದಾಗ ತಳಮಳಗೊಂಡಿದ್ದಾರೆ. ಹೀಗೆ ರಾಯರ ಜೀವನದಲ್ಲಿ ಆಧ್ಯಾತ್ಮದೊಂದಿಗೆ ವ್ಯಾವಹಾರಿಕ ಏರಿಳಿತಗಳು ಒಂದುಗೂಡಿಕೊಂಡು ಬಂದಿವೆ. ಅವರ ಕೃತಿಗಳಲ್ಲಿ ಈ ಏರಿಳಿತಗಳ ಹೊಳವು ಕಾಣಸಿಗುತ್ತದೆ.

ಅವರ ಕುಲಗುರುಗಳಾದ ಪ್ರಹ್ಲಾದ ಕೃಷ್ಣಾಚಾರ್ಯರು ಒಳ್ಳೆಯ ತಪಸ್ವಿಗಳು. ಶಾಸ್ತ್ರಕೋವಿದರು. ಅವರು ಕಾಶಿಯಲ್ಲಿ ಗಂಗಾತಟಾಕದಲ್ಲಿ ಅಹ್ನೀಕಕ್ಕೆ ಕುಳಿತುಕೊಂಡಿದ್ದಾಗ ತುಂಬ ಪ್ರವಾಹದ ಗಂಗೆ ಅವರ ಮೇಲೆ ಹಾದುಹೋದರೂ ನಿರ್ಭೀತರಾಗಿ ತದೇಕಚಿತ್ತದಿಂದ ಧ್ಯಾನಾಸಕ್ತರಾಗಿ, ಕುಳಿತುಕೊಂಡಿರುವುದನ್ನು ಕಂಡ ಪೀಠಾಧೀಶ್ವರರು ನಿಮ್ಮ ತಪಸ್ಸು ಪ್ರಹ್ಲಾದನಂತೆ ಎಂದು ವರ್ಣಿಸಿದ ಕಾರಣ ಆ ಮನೆತನವು ಪ್ರಹ್ಲಾದ ಕೃಷ್ಣಾಚಾರ್ಯ ಉಮ್ಮರ್ಜಿಯ ಮನೆತನವೆಂದು ಖ್ಯಾತಿಯನ್ನು ಗಳಿಸುವಂತಾಯಿತು.

ರಾಯರು ತಮ್ಮ ಇಳಿವಯಸ್ಸಿನಲ್ಲಿ ತುಂಬು ಪ್ರವಾಹದ ಕೃಷ್ಣೆಯದಂಡೆಯ ಮೇಲಿರುವ ಅನಂತಶಯನ ಸನ್ನಿಧಿಯಲ್ಲಿಯೇ ಹೆಚ್ಚಿನ ದಿನ ಕಳೆದರು. ಅವರ ದೃಷ್ಟಿಯಲ್ಲಿ ಆ ಕೃಷ್ಣೆಗೆಬದಲಾಗಿ ಗಂಗೆಯ ರೂಪವೇ ಕಾಣಿಸುತ್ತಿತ್ತು, ತಮ್ಮ ಗುರುಗಳನ್ನು ತದೇಕಚಿತ್ತದಿಂದ ಧ್ಯಾನ ಮಾಡುತ್ತ ಕೊನೆಗಾಲವನ್ನು ಕೃಷ್ಣಾತೀರದ ಕೊಲ್ಹಾರ್ ಗ್ರಾಮದಲ್ಲಿಯೇ ಕಳೆದರು. ಅವರನ್ನು ಚಿತಾಭಸ್ಮ ಮಾಡಿದ ಸ್ಥಳದಲ್ಲಿ ಒಂದು ಆಲದ ಹೆಮ್ಮರವನ್ನು ನಾವು ಕಾಣುತ್ತಿದ್ದೆವು. ಪಕ್ಕದಲ್ಲಿಯೇ ಅವರ ಸ್ಮಾರಕವಾದ ವೃಂದಾವನ ಇಂದಿಗೂ ನೋಡಬಹುದು. ಆದರೆ ಆ ಹೆಮ್ಮರವನ್ನು ಇಂದು ಕಡಿದೊಗೆದು ಭೂಮಿಯ ಸಾಗುವಳಿ ಮಾಡಿದ್ದಾರೆ. ಆ ಮಹಾವೃಕ್ಷದೊಂದಿಗೆ ಅವರ ಜೀವನದ ಸರ್ವಸ್ವವೂ ಹೋಯಿತೇನೋ ಎನ್ನುವಷ್ಟು ಭಾವನಾಜೀವಿಗಳು ಇಂದು ಮರಗುವಂತಾಗಿದೆ.

ಮಹಿಪತಿರಾಯರು ಶುದ್ಧ ಅಪ್ಪಟ ಮಾಧ್ವ ಸಂಪ್ರದಾಯದ ಹರಿದಾಸ ಪಂಥದ ದಾಸ ಶ್ರೇಷ್ಠರು. ಪುರಂದರ ದಾಸರ ನಂತರ ಅವರ ಎರಡನೆಯ ಸ್ಥಾನವನ್ನಲಂಕರಿಸಿದವರು. ಅವರ ಮಕ್ಕಳಲ್ಲಿ ಒಬ್ಬರು ಲೌಕಿಕರಾಗಿ ರಾಜಕಾರಣವನ್ನನುಭವಿಸಿ "ಡೋಣ ಶಿವಾಜೀ" ಎಂದು ಕರೆಯಿಸಿಕೊಂಡು ಅನೇಕ ಜಹಗೀರಿಗಳನ್ನು ಸಂಪಾದಿಸಿದರೂ ಸಹ ಇಂದು ಅವರ ಬಗ್ಗೆ ಯಾವ ಮಾಹಿತಿಗಳೂ ಲಭ್ಯವಾಗದಿರುವುದು ಶೋಚನೀಯ ಸಂಗತಿ. ಕೃಷ್ಣರಾಯರಿಂದ ಹಾಗೂ ಅವರ ಮೊಮ್ಮಕ್ಕಳಾದ ಕೃಷ್ಣಪ್ಪಯ್ಯನವರಿಂದ ರಚಿತವಾದ ಪದಪದ್ಯಗಳಂತೂ ದಾಸ ಸಾಹಿತ್ಯದಲ್ಲಿಯೇ ಅಜರಾಮರ ಕೃತಿಗಳೆಂದು ಕರೆಸಿಕೊಳ್ಳುವುವು. ದ್ವೈತ ದೀಕ್ಷೆಯ ಸಾಕಾರ ರೂಪವೇ ಆ ಪದ ಪದ್ಯಗಳೆಂದು ಧೈರ್ಯವಾಗಿ ಹೇಳಬಹುದು.

ವಿಜಾಪುರ ಜಿಲ್ಲೆಯು ದಾಸ ಸಾಹಿತ್ಯಕ್ಕಾಗಿ ಮಹಿಪತಿದಾಸರನ್ನು ಹಾಗೂ ಪ್ರಸನ್ನ ವೆಂಕಟದಾಸರನ್ನೂ ಅರ್ಪಿಸಿದ ಪುಣ್ಯಭೂಮಿ ಎಂಬ ಮಾತನ್ನು ಸ್ಮರಿಸಿಕೊಳ್ಳುವುದರಲ್ಲಿಯೇ ನಮಗೆ ಧನ್ಯತೆ ಎನಿಸುತ್ತದೆ.



# ಪುರಂದರದಾಸರ ಪದಗಳಲ್ಲಿ ನಾರಸಿಂಹ

ಪರಮಾತ್ಮನು ಕರುಣಾಶಾಲಿ ಎಂಬುದಕ್ಕೆ ಅವನೆತ್ತಿರುವ ಅನಂತಾವತಾರಗಳೇ ಸಾಕ್ಷಿ. ಶ್ರೀಹರಿಗೆ ಈ ಅವತಾರಗಳಿಂದ ಕಿಂಚಿತ್ತೂ ಪ್ರಯೋಜನ ಇಲ್ಲ, ಅವನು ಧರಿಸುವ ಅವತಾರಗಳಿಗೆ ಅವನ ಅಪಾರ ಕಾರಣ್ಯ ಅಥವಾ ಅವನ ಸ್ವಭಾವವಾದ ಲೀಲಾವಿನೋದ ಕಾರಣವಿದಿರಬಹುದು. ಆದರೆ ಕಾರುಣ್ಯ ಪಾತ್ರದಿಂದ ಅಖಂಡ ಭಕ್ತರ ಸಾಕ್ಷಿ ಜ್ವಲಂತವಿರುವಾಗ ಕಾರುಣ್ಯದ ಕಾರಣವೇ ಹೆಚ್ಚು ಸೂಕ್ತವೆಂದು ಕಂಡುಬರದಿರದು.

ಈ ಅವತಾರ ಕಾಲಗಳಲ್ಲಿ ನಡೆಯುವ "ಶಿಷ್ಟ ರಕ್ಷಣ, ದುಷ್ಟ ಶಿಕ್ಷಣ"ಗಳ ಮೂಲಕ ನಡೆಯುವ ಜಗದಾನಂದಕಾರಕ ಕಾರ್ಯಗಳಂತೂ ಸರಿಯಷ್ಟೆ. ಅವೇ ಅಲ್ಲದೆ ಅವತಾರವಿಲ್ಲದ ಈ ಕಲಿಯುಗದಲ್ಲೂ ಸಹ ಮಿಕ್ಕ ಮೂರುಯುಗಗಳಲ್ಲಿ ಸಂಭವಿಸಿದ ಘಟನೆಗಳಿಂದ ಮಹತ್ತರ ಫಲವಿದೆ. ಕಲಿಯುಗದಲ್ಲಿ ಸುಕೃತ ಸಾಧನೆಗೆ ಸುಲಭ ಸೋಪಾನ ಹರಿನಾಮಸ್ಮರಣೆ ಇಂತಹ ಹರಿಯ ಅನಂತ ನಾಮಗಳಿಗೆ ಭಕ್ತರ ಜಿಹ್ವೆಯನ್ನು ಅನುವಾಗಿಸುವುದು ಅವನ ಅವತಾರಗಳು. ಅವತಾರಗಳಿಂದಾಗುವ ಈ ಬಗೆಯ ಪುಣ್ಯಸಾಧನೆಯು ಪುರಾಣಗಳ ಮೂಲಕ ನೆರವೇರುವಂತೆ ಕನ್ನಡನಾಡಿನಲ್ಲಿ ಆವಿರ್ಭವಿಸಿದ ಹರಿದಾಸರು, ಹರಿನಾಮ ಪೀಯೂಷವನ್ನು ತಮ್ಮ ನಲ್ನುಡಿಗಳ ಮೂಲಕ ಭಕ್ತಕೋಟಿಗೆ

ವದಗಿಸುವುದರ ಮೂಲಕ ಶ್ರೀಹರಿಯ ಅವತಾರಗಳ ಉದ್ದೇಶವನ್ನು ಪ್ರಕಟ ಪಡಿಸಿದ್ದಾರೆ.

ಹರಿದಾಸ ಕೂಟಕ್ಕೆ ನೇತಾರರಾದ ಶ್ರೀ ಪುರಂದರ ದಾಸರು ಕೊಂಡಾಡದ ಶ್ರೀಹರಿಯ ಅವತಾರವಿಲ್ಲ. ಅವರು ಹಾಡಿದ ಶ್ರೀ ನೃಸಿಂಹದೇವರ ಮಹಿಮೆ.

ಪ್ರಹ್ಲಾದೋದ್ಧಾರಕ್ಕಾಗಿ ಸ್ತಂಭೋದ್ಭವನಾದ ನರಹರಿ ಹಿರಣ್ಯಕಶಿಪುವಿನ ಸಂಹಾರಮಾಡಿ ಶಿಷ್ಟರಿಗಾನಂದವನ್ನಿತ್ತಿದ್ದು ಸರ್ವವಿದಿತ. ಆದರೆ ಈ ವಿಷಯದಲ್ಲಿ ಶ್ರೀ ಪುರಂದರದಾಸರ ಬಣ್ಣನೆ ಹೀಗಿದೆ. - "ದಾನವನ ಕಾಣೆರೋ, ಗಾನವಿನೋದಿ ನಮ್ಮ ತೊರವೆಯ ನಾರಸಿಂಹ".

ಅಚ್ಚ ಪುರುಷನೆಂಬ ರತ್ನವಿದ್ದ ಒಡಲೊಳು ಬಿಚ್ಚಿ ಬೆದಕಿ ನೋಡಿದರಿನ್ನೆಷ್ಟು ಇದ್ದಾವೋ ಎಂದು ॥೧॥
ನೆಂಟತನವು ಬೆಳೆಯಬೇಕೆಂದು ಕರುಳ ಕೊರಳೊಳು ಗಂಟು ಹಾಕಿಕೊಂಡನೆಷ್ಟೋ ದೇಹ ಸಂಬಂಧದಿಂದ ॥೨॥

ಈ ಮಾತುಗಳು ದಾಸರ ಕಾವ್ಯಪ್ರತಿಭೆಯೊಂದಿಗೆ ಅವರರಿತ ಪರಮಾತ್ಮನ ವಿಶಾಲ ಹೃದಯವನ್ನು ಬಿಂಬಿಸುತ್ತವೆ. ದಾಸರು "ಮಹದಾದಿ ದೇವನಮೋ" ಎಂಬ ಪದದಲ್ಲಿ, "ತರಣಿಗುಬ್ಬ ಸವಾಗೆ, ತಾರಾಪತಿಯು ನಡುಗೆ, ಸುರರು ಕಂಗೆಟ್ಟೋಡೆ ನಭವ ಬಿಟ್ಟು. ತರುಗಿರಿಗಳಲ್ಲಾಡೆ, ಶರಧಿಗಳು ಕುದಿದುದಕ್ಕೆ, ಉರಿಯನುಗುಳುತ ಉದ್ಭವಿಸಿದ ನರಸಿಂಹ" ಎಂದೂ, ಸಿಡಿಲಂತೆ ಗರ್ಜಿಸುತ ಕುಡಿಯ ನಾಲಿಗೆ ಚಾಚಿ ಅಡಿಗಡಿಗೆ ಲಂಘಿಸುತ ಕಡುಕೋಪದಿಂದ ಮುಡಿಹಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ ಕಡು ಉದರ ಬಗೆದ ಕಡುಗಲಿ ನಾರಸಿಂಹ ಎಂಬುದಾಗಿ ನರಸಿಂಹದೇವರ ರೌದ್ರರೂಪವನ್ನು ವರ್ಣಿಸುತ್ತಾರೆ. ಅಸುರ ದಮನ ಕಾಲದಲ್ಲಿ ಈ ಭಯಂಕರಾಕೃತಿ ಇದ್ದರೂ ಮುಂದೆ, "ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ ಸುರರು ಅಂಬರದಿ ಪೂಮಳೆಯ ಕರೆಯೆ ಸಿರಸಹಿತ ಗರುಡಾದ್ರಿಯಲ್ಲಿ ನಿಂತು ಭಕುತರನ ವಾತ್ಸಲ್ಯ ಭಾವವನ್ನ ಶ್ಲಾಘಿಸಿದ್ದಾರೆ."

"ನರಸಿಂಹನ ಪಾದಭಜನೆಯ ಮಾಡಲು ದುರಿತ ಪರ್ವತ ಖಂಡಿಸುವ ಕುಲಿಶದಂತೆ" ಎಂಬುದು ಪುರಂದರದಾಸರ ವಾಕ್ಯ ಅದಕ್ಕೆ ನಿದರ್ಶನ, "ತರಳನ ಮೊರೆ ಕೇಳಿ ತವಕದಿಂದಲಿ ಬಂದು ದುರುಳನ ಕೊರಳನು ಕೊರಳಲಿ ಧರಿಸಿ ಮದೇ ಆಗಿದೆಯೆಂದುದಾಸರ ಅಭಿಪ್ರಾಯ. "ಹಸುಳೆ ಪ್ರಹ್ಲಾದನ ತಲೆಗಾಯ್ದ ಮಂತ್ರ ಶ್ರೀ ನರಸಿಂಹ ಮಂತ್ರ" ಎಂದು ಹೇಳುವಲ್ಲಿ ದಾಸರು, ಪ್ರಹ್ಲಾದನನ್ನು ಅವನ ತಂದೆ ನಾನಾ ವಿಧವಾಗಿ ಮೃತ್ಯುಮುಖಕ್ಕೆ ನೂಕಿದಾಗ ಪ್ರಾಣವನ್ನು ಕಾಪಾಡಿದ್ದಷ್ಟೇ ಅಲ್ಲದೆ, ಸರ್ವ ವ್ಯಾಪ್ತಿತ್ವವನ್ನು ನಿಶ್ಚಲವಾಗಿ ನಂಬಿ ಜಡವಾದ ಕಂಭದಲ್ಲೂ ಹರಿ ಇದ್ದಾನೆಂದು ಹಸುಳೆ ಘೋಷಿಸಿದಾಗ ಅವನ ಮಾನವನ್ನು ಕಾಯ್ದದ್ದು "ಶ್ರೀ ನಾರಸಿಂಹ ಮಂತ್ರ" ಎಂದು ಸ್ಪಷ್ಟಪಡಿಸಿದ್ದಾರೆ.

"ಸ್ಮರಿಸುವ ಜನಕ್ಕೆಲ್ಲ ಭವ ಭಯ ಪರಿತಾಪಗಳಿಲ್ಲ ಶರಣಾಗತ ಜನ ವತ್ಸಲನೆನಿಸಿದ ಕರಿಗಿರಿ ದುರ್ಗದ ನರಹರಿ ನಿನ್ನನು" ಎನ್ನುವ ಕೀರ್ತನೆಯಲ್ಲಿ ತುಮಕೂರಿಗೆ ೯ ಮೈಲಿ ದೂರದಲ್ಲಿ ಶೋಭಿಸುತ್ತಿರುವ ಕರಿಗಿರಿ ಕ್ಷೇತ್ರವೆಂದು ಪ್ರಸಿದ್ಧವಾದ ದೇವರಾಯನ ದುರ್ಗದ ನರಸಿಂಹ ದೇವರ ವರ್ಣನೆಯಿದೆ.

"ಸರ್ವ ಕಾಲದೊಳು ಮಹಾನಂದದಿ ದುರ್ವಾಸರು ಪೂಜಿಪ ಮೂರುತಿ" ಎಂದೂ, 'ಅತ್ತಿಯ ಮರದಲ್ಲಿ ಕಾಯ್ಗಳು ಹತ್ತಿರ' ವಂದದಲಿ, ಮೊತ್ತಮೊತ್ತವಾದ ಬ್ರಹ್ಮಾಂಡ ನಿನ್ನೊಳು ಹತ್ತಿ ಕೊಂಡಿಪ್ಪುದನಂತ ಕೋಟಿ ಎಂದೂ, 'ಭೂತಗ್ರಹಾದಿಗಳು ಸೋಂಕಿದ ಭೀತಿ ಜ್ವರಾದಿಗಳು ಸೇತೋಮುಖ ನಿನ್ನ ನೋಡಲು ಇನ್ನಾ ಪಾತಕವಳಿದು ಯಾತನೆ ಕಳೆವುದು' ಎಂದು ಶ್ರೀ ಕರಿಗಿರಿಶನ ಅನಂತ ಮಹಿಮೆಯನ್ನು ಕೊಂಡಾಡಿದ್ದಾರೆ.

ಅಂತೆಯೇ 'ಶರಣು ಶರಣು ಶರಣ್ಯವಂದಿತ ಶಂಖ ಚಕ್ರ ಗಧಾವರ! ಶರಣು ಸರ್ವೇಶ್ವರಗೆ ಅಹೋಬಲ ಗಿರಿಯ ನರಸಿಂಹ ಮೂರ್ತಿಗೆ' ಎಂಬ ಪದದಲ್ಲಿ ವರ್ಣನೆ ಸೊಗಸಾಗಿ ಮೂಡಿದೆ.

'ಶ್ರೀಲಪದಲಿ ಶಿಶು ನಿಮ್ಮ ಕರೆಯಲು ಕಾಲಿಲೊದ್ದತಿ ಖಳನನ್ನು' ಉಕ್ಕಿನ ಕಂಭದಿ ಬಂದ ಶ್ರೀ ನರಸಿಂಹ ಹೇಗಿದ್ದನಂತೆ - "ಮೋರೆ ಕೆಂಗೆರೆ ಕಣ್ಣು ಕಿವಿ ತೆರೆ ಮೂಗಿನ ಬಾಯಿ ಮೂಗಿನ ಶ್ವಾಸದಿ ಮೇರುವಿಗೆ ಮುಗಿಲೆನಿಸಿ ಮೆರೆಯುತ ತೋರ ಕಿಡಿಗಳ ಸೂಸುತ ಸಾರಿ ಸಾರಿಗೆಪ್ಪದಯ ರಕುತವ ಘೀರು ಘೀರನೆ ಹೀರುತ" ಇಂತಹ 'ಕರಳ ನರಸಿಂಹಮೂರ್ತಿ' "ಹರನು ವಾರಿಜನಾಭನು ಕರಯುಗವ ಮುಗಿದ ಜಯಜಯವೆನುತಿರೆ ತರಳ ಪ್ರಹ್ಲಾದನು ತಾನಾಗ ಶಿರವಬಾಗಿ ಪೊಗಳಲು ಸುರರು ಪೂಮಳೆಗರೆಯೆ ಹರುಷದಿ ಸರಸಿಜಾಕ್ಷನು ಶಾಂತದಿ ಸಿರಿಸಹಿತದಿ ಮೆರೆದ" ಎಂಬುದಾಗಿ ದಾಸರು ಸ್ತೋತ್ರ ಮಾಡಿದ್ದಾರೆ.

ಇನ್ನು ದಶಾವತಾರ ವರ್ಣಿಸುವ ಪದಗಳಲ್ಲಿ ನರಸಿಂಹಾವತಾರದ ವರ್ಣನೆ ದಾಸರ ಮುಖದಿಂದ ಅಲ್ಲಲ್ಲಿ ಹೊಮ್ಮಿದೆ. ಒಂದೆಡೆ ಮೂರೆರಡರಿಯದ ಪೋರನ ಮಾತಿಗೆ ಘೋರ ದಾನವನ ಸಂಹಾರ ಮಾಡಿದಿ ಎಂದು ರಮ್ಯವಾಗಿ ಬಣ್ಣಿಸುತ್ತಾರೆ. ಅರಿಷಡ್ವರ್ಗಗಳ ಸುಳಿವೇ ಇಲ್ಲದ ಕಂದ ಪ್ರಹ್ಲಾದನಿಗೆ ಒಲಿದು ಹಿರಣ್ಯಕನ ನಿಗ್ರಹಹರಿಗೈದನೆಂದು ದಾಸರ ಪ್ರಾಸಾದಿಕವಾಣಿಯ ಅರ್ಥ, ಈ ರೀತಿಯ ಹೃದಯಂಗಮ ನುಡಿಗಳು ದಾಸರ ಬಾಯಿಂದ ಯಥೇಷ್ಟವಾಗಿ ಬಂದಿವೆ.

ಹೀಗೆ ಶ್ರೀ ಪುರಂದರದಾಸರ ನುಡಿಸ್ತಂಭದಿಂದ ಒಡಮೂಡಿದ ಪ್ರಹ್ಲಾದವರದನು ನಮಗೆ ಅಹ್ಲಾದ ಕೊಡಲೆಂದು ನರಸಿಂಹಗೆ 'ಜಯ ಮಂಗಳಂ ನಿತ್ಯ ಶುಭಮಂಗಳಂ' ಎಂದು ತಲೆಬಾಗೋಣ.



# ಆದಿವಾಸಿ ಗೊಂಡಜನಾಂಗವು ಕಂಡ ಧರಿತ್ರಿ

---

ಆಂಧ್ರ, ಮಹಾರಾಷ್ಟ್ರ ಮತ್ತು ಓರಿಸ್ಸಾ ಪ್ರಾಂತಗಳಲ್ಲಿ ಸುಮಾರು ಇಪ್ಪತ್ತೈದು ಲಕ್ಷಕ್ಕಿಂತ ಹೆಚ್ಚಾಗಿ ಗೋಂಡ ಜನಾಂಗವಿದೆ. ಇದರಲ್ಲಿ ಆದಿಲಾಬಾದ್ ಜಿಲ್ಲೆಯಲ್ಲಿಯೇ ಒಂದು ಲಕ್ಷ ಜನರಿದ್ದಾರೆ. ಈ ಜನಾಂಗದ ದಂತಕಥೆಗಳನ್ನಭ್ಯಾಸ ಮಾಡಿದಲ್ಲಿ ಬಹುಕಾಲದ ಹಿಂದೆ ಇವರು ಹೊರಭಾಗದಿಂದ ಬಂದು ಈ ಜಿಲ್ಲೆಯುಲ್ಲಿ ವಾಸಮಾಡಿರಬಹುದೆನಿಸುತ್ತದೆ. ಮೂಲ ಮಾನವಶಾಸ್ತ್ರದೊಂದಿಗೆ ಅಭ್ಯಾಸ ಮಾಡತೊಡಗಿದಾಗ ಇವರೆಲ್ಲ ಬೇರೆ ಬೇರೆ ವಂಶದವರಾಗಿದ್ದು ಒಂದೇ ಸಂಸ್ಕೃತಿಯಿಂದ ಕೂಡಿದವರೆನಿಸುತ್ತದೆ. ಈ ಜನಾಂಗದಲ್ಲಿ ತಮ್ಮದೇ ಆದ ಮೂಲವನ್ನು ಗುರುತಿಸಲು ಕೆಲವು ಅಖ್ಯಾಯಿಕೆಗಳೊಂದಿಗೆ ಸೃಷ್ಟಿಯ ಆರಂಭ ಹೇಗಾಯಿತೆಂಬ ಬಗ್ಗೆಯೂ ಕುಲೋತ್ಪತ್ತಿ ಹೇಗಾಯಿತೆಂಬ ಬಗ್ಗೆಯೂ ಕೆಲವು ಅಪರೂಪದ ಕಥೆಗಳು ಬಳಕೆಯಲ್ಲಿವೆ.

**ಶೂನ್ಯದಿಂದಲೇ ಶೂನ್ಯದ ನಿರ್ಮಾಣ:** ಪ್ರಾರಂಭದಲ್ಲಿ ಏನೂ ಇರಲಿಲ್ಲ. ಬರೀ ಶೂನ್ಯ. ಶೂನ್ಯದ್ವೀಪದಲ್ಲಿ ಶೂನ್ಯ ಗುರುವಿನ ಜನನವಾಯಿತು. ಹಾಗೂ ಭಂಗ ಸ್ವಯಂಭೂ ಅನಾದಿ ಪ್ರಭುವಿನ ಜನ್ಮವಾಯಿತು. ಪ್ರಭು ನಿರಂಜನರು ಶೂನ್ಯ ದ್ವೀಪದಲ್ಲಿರುತ್ತಿದ್ದರು. ಅವರಿಗೆ ಬಂಗಾರದ ಸಿಂಹಾಸನವಿತ್ತು. ಅಮೇಲೆ ಮರಗುರು ಹಾಗೂ

ಕಂಕಾಜಿಯವರಿಂದ ನೀರಿನ ಉತ್ಪತ್ತಿಯಾಯಿತು. ಹೀಗೆ ಉತ್ಪತ್ತಿಯಾದ ನೀರಿನಲ್ಲಿ ಏಳು ಪ್ರಕಾರಗಳಿದ್ದವು. ಅಶಿಜಲ, ಮಾಸಿಜಲ, ಮಹಿಜಲ, ರಹೀಜಲ, ಶುಭ್ರಜಲ ಇವೇ ಮೊದಲಾದ ಜನಗಳಿದ್ದವು. ವಾಯುಚಕ್ರ ಗುರುವಿನಿಂದಾಗಿ ನೀರು ವಿಸ್ತಾರವಾಗತೊಡಗಿತು. ಬಿರುಗಾಳಿಯು ಬೀಸಲಾರಂಭಿಸಿತು. ಮಿಂಚು ಹೊಳೆಯ ತೊಡಗಿತು. ಎಲ್ಲೆಡೆಗೂ ಕತ್ತಲೆಯೋ ಕತ್ತಲೆ. ಹೀಗೆಪನ್ನೆರಡು ವರುಷ ಕತ್ತಲೆಯು ಆವರಿಸಿಕೊಂಡಿತ್ತು. ಇದೇ ಕಾಲದಲ್ಲಿ ಜಪದೇವ ಗುರುವಿನ ಜನ್ಮವಾಯಿತು. ಆತನು ಜಲದ ಮೇಲೆ ಕುಳಿತಿದ್ದ. ಅದರಿಂದ ನೀರು ಮುಚ್ಚಿ ಹೋಯಿತು. ಆಮೇಲೆ ಗಾಳಿ ಗುರುವಿನ ಜನ್ಮವಾಯಿತು. ಈ ಪವನಗುರು ಹಾಗೂ ಜಲದಿಂದಾಗಿ ನಾಲ್ಕು ಕಮಲಗಳು ಹುಟ್ಟಿಕೊಂಡವು. ಅವುಗಳನ್ನು ಜಲಜಾಪಿ, ಜಲಕಾಪಲಿ, ಜಲಪವನ, ಹೆಸರುಗಳಿಂದ ಗುರುತಿಸತೊಡಗಿದರು. ಜಲಜಾಪಿ ಕಮಲವರಳಿ ಅದರಿಂದ ರಾಜಸೇಕಾ (ಶೇಷ) ಈತನ ಜನನವಾಯಿತು. ಜಲಕಾಪಲಿ ಕಮಲದಿಂದ ಕಾಮಧಾಮ ಕಸ್ತೂರಿಯ (ಕಾಮಧೇನು) ಜನ್ಮವಾಯಿತು.

**ಮಹಾಶಕ್ತಿಯ ಗರ್ಭಧಾರಣೆ:** ಒಂದು ದಿನ ಜಲಪವನವೆಂಬ ಕಮಲವರಳಿತು. ಅದರಿಂದ ಧುಂಡಮುಂಡ ಗುರುವಿನ ಜನ್ಮವಾಯಿತು. ಕಾಮಧಾಮ ಕಸ್ತೂರಿ (ಕಾಮಧೇನು)ಯ ಸಗಣಿಯಿಂದ ಬಂಗಾರದ ಒಂದು ಅರಮನೆಯು ಹುಟ್ಟಿಕೊಂಡಿತು. ಆ ಅರಮನೆಯಲ್ಲಿ ಧುಂಡಮುಂಡ ಗುರುಗಳು ವಾಸ ಮಾಡತೊಡಗಿದರು. ಆಮೇಲೆ ಜಲಚಾಕಾ ಎಂಬ ಕಮಲದಿಂದಾಗಿ ಮೇಹೀ ಶಕ್ತಿಯ (ಮಹಾಶಕ್ತಿ) ಅವತಾರವಾಯಿತು. ಅವಳ ಮುಖವು ಮುತ್ತಿನದಾಗಿತ್ತು. ರೆಕ್ಕೆಗಳು ವಜ್ರದಿಂದ ಕೂಡಿದ್ದವು. ಬಂಗಾರದ ಕಾಲುಗಳಿದ್ದವು. ಆ ಶಕ್ತಿಯ ಅವತಾರವಾದೊಡನೆ ಪುನಃ ಬಿರುಗಾಳಿ ಬೀಸತೊಡಗಿತು. ಎಲ್ಲೆಡೆಗೂ ಅಂಧಕಾರವಿತ್ತು. ಎಲ್ಲಿ ನೋಡಿದರೂ ನೀರೆ ನೀರು. ಮಹಾಶಕ್ತಿ ಕಣ್ತೆರೆದು ನಾಲ್ಕೂ ಕಡೆಗೆ ನೋಡಿದಳು. ಅವಳಿಗೆ ನಿಂತೇನೆಂದರೂ ಸಹ ಸ್ಥಳವಿರಲಿಲ್ಲ. ಆದಕ್ಕಾಗಿ ಅವಳು ಆಕಾಶಕ್ಕೆ ಹಾರಿದಳು. ಆರು ತಿಂಗಳ ಕಾಲ ಅಂತರಾಳದಲ್ಲಿದ್ದಳು. ಅಲ್ಲಿಯೂ ಅವಳಿಗೆ ಸ್ಥಳವು

ದೊರೆಯಲಿಲ್ಲ. ಕೊನೆಗೊಮ್ಮೆ ಅವಳಿಗೆ ಬಂಗಾರದ ಅರಮನೆಯು ಕಾಣಿಸಿತು. ವಿಶ್ರಾಂತಿಗಾಗಿ ಆ ಮಹಲಿನ ಶಿಖರದ ಮೇಲೆ ಕುಳಿತುಕೊಂಡಳು. ಆಗ ಆ ಮಹಲು ಅಲುಗಾಡತೊಡಗಿತು. ಅಲ್ಲಿ ವಾಸವಾಗಿದ್ದ ದುಂಢಮುಂಡ ಗುರು ನನಗಿಂತಲೂ ಶಕ್ತಿಶಾಲಿಯಾದವರು ಯಾರಿರಬಹುದು ಎಂದು ವಿಚಾರ ಮಾಡತೊಡಗಿದರು. ಆಗ ಮಹಾಶಕ್ತಿಯ ದೃಷ್ಟಿ ಅತನತ್ತ ಹೊರಳಿತು. ಅವರಿಗೆ ಗಾಬರಿಯಾಗತೊಡಗಿತು. ಧುಂಡಮುಂಡ ಗುರುವು ಇಲ್ಲಿಂದ ನೀನು ಹೊರಟು ಹೋಗು ಎಂದು ಹೇಳತೊಡಗಿದನು. ಶಕ್ತಿದೇವತೆ ಹಾಗೂ ಧುಂಡಮುಂಡ ಗುರು ಒಬ್ಬರನ್ನೊಬ್ಬರು ಏಕಾಗ್ರಚಿತ್ತದಿಂದ ನೋಡ ತೊಡಗಿದರು. ಇದರಿಂದಾಗಿ ಮಹಾಶಕ್ತಿಯು ಗರ್ಭಧಾರಣೆ ಮಾಡಿದಳು. ಅವಳ ಗರ್ಭವು ಅರಮನೆಯನ್ನೆಲ್ಲ ವ್ಯಾಪಿಸಿಕೊಂಡಿತು. ಒಂಬತ್ತು ತಿಂಗಳಾದ ಮೇಲೆ ಒಂದು ಅಂಡ (ತತ್ತಿ)ವು ಹೊರಬಂದಿತು. ಅದು ಮೂರುವರೆ ಗಜದಷ್ಟು ಉದ್ದವಾಗಿತ್ತು. ಒಂಬತ್ತು ತಿಂಗಳು ಒಂಬತ್ತು ದಿನ ಹಾಗೂ ಒಂಬತ್ತು ಗಂಟೆಗಳ ಕಾಲ ಹಾಗೆಯೇ ಇತ್ತು. ಮುಂದೆ ಅಂಡಾಕಾರದ ಮೇಲ್ಭಾಗವನ್ನು ವಾಯು ಗುರುವು ಹಾರಿಸಿದನು. ಉಳಿದ ಗರ್ಭಭಾಗದಿಂದ ಇಪ್ಪತ್ತೊಂದು ಸ್ವರ್ಗಗಳು ನಿರ್ಮಾಣಗೊಂಡವು.

**ಹನ್ನೆರಡು ಸೂರ್ಯರ ಜನನ:** ಸ್ವರ್ಗದಲ್ಲಿ ನವಕೋಟಿ ಧವರಾಗಿರಿ (ಧವಲಗಿರಿ) ಪರ್ವತದ ನಿರ್ಮಾಣವಾಯಿತು. ಆ ಪತರ್ವತದ ಮೇಲೆ ಬಂಗಾರದ ಸಿಂಹಾಸನವಿತ್ತು. ಆ ನಂತರ ಯವಧಾನ ಗುರುವಿನ ಅವತಾರವಾಯಿತು. ಆತನಿಗೆ ಹನ್ನೆರಡು ಸೂರ್ಯರ ಜನಿವಾರ, ಹನ್ನೆರಡು ಚಂದ್ರರ ಬಟ್ಟೆಗಳು, ಏಳು ನಕ್ಷತ್ರದ ಮಾಲೆಗಳು, ನಾಲ್ಕು ಕಣ್ಣುಗಳಿದ್ದವು. ಸೂರ್ಯ, ಚಂದ್ರ ಹಾಗೂ ನಕ್ಷತ್ರ ಮಾಲೆಗಳಿಂದಾಗಿ ವಿಶ್ವವೆಲ್ಲ ಬೆಳಕುಗೊಂಡಿತು. ಯವಧಾನ ಗುರುವಿನೊಂದಿಗೆ ಅನ್ನರಾಣಿ (ಅನ್ನದೇವತೆ)ಯ ಜನ್ಮವಾಯಿತು. ಆಮೇಲೆ ಸಟವಾಯಿ (ಸೃಷ್ಟಿಕರ್ತ) ಬ್ರಹ್ಮದೇವನು ಹುಟ್ಟಿಕೊಂಡನು. ಆತನಿಂದ ಏಳು ಕೋಟಿ ದೇವತೆಗಳು ಹುಟ್ಟಿಕೊಂಡರು. ಆಮೇಲೆ "ಶ್ರೀ ಇಷ್ಣು" (ವಿಷ್ಣು), ಶ್ರೀ ಕೃಷ್ಣ (ಶ್ರೀಕೃಷ್ಣ) ಆದಿದೇವ ಹಾಗೂ

ಗೋಪದೇವ ಇವರುಗಳ ಜನನವಾಯಿತು. ಇವರೆಲ್ಲರೂ ಭಗವಾನ್ ದ್ವೀಪದಲ್ಲಿರತೊಡಗಿದರು. ಇವರ ನಂತರ ನವದೇವ ಹಾಗೂ ಗೋವದೇವರ ಜನ್ಮವಾಯಿತು. ಇವರು ಭಂಡಾರಾ ದ್ವೀಪದಲ್ಲಿ ವಾಸ ಮಾಡತೊಡಗಿದರು.

ಯವಧಾನಗುರು ಧವಲಗಿರಿ ಪರ್ವತದ ಮೇಲಿರುತ್ತಿದ್ದನಷ್ಟೇ. ಆಗ ಇದ್ದಕ್ಕಿದ್ದಂತೆ ಸಮುದ್ರದ ನೀರು ಉಕ್ಕೇರಲಾರಂಭಿಸಿತು. ಅದರ ರಭಸಕ್ಕೆ ಪರ್ವತವು ಅಲುಗಾಡತೊಡಗಿತು. ಇದರಿಂದಾಗಿ ಪರ್ವತ ಮುಳುಗಿಹೋಗುವದೋ ಎಂದೆನಿಸ ತೊಡಗಿತು. ದೇವತೆಗಳಲ್ಲಿ ಚಿಂತೆ ಆವರಿಸಿಕೊಂಡಿತು. ಇಷ್ಟು, ಕಷ್ಟ, ಅಪದೇವ, ಗೋಪದೇವ ಹಾಗೂ ಮಹದೂ (ಮಹಾದೇವ) ಇವರೆಲ್ಲರೂ ಧವಲಗಿರಿಗೆ ಬಂದಿಳಿದರು. ಅವರು ವಾಸಿಸುತ್ತಿದ್ದ ದ್ವೀಪದಲ್ಲಿ ಹೊಟ್ಟೆಗೆ ಆಹಾರವೇ ಸಿಗದಂತಾಗಿತ್ತು. ಆದುದರಿಂದ ಅವರೆಲ್ಲರೂ ಬಂದು ಯವಧಾನ ಗುರುವಿನ ಸೇವೆ ಮಾಡತೊಡಗಿದರು.

**ಮಹದೂ ಅಳಲಾರಂಭಿಸಿದನು:** ಮಹದೂ (ಮಹಾದೇವ) ಎಲ್ಲರಿಗಿಂತ ಚಿಕ್ಕವನಾದುದರಿಂದ ಹಸಿವೆಯಿಂದ ಆತನು ಅಳಲಾರಂಭಿಸಿದನು. ಅದನ್ನು ಕಂಡ ಯುವಧಾನ ಗುರು ಆತನನ್ನು ತನ್ನ ಪಂಕ್ತಿಯಲ್ಲಿ ಕೂಡುವಂತೆ ಹೇಳಿದನು. ಅಂದಿನಿಂದ ಮಹದೂ ಪ್ರತಿದಿನ ಗುರುವಿಗೆ ಹುಕ್ಕಾ ತುಂಬಿ ಕೊಡುವ ಕಾರ್ಯವನ್ನೊಪ್ಪಿಕೊಂಡನು. ಅನಂತರ ಯವಧಾನ ಗುರುವು ಒಂದು ಕರಾರವನ್ನು ಮಂಡಿಸಿದನು. ಯಾರು ಪಾತಾಳವನ್ನು ಶೋಧ ಮಾಡುವರೋ ಅಂಥವರಿಗೆ ನಾನು ಧವಲಗಿರಿ ರಾಜ್ಯವನ್ನೊಪ್ಪಿಸುವುದಾಗಿ ತಿಳಿಸಿದನು. ಈ ಕಾರ್ಯವು ನಮ್ಮಿಂದಾಗಲಾರದ್ದು ಎಂದು ಒಂಬತ್ತು ಕೋಟಿ ದಾನವರು ಹಾಗೂ ಋಷಿಗಳು ಹೇಳಿದರು. ಅಗ್ನಿಋಷಿ, ಅಂತಋಷಿ, ವಾಗಋಷಿ, ದಂತಋಷಿ, ಇವರೆಲ್ಲರೂ ತಮ್ಮಿಂದ ಈ ಕಾರ್ಯವಾಗದು ಎಂದು ಹೇಳಿದರು. ಮುನ್ನೂರು ಮುನೇಶ್ವರರು, ಮುನ್ನೂರು ದ್ಯಾನಿಗಳು ಸಹ ಈ ಕೆಲಸ ತಮ್ಮಿದಾಗಲಾರದೆಂದು ತಿಳಿಸಿದರು. ಸಟವಾಯಿ (ಸೃಷ್ಟಿದೇವತೆ) ಕೂಡ ನಕಾರಾತ್ಮಕ ಉತ್ತರವನ್ನಿತ್ತನು. ಆದರೆ ಬ್ರಹ್ಮನು

ಮಾತ್ರ ಈ ಶರತ್ತನು ಸ್ವೀಕಾರ ಮಾಡಿದನು. ಪಾತಾಳದ ಶೋಧನೆಗಾಗಿ ನೀರಿನಲ್ಲಿಳಿದನು. ತಿರುಗುತ್ತ ತಿರುಗುತ್ತ ಆತನು ಕಾಮಶಾಮ ಎಂಬ ದ್ವೀಪಕ್ಕೆ ಬಂದು ತಲುಪಿದನು. ಆತನಿಗೆ ಆ ದ್ವೀಪದಲ್ಲಿ ಕಾಮಧಾಮಕಸ್ತೂರಿ (ಕಾಮಧೇನು)ಯ ಭೇಟಿಯಾಯಿತು. ತಾನು ಬಂದ ಕಾರ್ಯವನ್ನುಕುರಿತು ಅದಕ್ಕೆ ತಿಳಿಸಿದನು. ಆಗ ಕಾಮಧೇನು ನೀನು ಈ ಪ್ರಯತ್ನದಲ್ಲಿ ನಿರತನಾಗಬೇಡ ಯಾಕೆಂದರೆ ಪಾತಾಳವು ಏಳು ಸುತ್ತಿನಿಂದ ಆವರಿಸಿದೆ. ಅವರಲ್ಲಿ ಒಂದೊಂದು ಸುತ್ತಿಗೂ ಒಬ್ಬೊಬ್ಬ ಗುರು ಕಾವಲು ನಿಂತಿದ್ದಾರೆ. ಅವರು ಕಣ್ತೆರೆದು ನೋಡಿದರೆ ಸಾಕು ಎಲ್ಲವೂ ಭಸ್ಮವಾಗಿ ಹೋಗುತ್ತದೆ. ಏಳು ಸುತ್ತಿನ ಕೋಟೆಯನ್ನು ದಾಟಿದ ಮೇಲೆ ಮತ್ತೇಳು ಗೋಡೆಗಳಿವೆ. ಅದುದರಿಂದ ನೀನು ಈ ಪ್ರಯತ್ನವನ್ನು ಸರ್ವಥಾ ಮಾಡಬೇಡ ಎಂದು ಹೇಳಿತು. ಆದರೂ ಬ್ರಹ್ಮದೇವನು ತನ್ನ ಸಂಕಲ್ಪವನ್ನು ಬಿಡಲಿಲ್ಲ. ಪಾತಾಳದ ಶೋಧ ಮಾಡಿ ಬಂದಿರುವೆ ಎಂದು ಸುಳ್ಳು ಹೇಳಿದರೂ ಬರುತ್ತದಲ್ಲ ವೆ ಎಂದು ಕಾಮಧೇನು ಪುನಃ ಆತನ ಮನವನ್ನು ಪರಿವರ್ತಿಸಲು ಪ್ರಯತ್ನಿಸಿತು. ಆಗ ಬ್ರಹ್ಮದೇವನು ಸಿಟ್ಟಿನಿಂದ ಕಾಮಧೇನುವಿನ ವೇಲಿನ ಹಲ್ಲುಗಳನ್ನು ಒಡೆದು ಬಿಟ್ಟನು. ಆದರಿಂದ ಆಗ ಕಾಮಧಾಮ ಕಸ್ತೂರಿ ಬಂದ ದಾರಿಗೆ ಸುಂಕವಿಲ್ಲ ಎಂಬಂತೆ ತನ್ನ ದ್ವೀಪಕ್ಕೆ ಮರುಳಿ ಹೋಯಿತು.

**ಮಹದೇವನು ಪಣದ ವೀಳ್ಯವೆತ್ತಿದ:** ಒಂದೇ ಸಮನಾಗಿ ಸಮುದ್ರದ ನೀರು ಉಕ್ಕೇರುತ್ತಲಿತ್ತು. ಧವಲಗಿರಿ ಪರ್ವತವು ಯಾವಾಗ ಮುಳುಗೀತೋ ಎಂಬುದನ್ನು ಯಾರೂ ಹೇಳುವಂತಿರಲಿಲ್ಲ. ಯವಧಾನ ಗುರು ಮತ್ತೊಂದು ಸಲ ತನ್ನ ಸಂಕಟವನ್ನು ಅರಿಕೆ ಮಾಡಿಕೊಂಡನು. ಆಗಲೂ ಒಂದು ಕರಾರನ್ನು ಮಂಡಿಸಲಾಯಿತು. ಯವಧಾನ ಗುರುವು ತನ್ನ ಸಿಂಹಾಸವನ್ನು ಬಿಡಬೇಕು. ಮಹದೂ (ಮಹದೇವ)ನನ್ನು ಆ ಸಿಂಹಾಸನದ ಮೇಲೆ ಕೂಡಿಸಬೇಕು. ಹಾಗೂ ಎಲ್ಲ ದೇವತೆಗಳು ಮಹದೂನಿಗೆ "ಶ್ರೀ ಶಂಭೂ ಮಹದೇವ"ನೆಂಬ ಹೆಸರಿನಿಂದ ಜಯ ಜಯಕಾರ ಮಾಡಬೇಕು ಎಂಬ ನಿರ್ಣಯಕ್ಕೆ ಯಾವಧಾನ ಗುರು ತನ್ನ ಸಮ್ಮತಿಯನ್ನು ಸೂಚಿಸಿದನು.

ಮಹದೂ ಮೊದಲು ಕಾಮಬಾಮ ದ್ವೀಪಕ್ಕೆ ಬಂದನು. ಆತನಿಗೆ ಕಾಮಧಾಮ ಕಸ್ತೂರಿಯ ಭೇಟಿಯಾಯಿತು. ಅನಂತರ ಸುವರ್ಣ ಸಿಂಹಾಸನದಲ್ಲಿ ಕುಳಿತು ತಪಗೈಯುತ್ತಿದ್ದ ಶಂಖನಾದ ಗುರುವಿನತ್ತ ಹೊರಟನು. ಆತನ ಅನುಜ್ಞೆ ಪಡೆದು ಮುಂದೆ ಕಾಶೀನಾಥ ಗುರುವಿನೆಡೆಗೆ ನಡೆದನು. ಅನಂತರ ಪಾತಾಳವನ್ನು ರಕ್ಷಿಸುತ್ತಿದ್ದ (೧) ವಿಶ್ವನಾಥಗುರು (೨) ಜಗನ್ನಾಥಗುರು, ವ್ಯಾಸ ಗುರು, (೩) ವಿಘ್ನಗುರು, (೪) ಶಿಡಮಾಗುರು, (೫) ಗಿಡದಾಬಾಮಣಾ ಗುರು, (೬) ಅಗ್ನಿಗುರು, (೭) ಗೌತುಮುನ್ನಿ ಜಗತಗುರು, (೮) ಗಂಡೇಸೂರ ಗುರು, (೯) ಭಾನಗುರು ಇವರೇ ಮೊದಲಾದ ಗುರುಗಳನ್ನು ಕಂಡನು. ಗುರುಗಳು ತಮ್ಮ ಕುಡಿ ನೋಟದಿಂದಲೇ ಆತನನ್ನು ಭಸ್ಮ ಮಾಡುವುದಾಗಿ ನುಡಿದರು. ಆದರೆ ಮಹದೂ ಅವರ ಮಾತನ್ನು ಲೆಕ್ಕಿಸದೇ ಮುನ್ನಡೆದನು. ಆತನ ಧೈರ್ಯವನ್ನು ಕಂಡ ಅವರು ಮುಂದೆ ಹೋಗಲು ಅಪ್ಪಣೆಯನ್ನಿತ್ತರು. ಮಹದೂ ಏಳು ಪ್ರಾಕಾರಗಳನ್ನು ದಾಟಿದನು. ನವಖಂಡದಲ್ಲಿರುವ ಪಾತಾಳ ಲೋಕಕ್ಕೆ ಬಂದು ತಲುಪಿದನು. ಅಲ್ಲಿ ಆತನಿಗೆ ಧುಂಡಮುಂಡ ಗುರು (ನಿರಂಜನ) ಸುವರ್ಣ ಸಿಂಹಾಸನದಲ್ಲಿ ಮಲಗಿರುವುದು ಕಂಡು ಬಂದಿತು. ಆ ಗುರುವು ಆರು ತಿಂಗಳ ಕಾಲ ಮಲಗುತ್ತಿದ್ದನು. ಇನ್ನಾರು ತಿಂಗಳುಗಳ ಕಾಲ ಜಾಗೃತನಾಗಿರುತ್ತಿದ್ದನು. ಅದರಿಂದಾಗಿ ಮಹದೂ ಗುರುವಿನ ಪಾದದ ಹತ್ತಿರ ಕುಳಿತುಕೊಂಡಿದ್ದನು. ನಿರಂಜನ ಗುರುವಿಗೆ ಎಚ್ಚರವಾದೊಡನೆ ಆತನು "ನೀನ್ಯಾರು? ಇಲ್ಲಿಗೆ ಬರಲು ಕಾರಣವೇನು?" ಎಂದು ವಿಚಾರಿಸಿದನು. ಆಗ ಮಹದೂ "ನಾನು ಪಾತಾಳದ ಶೋಧ ಮಾಡಲು ಬಂದಿದ್ದೇನೆ" ಎಂದು ನುಡಿದನು. ನಿರಂಜನ ಗುರುವು ಆತನಿಗೆ ನಿನ್ನಿಂದ ಈ ಕಾರ್ಯ ಸಾಧ್ಯವಿಲ್ಲ ಎಂದು ನುಡಿದನಲ್ಲದೆ ನೀನು ಪಾತಾಳ ಕಂಡು ಬಂದಿದ್ದೇನೆ ಎಂದು ಯವಧಾನ ಗುರುವಿಗೆ ಸುಳ್ಳು ಹೇಳಿಬಿಡು ಎಂದು ಸಲಹೆ ಮಾಡಿದ. ಮಹದೇವನು ಆತನ ಮಾತಿಗೆ ಮನ್ನಣೆ ಕೊಡಲಿಲ್ಲ.

ದಿವ್ಯ ವಸ್ತ್ರಾಪಹರಣ: ಮಹದೇವನ ಪರೀಕ್ಷೆಗಾಗಿ ನಿರಂಜನ ಗುರು ಯೋಚಿಸತೊಡಗಿನು. ಆತನನ್ನು ಕೆಳಕ್ಕೆ ಹಾಕಿ ಆರು ತಿಂಗಳುಗಳ

ಕಾಲ ಆತನ ಮೇಲೆ ತಾನೇ ಕುಳಿತುಕೊಂಡನು. ಆಷಾಢ ನಂತರ ವೃಥಾ ಶ್ರಮಪಡಬೇಡ, ಮನೆಗೆ ಹೋಗು ಎಂದು ಹೇಳಿದನು. ಆಗಲೂ ಮಹದೇವನು ಒಪ್ಪಿಕೊಳ್ಳಲಿಲ್ಲ. ಆಗ ಪುನಃ ಆರು ತಿಂಗಳುಗಳ ಕಾಲ ಆತನನ್ನು ತನ್ನ ತಲೆದಿಂಬಿನಂತೆ ಮಾಡಿಕೊಂಡು ಮಲಗಿದನು. ಮತ್ತೆ ಆರು ತಿಂಗಳು ಕಾದ ಎಣ್ಣೆಯಲ್ಲಿರಿಸಿದನು. ಅಗ್ನಿಯಲ್ಲಿ ಹಾಕಿದನು. ಈ ಎಲ್ಲ ಪರೀಕ್ಷೆಗಳಲ್ಲಿ ಮಹದೂ ಸುರಕ್ಷಿತವಾಗಿ ಪಾರಾಗಿ ಬಂದನು. ಆಗ ಅಗ್ನಿಯಲ್ಲಿ ಹೋಮ ನಡೆದಾಗ ಗಿರಿಧಾಭಾನ ಗುರುವಿನ ಏಳು ಕನ್ಯೆಯರು ಆಟಕ್ಕೆಂದು ಆ ಸ್ಥಳಕ್ಕೆ ಬಂದರು. ನಿರಂಜನ ಗುರು ಮಹದೇವನಿಗೆ "ಈ ಕನ್ನೆಯರು ತಮ್ಮ ವಸ್ತ್ರಗಳನ್ನೆಲ್ಲ ಕಾಕೇಸುರನಿಗೊಪ್ಪಿಸುತ್ತಾರೆ. ಆಗ ನೀನು ಆತನಿಗೆ ಮೊಸರನ್ನವನ್ನಿತ್ತು ಈ ಕನ್ಯೆಯರತ್ತ ನೋಡದೆ ಒಬ್ಬಳ ವಸ್ತ್ರಾಪಹರಣ ಮಾಡು. ಅಲ್ಲದೇ ಅವರು ಹಿಂದಿರುಗಿ ನೋಡಲು ಎಷ್ಟೇ ಹೇಳಿದರೂ ಸಹ ನೀನು ಹೊರಳಿ ನೋಡಬೇಡ ಎಂದು ಹೇಳಿದನು. ಮಹದೇವನು ನಿರಂಜನ ಗುರುಗಳು ಹೇಳಿದಂತೆ ನಡೆದುಕೊಂಡನು. ವಸ್ತ್ರಗಳನ್ನೆತ್ತಿಕೊಂಡು ಓಡುತ್ತಿರುವುದನ್ನುಕಂಡ ಕನ್ನೆಯರು ಕಾಕೇಸುರನ ಹೆಸರಿನಿಂದ ಒಂದೇ ಸಮನಾಗಿ ಕೂಗಿಕೊಳ್ಳತೊಡಗಿದರು. ಅಕಸ್ಮಿಕವಾಗಿ ಮಹದೇವನು ಹಿಂದಿರುಗಿ ನೋಡಿದ. ತಕ್ಷಣವೇ ಆತನು ಭಸ್ಮವಾಗಿ ಹೋದ. ಆಗ ನಿರಂಜನ ಗುರು ಪುನಃ ಆತನನ್ನು ಬದುಕಿಸಿದರು. ಮತ್ತೊಂದು ಸಲ "ನಾನು ಹೇಳಿದಂತೆ ಮಾಡಲಿಲ್ಲವೇಕೆ?" ಎಂದು ಕೇಳಿದರು. ನೀವೇ ರಕ್ಷಕದಾಗಿರುವಾಗ ನನಗೇತರ ಚಿಂತೆ ಎಂದು ಮಹದೂ ನುಡಿದನು."

**ಗಿರಿಜೆಯ ವಿವಾಹವಾಯಿತು:** ಗುರುಗಳ ಅಜ್ಞಾನುಸಾರವಾಗಿ ಮಹದೂ ಪುನಃ ವಸ್ತ್ರಾಪಹರಣ ಮಾಡಿದನು. ಏಳು ಜನ ಕನ್ಯೆಯರಲ್ಲಿ ಕೊನೆಯವಳ ವಸ್ತ್ರವು ಇಲ್ಲದಂತಾದುದರಿಂದ ಆ ಕನ್ಯೆ ಗಿರಿಜಾ (ಪಾರ್ವತಿ) ಮೂಲರೂಪದಲ್ಲಿಯೇ ಗುರುಗಳ ಮುಂದೆ ಬಂದು ನಿಂತುಕೊಂಡಳು. ತನ್ನ ವಸ್ತ್ರಗಳನ್ನು ಕೊಡಿಸಬೇಕೆಂದು ಕೇಳಿಕೊಂಡಳು. ಮಹದೇವನ ಮುಂದೆ ಬಂದು ನಿಂತುಕೊಂಡಳು. ಆತನು ಅವಳ ಕೈಯನ್ನು ಹಿಡಿದ. ನಿರಂಜನ ಗುರುಗಳು ಆಗ ಮಹದೇವ ಹಾಗೂ

ಗಿರಿಜೆಯ ವಿವಾಹದ ಸಿದ್ಧತೆಯಲ್ಲಿ ತೊಡಗಿದರು. ಆ ವಿವಾಹ ಕಾಲದಲ್ಲಿ ಸಕಲ ದೇವ ದೇವತೆಗಳು ಭಾಗವಹಿಸಿದರು. ಶೇಷನು ಮಂಟಪ ರಚಿಸಿದನು. ಭಗವಂತನು ದಿವ್ಯ ವಸ್ತ್ರ ಹಾಗೂ ಕಂಠಾಭರಣ, ಕರ್ಣಕುಂಡಲ, ಕಿರೀಟ, ಭಿಕ್ಷೆ ಬೇಡಲು ಜೋಳಿಗೆ, ಶಂಖ, ಘಟಾ ಹಾಗೂ ಅಮೃತ ತುಂಬಿದ ಏಳು ಕಲಶಗಳನ್ನು ಕೊಟ್ಟನಲ್ಲದೆ ಬಂಗಾರದ ತುರಾಯಿ, ಬೆಳ್ಳಿಯ ಬೆತ್ತದೊಂದಿಗೆ ಜನ್ಮ ಮರಣಗಳನ್ನಿಡುವ ಪುಸ್ತಕ, ಸರ್ವಾಲಂಕೃತವಾದ ಭಸ್ಮಾನಂದೀ ಮೊದಲಾದವುಗಳನ್ನೆಲ್ಲ ದಂಪತಿಗಳಿಗೆ ಆಹೇರಿಯ ರೂಪದಲ್ಲಿ ಕೊಟ್ಟನು. ಆಗ ಮಹದೂ ಹಾಗೂ ಪಾರ್ವತಿ ಇಬ್ಬರೂ ನಂದಿಯ ಮೇಲೆ ಕುಳಿತುಕೊಂಡರು. ಯವಧಾನ ಗುರುಗಳ ಆಶೀರ್ವಾದವನ್ನು ಪಡೆದುಕೊಂಡರು. ಗುರುಗಳು ದಂಪತಿಗಳ ತಲೆಯ ಮೇಲೆ ಅಕ್ಷತೆ ಹಾಕಿ ಆಶೀರ್ವಾದ ಮಾಡಿದರಲ್ಲದೆ ಗಿರಿಜೆಗೆ ಅಮೂಲ್ಯ ಹಾರವನ್ನು ಅನುಗ್ರಹಿಸಿದರು. ಲಗ್ನಾ ನಂತರ ಗುರುಗಳು ಮಹದೇವನಿಗೆ ಆಕಾಶ ನೋಡಲು ಹೇಳಿದರು. ಆಗ ಮಹದೂವಿಗೆ (ಮಹದೇವನಿಗೆ) ಪ್ರಕಾಶಮಾನವಾದ ಐದು ಲಿಂಗಗಳ ದರ್ಶನವಾಯಿತು. ಆ ಲಿಂಗದ ಮೂಲಗಳು ಪಾತಾಳದಲ್ಲಿದ್ದವು. ಮಹದೇವನಿಗೆ ಎರಡು ದೀವಟಿಗೆಗಳು ಬಂಗಾರದ ಬೀಸಣಿಕೆ, ಬೆಳ್ಳಿಯ ಕೊಡೆ, ಹತ್ತು ಬಾಗಿಲು, ಮೂವತ್ತೆರಡು ಕಿಡಿಕೆಗಳು ಕಂಡವು. ಹಿಂಭಾಗದಲ್ಲಿ ಬಂಗಾರದ ಆನೆಯಿತ್ತು. ಆಗ ಯವಧಾನ ಗುರು ಮಹದೇವನನ್ನು ಕುರಿತು ಹೇಳಿದನು. ಇಂದಿನವರೆಗೆ ನೀನು ಮಹದೂ ಎಂದೆನಿಸಿಕೊಳ್ಳುತ್ತಿದೆ. ಇನ್ನು ಮೇಲೆ ನೀನು ಶ್ರೀ ಶಂಭೂ ಮಹಾದೇವನೆಂದು ಕರೆಸಿಕೊಳ್ಳಲ್ಪಡುವೆ. ಗಿರಿಜೆಯನ್ನು ಪಾರ್ವತಿ ಎಂದು ಕರೆಯಲಾಗುವದು. ನೀವಿಬ್ಬರೂ ಕೂಡಿಕೊಂಡು ಧವಲಗಿರಿಯ ರಾಜ್ಯವನ್ನಾಳಿರಿ. ದೇವತೆಗಳ ಅಂತಸ್ತನ್ನು ಹೆಚ್ಚಿಸುವುದು ಅಥವಾ ಕಡಿಮೆ ಮಾಡುವುದು ಇವುಗಳೆಲ್ಲ ನಿಮಗೆ ಸೇರಿವೆ ಎಂದು ಅನುಗ್ರಹಿಸಿದನು. ಪಾರ್ವತಿಯು ಯವಧಾನ ಗುರುಗಳಿಂದ ಬಂಗಾರದ ರವಿಕೆ ಹಾಗೂ ಬಂಗಾರದ ದೋರವನ್ನು ಪಡೆದುಕೊಂಡಳು. ತನ್ನ ತಂದೆಯ ಕಡೆಯಿಂದ ಕೊಕಾಸರ ಸೇವಕನನ್ನು ಪಡೆಮುಕೊಂಡಳು. ದಂಪತಿಗಳಿಬ್ಬರು ಧವಲಗಿರಿಯತ್ತ ಹೊರಟರು. ನಂದಿಯ ಕೊರಳಲ್ಲಿದ್ದ ಗಂಟೆಗಳ ನಾದವು ವಿಶ್ವದಲ್ಲಿ ಅವರಿಗೆ

ಹದಿನಾಲ್ಕು ಋಷಿಗಳು ಕಾಮಧಾಮಕಸ್ತೂರಿ (ಕಾಮಧೇನು) ಮೊದಲಾದವರ ದರ್ಶನವಾಯಿತು. ಧವಲಗಿರಿಗೆ ತಲುಪಿದಾಗ ಒಂಬತ್ತು ಕೋಟಿ ದೇವತೆಗಳು ಅವರಿಬ್ಬರ ಹೆಸರಿನಿಂದ ಜಯಜಯಕಾರ ಮಾಡಿದರು. ಯವಧಾನ ಗುರುಗಳು ತಮ್ಮ ಸಿಂಹಾಸನವನ್ನು ಬಿಟ್ಟು ಕೊಟ್ಟರು. ಆಗ ಮಹಾದೇವನು ಪಾರ್ವತಿ ಸಹಿತನಾಗಿ ಸಿಂಹಾಸನದ ಮೇಲೆ ಆರೋಹಣ ಮಾಡಿದನು.

**ಧರಿತ್ರಿಯ ಶೋಧ:** ಸಮುದ್ರದ ನೀರು ಉಕ್ಕೇರುತ್ತಲೇ ಇತ್ತು. ಇದರಿಂದಾಗಿ ಧವಲಗಿರಿ ಪರ್ವತಕ್ಕೆ ಅಪಾಯವೆಂಬಂತೆನಿಸತೊಡಗಿತು. ನೀರಿನ ರಭಸದಿಂದ ಪರ್ವತವು ಹೊಯ್ದಾಡುತ್ತಲಿತ್ತು. ಆಗ ಮಹಾದೇವನು ಒಂದು ಪಣವನ್ನು ಸಾರಿದನು. ಆದರೆ ಆತನ ಪಣವನ್ನು ಯಾವ ದೇವತೆಗಳೂ ಸ್ವೀಕರಿಸಲು ಮುಂದೆ ಬರಲಿಲ್ಲ. ಆಗ ಮಹಾದೇವನು ತನ್ನ ತೊಡೆಯ ಮಣ್ಣಿನಿಂದ ಒಂದು ಗರುಡ ಪಕ್ಷಿಯನ್ನು ಮಾಡಿದನು. ಆ ಪಕ್ಷಿಗೆ ಗರಕಾಮಂತೂರ ಎಂಬ ಹೆಸರನ್ನಿಟ್ಟು ಅದಕ್ಕೆ ಧರಿತ್ರಿಯ ಶೋಧ ಮಾಡಿಕೊಂಡು ಬರಲು ಹೇಳಿದನು. ಆರು ತಿಂಗಳ ಕಾಲ ಆ ಪಕ್ಷಿಯು ಹಾರುತ್ತಲೇ ಇತ್ತು. ಎಲ್ಲಿಯೂ ಆ ಪಕ್ಷಿಗೆ ಧರಿತ್ರಿಯು ಕಾಣಿಸಲಿಲ್ಲ. ನಿರಾಶ ತನದಿಂದ ಆ ಪಕ್ಷಿಯು ತನ್ನ ಕೆಲಸವನ್ನು ಸಾಧಿಸದೆ ಮರಳಿ ಬಂದಿತು. ಆಗ ಮಹಾದೇವನು ಪ್ರಥ್ವಿಯ ಶೋಧವಾದ ಮೇಲೆ ನೀನು ಭೂಮಿಯ ಮೇಲೆಯೇ ವಾಸವಾಗಿರು ಎಂದು ಶಾಪವನ್ನಿತ್ತನು. ನಂತರ ಕೋಕಾಸುರ (ಕಾಗೆ) ನನ್ನು ಸೃಷ್ಟಿಸಿದನು. ಅದಕ್ಕೆ ವಜ್ರದ ರೆಕ್ಕೆಗಳು, ಮುತ್ತಿನ ಬಾಯಿ, ಬಂಗಾರದ ಕಾಲುಗಳಿದ್ದವು. ಹನ್ನೆರಡು ವರುಷಗಳ ಕಾಲ ಆ ಹಕ್ಕಿಯು ಧರಿತ್ರಿಯನ್ನು ಹುಡುಕುವುದರಲ್ಲಿಯೇ ಕಳೆಯಿತು. ಕೊನೆಗೊಮ್ಮೆ ಒಂದು ಮುಖವು ನೀರಿನ ಮೇಲೆ ಅಲೆದಾಡುತ್ತಿರುವುದು ಅದಕ್ಕೆ ಕಂಡು ಬಂದಿತು. ಅದನ್ನು ಬಾಲೆಸುರ ಎಂದೆನ್ನುತ್ತಿದ್ದರು. ದಣಿದ ಕೋಕಾಸುರನು ಆ ಜಲಚರ ಪ್ರಾಣಿಯ ಮುಖದ ಮೇಲೆ ಕುಳಿತು ಬಿಟ್ಟನು. ಆತನಿಂದ ಧರಿತ್ರಿಯ ವಿಚಾರವನ್ನು ಕೇಳಿ ತಿಳಿದು ಕೊಂಡನು. ನನಗೆ ಶಂಭೂ ಮಹಾದೇವನು ಪ್ರಸನ್ನನಾಗಿ ಏನಾದರೂ ಕೊಟ್ಟಲ್ಲಿ

ನಾನು ನಿನ್ನ ಕಾರ್ಯಕ್ಕೆ ಸಹಾಯ ಮಾಡುವೆ ಎಂದು ಆ ಜಲಚರ ಪ್ರಾಣಿಯು ಹೇಳಿತಲ್ಲದೆ ಅದು ಸಮುದ್ರದ ತಳಕ್ಕೆ ಹೋಯಿತು. ಮುಂದೆ ಗಂಡೇಸೂರ ಎಂಬ ದ್ವೀಪಕ್ಕೆ ಬಂದು ತಲುಪಿತು.

**ಪಿಂಡದ ಮೇಲೆ ವಿಶ್ವ (ಬ್ರಹ್ಮಾಂಡ):** ಧರಿತ್ರಿ ಎಂದರೆ ಏಳು ಜನ ಸಹೋದರಿಯರು. ಅವರ ಹೆಸರುಗಳೆಂದರೆ: (೧) ಕಪ್ಪು ಧರಿತ್ರಿ, (೨) ನೀಲ ಧರಿತ್ರಿ, (೩) ಪಚ್ಚ ಧರಿತ್ರಿ, (೪) ಬಂಗಾರದ ಧರಿತ್ರಿ, (೫) ತಾಮ್ರದ ಧರಿತ್ರಿ ಮೊದಲಾದವರು. ಎಲ್ಲರಲ್ಲಿ ಕೊನೆಯವಳ ಹೆಸರು ಬಾಲ ಧರಿತ್ರಿ ಎಂದಿದ್ದು ಇವಳ ತಂದೆಯ ಹೆಸರು ಛೀತಖಂಡನೆಂದೂ ತಾಯಿ ಪಾಕನಭೀ ಎಂದಿತ್ತು. ಇವಳ ತಾಯಿ ತಂದೆಗಳಿಬ್ಬರೂ ಪ್ರತಿಯೊಂದು ಗಂಟೆಗೆ ಧರಿತ್ರಿಯ ಅಳತೆ ಮಾಡುತ್ತಿದ್ದರು. ಹೀಗಿರುವಲ್ಲಿ ಬಾಲೇಸುರನು ಏಳು ತೊಲೆ ಮಣ್ಣನ್ನು ಕದ್ದದ್ದು ತಿಳಿಯಿತು. ಆಗ ಧರಿತ್ರಿಯ ತಂದೆ ಆತನಿಗೆ ಚೆನ್ನಾಗಿ ಥಳಿಸಿದನಲ್ಲದೆ ಆತನ ಒಂದು ಕಣ್ಣನ್ನೂ ಇಲ್ಲದಂತೆ ಮಾಡಿದನು. ಆದರೂ ದೇವಾನುಗ್ರಹದಿಂದ ಆತನ ಹೆಗಲಿಗೆ ಕಣ್ಣು ಹುಟ್ಟಿದಂತಾಯಿತು. ಬಾಲೇಸುರನು ತಾನು ಕದ್ದು ತಂದಿದ್ದ ಮಣ್ಣನ್ನು ಕಾಕೇಸುರನಿಗೆ ಕೊಟ್ಟನು. ಆಗ ಕಾಕೇಸುರನು ಮುಂದಿನ ಯುಗದಲ್ಲಿ ಮಾದಾಜಾತಿಯ ಜನರು ಬರುತ್ತಾರೆ. ಅವರು ತಮ್ಮ ಜಾತಿಯ ಮೃಗವನ್ನು ಸುಡುತ್ತಾರೆ. ಹಾಗೆ ಸುಡುವ ಕಾಲದಲ್ಲಿ ಅದರ ಹೃದಯವನ್ನು ನಿನಗೆ ನೈವೇದ್ಯವಾಗಿ ಕೊಡುತ್ತಾರೆ. ಇದೇ ನಿನಗೆ ವರವೆಂದು ತಿಳಿಸಿದ. ಕಾಕೇಸುರನು ಧವಲಗಿರಿಗೆ ಬಂದನು. ಆಗ ಆತನಿಗೆ ವಿಪರೀತ ಹಸಿವಾಗಿತ್ತು. ದೇವತೆಗಳ ಭೋಜನವಾಗುವ ಮೊದಲೇ ಅವರ ನೈವೇದ್ಯವನ್ನು ಭೋಜನ ಮಾಡಿದನು. ಅದನ್ನು ಕಂಡು ಶಂಭೂ ಮಹದೇವನಿಗೆ ವಿಪರೀತ ಕೋಪ ಬಂದಿತು. ಆಗ ಆತನು ಪಿತೃಗಳಿಗೆ ಕೊಟ್ಟ ಅನ್ನದಿಂದಲೇ ನೀನು ಬದುಕುವಂತಾಗಲಿ ನಿನ್ನ ಮುತ್ತಿನ ಮುಖ ಹಾಗೂ ಬಂಗಾರದ ಕಾಲುಗಳೂ ಸಹ ಕಪ್ಪಾಗಿ ಹೋಗಲಿ ಎಂಬ ಶಾಪವನ್ನಿತ್ತನು.

**ಕಂಬಾರನಿಗೆ ಶಾಪ:** ಮೃತ್ತಿಗೆಯು ಕೈಗೆಟುಕಿದಾಗ ಅದನ್ನು ಸ್ಥಿರವಾಗಿ ಹೇಗೆ ನಿಲ್ಲಿಸಬೇಕು ಎಂಬ ಯೋಚನೆಯು ಮಹದೇವನಿಗೆ ಆರಂಭವಾಯಿತು. ಆಗ ಪಾರ್ವತಿ ಬಂಗಾರದ ದಾರವನ್ನು ಉಪಯೋಗಿಸಿದಳು. ಆ ಮಣ್ಣು ಬೆಳೆಯುತ್ತ ನಡೆಯಿತು. ಇದೇ ಸಮಯದಲ್ಲಿ ಭಂಡಾರ ದ್ವೀಪದಲ್ಲಿ ನವದೇವ ಹಾಗೂ ಗೋವದೇವರು ಸಮುದ್ರದ ಬಾಗಿಲನ್ನು ತೆಗೆದರು. ನೀರು ಭರದಿಂದ ಹರಿಯತ್ತೊಡಗಿತು. ಇದರಿಂದಾಗಿ ಮಣ್ಣು ಕೆಳಗಿಳಿಯಲಾರಂಭಿಸಿತು. ಆಗ ಶಂಭೂ ಮಹಾದೇವನು ತನ್ನ ಸಹಾಯಕ್ಕಾಗಿ ಯವಧಾನ ಗುರುವನ್ನು ಬರಮಾಡಿಕೊಂಡನು. ಆ ಗುರುವಿನ ಸಲಹೆಯ ಮೇರೆಗೆ ವ್ಯಾಸ ಗುರುಗಳು ಜಂಬೂ ದ್ವೀಪ ನಿವಾಸಿಗಳಾದ ಜಂಬಾ ಗುರುಗಳಿಂದ ಅನುಗ್ರಹ ಪಡೆದು ಬರಲು ಹೇಳಿದರು. ಶಂಭೂ ಮಹಾದೇವನು ಅಲ್ಲಿಗೆ ಹೋದಾಗ ಜಂಬಾ ಗುರುಗಳ ಮಗನಾದ ಜಿನಯಾಬಾಲನು ತೊಟ್ಟಿಲಲ್ಲಿ ಮಲಗಿಕೊಂಡಿದ್ದನು. ಜಂಬಾ ಗುರುಗಳು ಆ ಬಾಲಕನ ಶರೀರದಿಂದ ಮಣ್ಣನ್ನು ಸೃಷ್ಟಿ ಮಾಡಿದರು. ಆತನ ಕೈಗಳಿಂದಲೇ ಕೋಟೆಯನ್ನು ನಿರ್ಮಿಸಿದನು. ಕಾಲುಗಳಿಂದ ಸುತ್ತಿಗೆ ನಿರ್ಮಿಸಿದನು. ನಂತರ ಭಂಡಾರ ದ್ವೀಪದಿಂದ ನವದೇವ ಹಾಗೂ ಗೋವದೇವರಿಗೆ ವ್ಯಾಸ ಗುರುಗಳು ಬಲಿಯನ್ನಿತ್ತರು. ಆಗ ಅವರು ನೀವು ವಿನಾಕಾರಣವಾಗಿ ನಮ್ಮ ಬಲಿ ತೆಗೆದುಕೊಂಡಿರಿ. ನೀವು ನಿಮ್ಮ ಭಟ್ಟಿಯಲ್ಲಿ (ತಿದಿಯಲ್ಲಿ) ಎಷ್ಟೇ ಇದ್ದಲಿಯನ್ನು ಹಾಕಿದರೂ ಸಹ ಅದು ಬೂದಿಯಾಗಿಯೆ ಹೋಗುವದು. ಕಂಬಾರರ ಕುಲವು ಯಾವಾಗಲೂ ಬಡತನವನ್ನೇ ಅನುಭವಿಸುವದು, ರೈತರು ಕೊಡುವ ಧಾನ್ಯದಿಂದಲೇ ನೀವು ಜೀವಿಸುವಿರಿ ಎಂದು ಶಾಪವನ್ನಿತ್ತರು.

**ಕಾಮಧೇನುವಿನ ಕೋಡಿನ ಮೇಲೆ ಧರಿತ್ರಿ:** ಗಿರಿಜಾ-ಮಹದೇವರಿಬ್ಬರೂ ಮಣ್ಣನ್ನು ಕಲಸುತ್ತಲೇ ಇದ್ದರು. ವ್ಯಾಸಗುರುಗಳು ಧವಲ ಗಿರಿಯು ಸ್ಥಿರವಾಗಿ ನಿಲ್ಲಲು ಒಂದು ಕಂಬವನ್ನು ಸೃಷ್ಟಿಸಿದರು. ಆದರೂ ಧರಿತ್ರಿ ದೇವಿ ಅದರ ಮೇಲೆ ನಿಲ್ಲಲಿಲ್ಲ. ಆಗ ಶಂಭೂ ಮಹಾದೇವನು ಕಸ್ತೂರಿ ಕಾಮಧೇನುವನ್ನು ಸಹಾಯಕ್ಕಾಗಿ ಕರೆದನು.

"ನಾನು ಶೇಷನ ತಲೆಯ ಮೇಲೆ ಕಾಲಿಟ್ಟು ನಿಲ್ಲುವೆ. ನನ್ನ ಕೊಂಬುಗಳ ಮೇಲೆ ಧರಿತ್ರಿಯನ್ನು ಧರಿಸುವೆ." ಎಂದಳು. ಹದಿನಾಲ್ಕು ಹೆಡೆ ಏಳು ನಾಲಿಗೆಯ ಶೇಷನು ಈ ವಿಚಾರವನ್ನು ಒಪ್ಪಿಕೊಂಡನು. ಆತನ ಈ ಮಾತಿಗೆ ಸಂತೋಷಗೊಂಡ ಮಹದೇವನು "ನಾಗರಪಂಚಮಿಯ ದಿನ ಮನೆಮನೆಗಳಲ್ಲಿ ನೀನು ಪೂಜೆಗೊಳ್ಳು ವಂತಾಗಲಿ" ಎಂದು ವರವನ್ನಿತ್ತನಲ್ಲದೆ ದೀಪಾವಳಿಯ ಅಮಾವಾಸ್ಯೆಯ ದಿನ ಎಲ್ಲ ದನಗಳಿಗೂ ನೀನು ಮೂಲ ಎಂಬ ನಂಬಿಕೆಯಿಂದ ಮೊದಲು ನೀನು ಪೂಜೆಗೊಳ್ಳು ವಂತಾಗಲಿ ಎಂದು ಕಾಮಧೇನುವಿಗೆ ಅನುಗ್ರಹ ಮಾಡಿದನು. ಅಂದಿನಿಂದ ಗೋಂಡ ಜನಾಂಗವು ದೀಪಾವಳಿಯ ದಿನಗಳಲ್ಲಿ ಹಸುವಿನ ಪೂಜೆ ಮಾಡತೊಡಗಿದರು.

ಕೊಂಬಿನ ಮೇಲೆ ಧರಿತ್ರಿಯನ್ನು ಧರಿಸಿ ಎಷ್ಟು ಕಾಲ ನಿಲ್ಲಲಿ ಎಂದು ಕಾಮಧೇನು ಕೇಳಿದಳು. ಆಗ ಮಹದೇವನು ವಿಶ್ವದ ಸಂಗತಿಯು ಎಂದಿನವರೆಗೆ ನಿನ್ನೊಂದಿಗೆ ದೂರಾಗುವದಿಲ್ಲವೋ ಅಲ್ಲಿಯವರೆಗೂ ನೀನು ಹೀಗೆಯೇ ನಿಂತಿರಬೇಕು ಎಂದು ಹೇಳಿದನು. ವಿಶ್ವದಲ್ಲಿ ಜಾಗೃತಿಯು ನಿಲ್ಲಬಾರದೆಂದು ಕಿರ್ರ ಎಂದು ಶಬ್ದ ಮಾಡುವ ರಾತ್ರಿ ಹುಳುಗಳನ್ನು ನಿರ್ಮಿಸಿದನು. ಅಂದಿನಿಂದ ವಿಶ್ವದಲ್ಲಿ ಕೇಳ ಬರುವ ಶಬ್ದವು ಯಾವಾಗ ನಿಲ್ಲುವದೋ ಎಂದು ಕಾಮಧೇನುವು ಕಾಯುತ್ತಾ ತನ್ನ ಕೋಡುಗಳ ಮಧ್ಯದಲ್ಲಿ ದರಿತ್ರಿಯನ್ನು ಧಾರಣಮಾಡಿ ನಿಂತಿರುವಳು.



# ಆಂಜನೇಯ ವಿಲಾಸ

ಹನುಮಂತನು ಉತ್ತರ ದಕ್ಷಿಣಗಳನ್ನು ಒಂದುಗೂಡಿಸಿದ ಮಹಾನುಭಾವ, ಅಪ್ಪಟಕನ್ನಡಿಗ, ವ್ಯಾಕರಣಪಟು, ನೈಷ್ಠಿಕ ಬ್ರಹ್ಮಚರ್ಯ ವ್ರತಪಾಲಕ. ಈತನು ಪೂಜೆಗೊಳ್ಳದಿದ್ದ ಸ್ಥಳವೇ ಇಲ್ಲ. ಗ್ರಾಮರಕ್ಷಕನಾದುದರಿಂದ ಗ್ರಾಮಾಂತರಗಳಲ್ಲಿ ಈ ದೇವ ಮಂದಿರವು ಇದ್ದೇ ಇರುವುದುಂಟು. ಈ ನಿಮಿತ್ತವಾಗಿಯೇ ಊರಿನ ಬಾಗಿಲು ಹನುಮಂತನೆಂದೂ, ನಮ್ಮ ಜನರಾಡಿಕೊಳ್ಳುವದುಂಟು. ಶ್ರೀರಾಮಚಂದ್ರನ ಪರಿವಾರದಲ್ಲಿ ಅವಿಭಾಜ್ಯ ಕುಟುಂಬಿ ಎಂದು ಗುರುತಿಸುವ ಮೊದಲೇ ಹನುಮಂತನನ್ನು ಪೂಜಿಸುವದು ಕನ್ನಡನಾಡಿನಲ್ಲಿ ರೂಢಿಯಲ್ಲಿತ್ತೆಂದು ತಿಳಿದು ಬರುವದು.

ಈಗಂತೂ ಅಖಂಡ ಭಾರತದಲ್ಲಿ ಆತನ ಪೂಜಾದಿಗಳು ನಡೆಯುತ್ತಲಿವೆ. ವೈದಿಕ ಯುಗದಲ್ಲಿ "ಕಪಿಗೂ ಹನುಮಂತನಿಗೂ ನಂಟನ್ನು ಕಲ್ಪಿಸಿದ್ದರು" ಹನುಮಂತ ಎನ್ನುವ ಮಾತು ಸಂಸ್ಕೃತದ್ದಲ್ಲವೆಂದು ಕೆಲವರ ಅಭಿಪ್ರಾಯ. "ಅಣ್ ಮಂತಿ" ಎಂದರೆ ಗಂಡು ಕಪಿ. ಇದು ತಮಿಳು ಮಾತಿನ ರೂಪಾಂತರವೆಂದು ಕೆಲವರ ಅಭಿಪ್ರಾಯವಿದೆ. ಆದರೆ ಕನ್ನಡ ನಾಡಿನ ಲೋಕವು ಮಾತ್ರ ಹನುಮಂತನು ಅಪ್ಪಟ ಕನ್ನಡ ನಾಡಿನವನು. ಈ ಸುಗ್ರೀವನ ವಾಸಸ್ಥಾನವು ಋಷ್ಯಮೂಕ ಪರ್ವತವು. ಯಾರು ಹಂಪಿಗೆ ಭೇಟಿ ಕೊಡುವರೋ ಅಂಥವರು ಇಂದಿಗೂ

ಪಂಪಿಯಲ್ಲಿ ಋಷ್ಯಮೂಕ ಪರ್ವತವಿರುವುದನ್ನು ನೋಡಬಹುದು. ರಾಮಾಯಣ ಮಹಾಕಾವ್ಯದಲ್ಲಿಯೂ ಸಹ ಹನುಮಂತನನ್ನು "ಮಹಾಕಪಿ" ಎಂದು ವರ್ಣಿಸಲಾಗಿರುವದು. ಆತ ಕಪಿಯ ಸ್ವಭಾವದಿಂದ ಕೂಡಿದವನು ಎಂಬ ಅರ್ಥವನ್ನೇ ಸೂಚಿಸುವಂತಹದು. ಇದೇ ಮಾತನ್ನು ಈ ಕೆಳಗಿನ ಶ್ಲೋಕದಿಂದ ತಿಳಿದುಕೊಳ್ಳಬಹುದಾಗಿದೆ.

ಮರ್ಕಟೇಶ ಮಹೋತ್ಸಾಹ
ಸರ್ವಶೋಕ ವಿನಾಶಕ ।
ಶತ್ರೂನ್ ಸಂಹರ ಮಾಂ ರಕ್ಷ
ಶ್ರಿಯಂದಾಪಯ ಮೇ ಪ್ರಭೋ ॥

ಈತನು ಅಂಜನಾ ಪುತ್ರನಾದುದರಿಂದ ಅಂಜನೇಯನೆಂದೂ, ರುದ್ರಾಂಶ ಸಂಭೂತನೆಂದೂ, ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ, ಮರದ್ಗಣಗಳಿಗೆ ಸಮೀಪದವನೆಂದೂ, ವಿಭಿನ್ನ ನಾಮಗಳಿಂದ ಭಕ್ತರ ಮನವನ್ನಾಕರ್ಷಿಸುತ್ತ ಅವರವರ ಅಭೀಷ್ಟಗಳನ್ನು ಪೂರೈಸುತ್ತಾನೆಂಬ ನಂಬಿಕೆಯೂ ಇದೆ. ಈತನು ಶ್ರೀರಾಮ ಭಕ್ತನಾದುದರಿಂದ ಹರಿನಾಮಧಾರಕನೆಂದು ಭಾವಿಸುವ ಭಕ್ತರ ಸಂಖ್ಯೆಯು ಅಪಾರ. ಅವನ ಮುಖದಿಂದ ಸದಾ ಕಾಲವೂ ಶ್ರೀರಾಮ ಶ್ರೀರಾಮ ಎಂಬ ರಾಮಧ್ಯಾನವು ಹೊರಹೊಮ್ಮುವದೆಂಬ ನಂಬಿಕೆಯು ಭಾರತೀಯರಲ್ಲಿದೆ.

ಮಾಧ್ವ ಸಂಪ್ರದಾಯವಾದಿಗಳಲ್ಲಿ ಹನುಮಂತನಿಗೆ ವಿಶೇಷ ಪ್ರಾಶಸ್ತ್ಯವಿದೆ. ಅವರು ಮಧ್ವಾಚಾರ್ಯರೇ ಹಿಂದೆ ಹನುಮನಾಗಿದ್ದವರೆಂದು ಭಾವಿಸುತ್ತಾರೆ. ಈತನು ವಿಷ್ಣುವಿನ ಅನುಜ್ಞೆಯಿಂದ ಜೀವರಿಗೆ ಮೋಕ್ಷ ಕೊಡಿಸುವವನೆಂದು ಅವರು ನಂಬುತ್ತಾರೆ. ಅಲ್ಲದೆ ಹನುಮಂತನನ್ನು ಜೀವೋತ್ತಮನೆಂದೂ ಬ್ರಹ್ಮನಿಗೆ ಅಧಿಷ್ಠಾನನೆಂದೂ, ಇಂದ್ರಿಯಗಳಿಗೆ ಪ್ರೇರಕನೆಂದೂ ಯೋಗಿಗಳಲ್ಲಿ ಪ್ರಮುಖನೆಂದೂ ಭಾವಿಸುತ್ತಾರೆ. ಮಾಧ್ವ ಸಂಪ್ರದಾಯವಾದಿಗಳಾದ ಶ್ರೀ ವ್ಯಾಸರಾಯರು ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನಿಗೆ ಗುರುಗಳಾಗಿದ್ದರು. ಅವರ ಕಾಲದಲ್ಲಿ

ಏಳುನೂರು ಆಂಜನೇಯ ದೇವಾಲಯಗಳು ನಮ್ಮ ನಾಡಿನಲ್ಲಿ ಪ್ರತಿಷ್ಠಾಪಿಸಲ್ಪಟ್ಟವು ಎಂದು ಈಗಲೂ ಅಂಥ ವಿಶಿಷ್ಟ ಲಕ್ಷಣಗಳನ್ನೊಳಗೊಂಡಿರುವ ವಿಗ್ರಹಗಳನ್ನು ತೋರಿಸುತ್ತಾರೆ.

ವೃಷಭಾವತಿಯ ತಟದಲ್ಲಿ ಶ್ರೀ ಗಾಳಿ ಆಂಜನೇಯ ಸ್ವಾಮಿ ದೇವಾಲಯವಿದೆ. ದೇವರಿಗೆ ಈ 'ಗಾಳಿ' ಎಂಬ ಅಂಕಿತವು ಅಂಟಿಕೊಂಡದ್ದು ಹೇಗೆ?

'ಗಾಳಿ' ಎಂದರೆ 'ವಾಯು'. ವಾಯು ಎಂದರೆ ಸಕಲ ಜೀವರಾಶಿಗಳ ಜೀವನಾಧಾರ, ಪ್ರಾಣ ವಾಯುವಿನ ಅಂಶಪುತ್ರನಾದ ಆಂಜನೇಯ ಸ್ವಾಮಿಗೆ ಪ್ರಾಣದೇವರು ಎಂಬ ಇನ್ನೊಂದು ಹೆಸರು ಉಂಟು. 'ಆಂಜನೇಯ' ಎಂದರೆ ಪ್ರಾಣವಾಯು ಆಂಜನೇಯ ಎಂಬ ಅರ್ಥ ಸ್ಪಷ್ಟಪಡಿಸುತ್ತದೆ.

ಬೆಂಗಳೂರು ನಗರ ನಿರ್ಮಾಣವಾಗುವುದಕ್ಕೆ ಎಷ್ಟೋ ಶತಮಾನಗಳ ಹಿಂದೆ ಈ ಆಂಜನೇಯ ಸ್ವಾಮಿ ಪ್ರತಿಷ್ಠಾಪನೆಯಾಗಿರಬೇಕು. ಈ ಪುರಾತನತ್ವದ ಗುರುತನ್ನು ಮೂಲಗರ್ಭಗೃಹದ ಶುಕನಾಶಿ ಕಟ್ಟಡಗಳ ರಚನೆ, ಶಿಲಾವಿನ್ಯಾಸಗಳಿಂದ ಕಾಣಬಹುದು.

ಶ್ರೀ ಗಾಳಿ ಆಂಜನೇಯ ಸ್ವಾಮಿಯು ಪಶ್ಚಿಮಾಭಿಮುಖವಾಗಿಯೂ, ಎರಡು ನೇತ್ರಗಳ ದರ್ಶನವಾಗುವಂತೆ ನಿಂತಿರುವುದು ಈ ಸ್ವಾಮಿಯ ವೈಶಿಷ್ಟವಾಗಿದೆ. ದಕ್ಷಿಣ ಭಾರತದ ಎಲ್ಲಾ ಕಡೆಗಳಿಂದ ಭಕ್ತಾದಿಗಳು ಈ ದೇವತೆಯ ದರ್ಶನಕ್ಕೆ ಬಂದು ಈ ಸುಂದರ ಮಾರುತಿಯ ದರ್ಶನ ಪಡೆದು ಈ ಮಾರುತಿಯು ದಿವ್ಯ ದರ್ಶನವನ್ನೂ, ಮತ್ತೆಲ್ಲಿಯೂ ತಾವು ಕಾಣೆವೆಂದು ಹೇಳುವುದುಂಟು. ಇಲ್ಲಿ ಭಕ್ತರು ಆಧ್ಯಾತ್ಮಿಕ, ಆಧಿಭೌತಿಕ, ಆದಿದೈವಿಕವೆಂಬ ತಾಪತ್ರಯಗಳನ್ನು ಸ್ವಾಮಿಯ ದರ್ಶನ ಮತ್ತು ಪ್ರಾರ್ಥನೆಯಿಂದ ಪರಿಹಾರಿಸಿಕೊಳ್ಳುವುದೂ ಸರ್ವವೇದ್ಯವಾದ ವಿಷಯವಾಗಿದೆ. ಈ ಮಹಿಮಾ ಮೂರ್ತಿಯು ಇಹ-ಪರಗಳ ಸುಖವನ್ನು ನೀಡುವುದೆಂಬುವುದರಲ್ಲಿ ಸಂದೇಹವಿಲ್ಲ.

ಇತ್ತೀಚೆಗೆ ದೇವಾಲಯವು ಅಭಿವೃದ್ಧಿ ಹೊಂದಿ ದೇವಾಲಯದ ಆವರಣದಲ್ಲಿ ಊರಿನ ಗಣ್ಯರಾದ ದಿವಂಗತ ಬಿ.ವಿ. ಮುನಿಯಪ್ಪನವರು ಕಟ್ಟಿಸಿದ ಶ್ರೀ ಕಲ್ಯಾಣರಾಮ ದೇವರ ದೇವಾಲಯ, ಶ್ರೀ ಸತ್ಯನಾರಾಯಣ ಸ್ವಾಮಿಯ ಮಂದಿರ ಹಾಗೂ ಮೊದಲಿನಿಂದಲೂ ಇರುವ ನವಗ್ರಹಗಳ ದೇವಾಲಯಗಳ ಇವುಗಳ ಸನ್ನಿವೇಶದಿಂದ ಪಶ್ಚಿಮ ಬೆಂಗಳೂರಿನ ಒಂದು ಪವಿತ್ರ ಕ್ಷೇತ್ರವಾಗಿದೆ.

ಈ ದೇವಾಲಯವು ಬ್ಯಾಟರಾಯನಪುರಕ್ಕೆ ಸೇರಿದ್ದಾದರೂ ಸಹ ನೆರೆಗ್ರಾಮಗಳಾದ ಆವಲಹಳ್ಳಿ, ದೀಪಾಂಜಲೀ ನಗರದ ಹಾಗೂ ಅಕ್ಕಪಕ್ಕದ ಗ್ರಾಮಗಳ ನಿವಾಸಿಗಳಿಂದ ಮತ್ತು ಭಕ್ತಜನರಿಂದ ಸಹಕಾರ ಪಡೆದು ಸಂಯುಕ್ತವಾಗಿ ವ್ಯವಸ್ಥಿತವಾಗಿ ಆಡಳಿತ ಕಾರ್ಯ ನಿರ್ವಹಿಸಲ್ಪಡುತ್ತಿದೆ. ಪ್ರತಿ ಸಂವತ್ಸರವೂ ರಥೋತ್ಸವ ಶ್ರೀ ಹನುಮ ಜಯಂತಿ, ಉತ್ಸವ ಸಂಕ್ರಾಂತಿ ಉತ್ಸವ ಹಾಗೂ ವರ್ಷವೆಲ್ಲ ಹೆಚ್ಚುವರಿ ಸೇವೆಗಳು ನಡೆಯುತ್ತಿರುತ್ತದೆ. ಭಕ್ತ ಜನರ ಉದಾರ ಆಶ್ರಯದಿಂದ ಶ್ರೀ ಗಾಳೀ ಆಂಜನೇಯ ಸ್ವಾಮಿ ದೇವಾಲಯದ ವರಮಾನದಿಂದ ಬಡವರಿಗೂ, ಬಲ್ಲಿದರಿಗೂ ಸಮಾನವಾಗಿ ಅನುಕೂಲವಾದ ಕಲ್ಯಾಣ ಮಂಟಪವನ್ನು ನಿರ್ಮಿಸಲಾಗಿದೆ ಹಾಗೂ ಹೊಸದಾಗಿ ಸುಮಾರು ೨೦ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಶ್ರೀ ರಾಜಗೋಪುರ ಕಾಯವು ಪೂರ್ಣಗೊಂಡಿದೆ. ವೃಷಭಾವತಿ ನದಿ ತೀರದಲ್ಲಿ ಮತ್ತೊಂದು ದೇವಾಲಯವೂ ಪ್ರಸಿದ್ಧವಾದುದಾಗಿದೆ. ಶ್ರೀ ಆದಿಶಕ್ತಿ ಮಾರಿಕಾಂಬ ದೇವಾಲಯದ ಇತಿಹಾಸವು ಸ್ವಾರಸ್ಯವಾದುದಾಗಿದೆ. ದಕ್ಷಿಣ ಭಾರತದಲ್ಲೆಲ್ಲ ಸ್ವಯಂಚಾಲಿತ ರಥದಲ್ಲಿ ಸಂಚರಿಸಿದ ಪ್ಲೇಗು ಮಾರಮ್ಮ ತಾಯಿಯು ಸಂಚಾರದಲ್ಲಿರುವಾಗ ರಥವು ಗಾಳಿ ಆಂಜನೇಯ ಸ್ವಾಮಿಯ ದೇವಾಲಯದ ಬಳಿ ಸ್ಥಗಿತಗೊಂಡು ನಿಂತಾಗ, ತಾನು ನೆಲೆಗೊಳ್ಳಲು ಇದೆ ಸರಿಯಾದ ಸ್ಥಳವೆಂದು 'ಆದಿಶಕ್ತಿ ಮಾರಿಕಾಂಬ' ಮಾತೆಯು ಇಲ್ಲೇ ನೆಲೆಸಿದಳು ಎಂಬ ಪ್ರತೀತಿ ಇದೆ. ಈ ದೇವಸ್ಥಾನವು ಅಸಂಖ್ಯ ಭಕ್ತ ಜನರ ಪೂಜಾ ಕೇಂದ್ರವಾಗಿದೆ. ಇತ್ತೀಚೆಗೆ ಬ್ಯಾಟರಾಯನಪುರದ ಹಿರಿಯರಾದ ಶ್ರೀರಾಮಪ್ಪ ಮತ್ತು ಲಕ್ಷ್ಮಣಪ್ಪನವರು ಈ ದೇವಾಲಯವನ್ನು

ನವೀಕರಿಸಿದ್ದಾರೆ. ನಮ್ಮ ಎಲ್ಲ ಕಾರ್ಯಗಳಲ್ಲಿಯೂ ಯಶಸ್ಸು ದೊರಕುವಂತೆ ಅನುಗ್ರಹಿಸುವ ಶ್ರೀ ಗಾಳಿ ಆಂಜನೇಯ ಸ್ವಾಮಿ ಸದಾ ಸನ್ಮಾರ್ಗ ಪ್ರವೃತ್ತಿಗಾಗಿ ಮಾರ್ಗದರ್ಶನ ಸಹಕಾರ ಆಶೀರ್ವಾದ ನೀಡುತ್ತಿದ್ದಾನೆ. ಶ್ರೀ ಗಾಳೀ ಆಂಜನೇಯ ಸ್ವಾಮಿ ದೇವಾಲಯದ ಅರ್ಚಕರು ಮತ್ತು ಪುರದ ಹಿರಿಯರಾದ ದಿವಂಗತ ಪಟೇಲ ಗುಳ್ಳಪ್ಪನವರು, ದಿ. ಛೇರ್‌ಮನ್ ಎನ್. ನರಸಿಂಹಯ್ಯನವರು ಹಾಗೂ ಉತ್ಸಾಹಿ ಯುವಜನಾಂಗ ನಮ್ಮ ದೇವಾಲಯದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರೆಂಬುದನ್ನು ಮರೆಯಲಾಗದು.

ಹನುಮಂತನ ನೆಲೆ ಹೆಚ್ಚಾಗಿ ಜಾನಪದ ಲೋಕವನ್ನೇ ಆಶ್ರಯಿಸಿದೆ. ಆತನು ದುಷ್ಟ ಶಕ್ತಿಗಳನ್ನು ನಿವಾರಣೆ ಮಾಡುತ್ತಾನೆ. ರೋಗಾದಿಗಳನ್ನು ಪರಿಹರಿಸುತ್ತಾನೆ. ಭೀತಿಯಿಂದ ನಿವೃತ್ತರಾಗುವಂತೆ ಅನುಗ್ರಹಿಸುತ್ತಾನೆ ಎಂಬ ನಂಬಿಕೆ ಇದೆ. ಹೆದರಿಕೊಂಡ ಮಕ್ಕಳಿಗೆ ಆತನ ಹೆಸರಿನಿಂದ ಕೊರಳಲ್ಲಿ ತಾಯತ ಕಟ್ಟುತ್ತಾರೆ. ಮನೆಯ ರಕ್ಷಣೆಗಾಗಿ ಹನುಮನ ಗುಂಡನ್ನು ಮುಂಭಾಗದಲ್ಲಿ ನೆಡುವ ಪದ್ಧತಿಯು ಗ್ರಾಮಾಂತರದಲ್ಲಿ ಇಂದಿಗೂ ನಡೆದು ಬಂದಿದೆ. ಕಾಂಬೋಡಿಯಾದಲ್ಲಿ ಹನುಮಂತನನ್ನು ದ್ವಾರಪಾಲಕನಂತೆ ನಿಲ್ಲಿಸಲಾಗಿದೆ. ದೇಹ ರಕ್ಷಣೆಗಾಗಿಯೂ ಆತನನ್ನು ಮೊರೆ ಹೋಗುತ್ತಾರೆ. ಈತನನ್ನು "ವಜ್ರಾಂಗ ಬಲಿ" ಎಂದು ಸಂಬೋಧಿಸುತ್ತಾರೆ.

ಹನುಮಂತನ ತಾಂತ್ರಿಕ ಪ್ರಸಕ್ತಿ ಆಗಾಧವಾದುದು. ಸಾಮಾನ್ಯವಾಗಿ "ಓಂ ನಮೋ ಭಗವತೇ ಆಂಜನೇಯಾಯ ಮಹಾ ಬಲಾಯಸ್ವಾಹಾ" ಎನ್ನುವ ಮಂತ್ರದೊಂದಿಗೆ "ಹಂ ಹನುಮತೇ ರುದ್ರಾತ್ಮಕಾಯ ಹ್ರಾಂಫಟ್" ಎಂಬ ಮಂತ್ರವೂ ಸಹ ಬಳಕೆಯಲ್ಲಿದೆ. "ಕಶಿಂಕುಕ್ಷ ವರವರ ಅಂಜನಾವರ ಪುತ್ರ ಅವೇಶಿ, ಆವೇಶಿ ಓಂ ಹ್ರೀಂ ಹನುಮನ್ ಫಟ್" ಎನ್ನುವ ಮಂತ್ರವು ಪಿಶಾಚಾದಿ ನಿವೃತ್ತಿಗೆ ಬಹು ಫಲಕಾರಿಯಾಗಿದೆ. ಸರ್ವಗ್ರಹ ವಿನಾಶಕ್ಕೂ ಸಹ ಬೇರೊಂದು ಮಂತ್ರವಿದೆ. ಡಾಕಿನಿ, ಶಾಕಿನೀ ನಿವಾರಣೆಗಾಗಿಯೂ ಹನುಮನ್ಮಂತ್ರಗಳಿವೆ.

ಇನ್ನು ಹನುಮನ್ಮಾಲ ಮಂತ್ರದಲ್ಲಿ "ಓಂ ಹ್ರೀಂ ಹಾ. ಹಾ. ಹಂಸ ಹಂಸ ಏಹಿ ಸರ್ವ ವಿಷಂ ಹರ ಹರ ಪರಬಲಂ ಕ್ಷೋಭಯ ಕ್ಷೋಭಯ ಮಮ ಸರ್ವಕಾರ್ಯಾಣಿ ಸಾಧಯ ಸಾಧಯ ಹುಂ ಫಟ್ ಸ್ವಾಹಾ" ಈ ಮಂತ್ರಗಳು ಉಚ್ಚಾರಣೆ ಮಾಡುವಾಗ ಆತನು ಪರಿಶುದ್ಧನಾಗಿರಬೇಕು. ಏಕಾಗ್ರಚಿತ್ತನಾಗಿರಬೇಕು. ಹನುಮಂತನ ಅನನ್ಯ ಭಕ್ತನಾಗಿರ ಬೇಕೆಂದು ಬೇರೆ ಹೇಳಬೇಕಾಗಿಲ್ಲ. ಆತನು ವಿದ್ಯಾಪ್ರದಾತನೂ ಅಹುದು. ಅದಕ್ಕಾಗಿ ಈ ಧ್ಯಾನ ಶ್ಲೋಕವು ಬಳಕೆಯಲ್ಲಿದೆ.

ಆಂಜನೇಯ ಮತಿ ಪಾಟಲಾನನಂ
ಕಾಂಚನಾದ್ರಿ ಕಮನೀಯ ವಿಗ್ರಹಂ ।
ಪಾರಿಜಾತ ತರು ಮೂಲವಾಸಿನಂ
ಭಾವಯಾಮಿ ಪವಮಾನ ನಂದನಮ್ ॥

ಹನುಮಂತನಿಗೆ ಪಾರಿಜಾತ ವೃಕ್ಷವು ಬಹು ಪ್ರಿಯವಾದುದು. ಅದರಡಿಯಲ್ಲಿಯೇ ಆತನ ವಾಸ ಎಂಬ ಕಲ್ಪನೆಯು ಈ ಶ್ಲೋಕದಿಂದ ಲಭಿಸುತ್ತದೆ. ಇದೇ ರೀತಿಯಾಗಿ ಇನ್ನೊಂದು ವಿದ್ಯಾ ಪ್ರಧಾನ ಮಂತ್ರದಲ್ಲಿ ಈತನು ಕದಳೀವನ ಎಂದರೆ ಬಾಳೆಯ ತೋಟದಲ್ಲಿ ಕುಳಿತು ಒಂದು ಕೈ ಮೊಳಕಾಲಿನ ಮೇಲಿಟ್ಟು ಇನ್ನೊಂದು ಕೈಯಲ್ಲಿ ಬ್ರಹ್ಮಧ್ಯಾನ ನಿರತನೆಂದೂ ಹೇಳಲಾಗಿದೆ.

ಹನುಮಂತ ವೀರ ಬ್ರಹ್ಮಚಾರಿ, ನೈಷ್ಠಿಕ ಬ್ರಹ್ಮಚಾರಿ ಎಂಬ ನಂಬಿಕೆಯೂ ಇದೆ. ಹೀಗಿದ್ದರೂ ಈತನು ಭಾರತೀ ರಮಣನೆಂದು ಮಾಧ್ವ ಸಂಪ್ರದಾಯವಾದಿಗಳ ನಂಬಿಕೆ. ಆದರೆ ಯಾವ ಚಿತ್ರದಲ್ಲಿಯೂ ಈ ಭಾರತೀ ರಮಣತ್ವವು ಚಿತ್ರಿತವಾಗಿಲ್ಲ.

ಅಂಜಲಿ ಬದ್ಧನಾದ ಹನುಮಂತನ ವಿಗ್ರಹವು ಮನೆಯಲ್ಲಿಟ್ಟು ಪೂಜೆ ಮಾಡಲು ಒಳ್ಳೆಯದೆಂದು ನಂಬುತ್ತಾರೆ. ದೇವಾಲಯಗಳಲ್ಲಿ ರಣವೀರಾಂಜನೇಯನ ವಿಗ್ರಹಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಗದಾಧಾರಿಯಾಗಿಯೋ, ಪರ್ವತವನ್ನೆತ್ತಿಕೊಂಡೋ ಮರವನ್ನೆತ್ತಿ

ದಾಪುಗಾಲು ಹಾಕಿದವನನ್ನೊ ನಾವು ಕಾಣಬಹುದಾಗಿದೆ. ಗದೆಯು ವೀರಾವೇಶದ ಮುದ್ರೆಯಾದರೆ ಮರ ಹಿಡಿದಿರುವದು ದೈತ್ಯರ ಸಂಹಾರಕ್ಕಾಗಿ ಎಂದೂ, ಇನ್ನು ಬೆಟ್ಟವನ್ನೆತ್ತಿ ಹಿಡಿದಿದ್ದಲ್ಲಿ ಸಂಜೀವಿನಿ ಪರ್ವತವನ್ನು ಎತ್ತಿ ತಂದ ದ್ಯೋತಕವೆಂದೂ ನಂಬುತ್ತಾರೆ. ಕೆಲವು ಸಂದರ್ಭಗಳಲ್ಲಿ ರಾಮ ಲಕ್ಷ್ಮಣರನ್ನು ಹೆಗಲ ಮೇಲೇರಿಸಿಕೊಂಡಿರುವಂತೆ ಬಿಡಿಸಲಾದ ಪ್ರತಿಮಾ ವಿಗ್ರಹಗಳೂ ನಮಗೆ ಕಾಣಲು ಸಿಗುತ್ತವೆ.

ಸಾಮಾನ್ಯವಾಗಿ ಹನುಮಂತನು ದ್ವಿಭುಜನಾಗಿಯೇ ಕಾಣಿಸಿಕೊಳ್ಳುತ್ತಾನೆ. ಆದರೆ ಕೆಲವು ಸಂದರ್ಭಗಳಲ್ಲಿ ಆತನು ಆರು ಕೈಗಳಿಂದ ಮತ್ತೆ ಕೆಲವು ಸಂದರ್ಭಗಳಲ್ಲಿ ಎಂಟು ಕೈಗಳಿಂದ ಕೂಡಿದ ಪಂಚಲೋಹದ ವಿಗ್ರಹಗಳೂ ನಮಗೆ ಕಾಣಸಿಗುತ್ತವೆ. ಹನುಮಂತನಿಗೆ ಪಂಚ ಮುಖವಿರುವ ಕಲ್ಪನೆಯೂ ಸಹ ಇದೆ. ಮಂತ್ರಾಲಯದ ಇನ್ನೊಂದು ದಂಡೆಯ ಮೇಲೆ ಪಂಚಮುಖದ ಆಂಜನೇಯನಿದ್ದು ಕಲಿಯುಗದ ಕಲ್ಪತರು ಎಂದೆನಿಸಿರುವನು.

ಶ್ರೀ ರಾಘವೇಂದ್ರ ಸ್ವಾಮಿಗಳು ಈ ದೇವನನ್ನು ಕುರಿತು ತಪಗೈದರೆಂದು ಪ್ರತೀತಿ ಇದೆ. ಪಂಚಮುಖಗಳೆಂದರೆ ಮುಂಭಾಗದಲ್ಲಿ ವಾನರ ಮುಖವಾದರೆ, ಬಲಗಡೆಗೆ ಸಿಂಹಮುಖ, ಎಡಭಾಗದಲ್ಲಿ ವರಾಹಮುಖ, ಮೇಲ್ಭಾಗದಲ್ಲಿ ಕುದುರೆಯ ಮುಖ (ಹಯಮುಖ), ಹಿಂಬದಿಯಲ್ಲಿ ಗರುಡ ಮುಖ, ಇನ್ನು ಕೈಗಳಲ್ಲಿ ಭೀಷಣ ಖಡ್ಗ, ತ್ರಿಶೂಲ (ಅಥವಾ ಶೂಲ), ಶಂಖ, ಚಕ್ರ, ಪಾಶ ಅಥವಾ ಖಡ್ವಾಂಗ, ಅಂಕುಶ, ಪರ್ವತ, ಗದೆ, ಮುಸಲ ಅಥವಾ ಮುಷ್ಟಿ ಹೀಗೆ ನಾನಾವಿಧ ಆಯುಧಗಳನ್ನು ಹಿಡಿದ ಭಂಗಿಯಲ್ಲಿರುವ ವಿಗ್ರಹಗಳನ್ನು ಕಂಡಾಗ ಎಂಥಹವನಿಗೂ ಅಚ್ಚರಿಯೆನಿಸದಿರದು. ಕೆಲವು ಮಾಧ್ವ ಸಂಪ್ರದಾಯದ ಮಠಗಳಲ್ಲಿ ಇಂಥ ವಿಗ್ರಹಗಳಿರುವುದನ್ನು ಈ ಲೇಖಕನು ಕಂಡಿದ್ದಾನೆ. ಯೋಗಾಂಜನೇಯ ಚತುರ್ಭುಜ ಮೂರ್ತಿಯದಾಗಿದ್ದು ಎಡಗೈ ಲಂಬಹಸ್ತ ಮುದ್ರೆ, ಬಲಗೈಯಲ್ಲಿ ಜಪಮಾಲೆ, ಮೂರನೆಯದರಲ್ಲಿ ಯೋಗದಂಡ, ನಾಲ್ಕನೆಯ ಕೈಯಲ್ಲಿ ಕಮಂಡಲ ಧರಿಸಿ ವಲ್ಕಲವನ್ನು

ಯೋಗಾಸನದಲ್ಲಿ ಬಿಡಿಸಲಾದ ವಿಗ್ರಹಗಳೂ ಇವೆ. ಇನ್ನು ದ್ವಿಭುಜ ಯೋಗಾಂಜನೇಯನ ವಿಗ್ರಹವನ್ನೂ ಸಹ ನಾವು ಕಾಣುತ್ತೇವೆ. ಪದ್ಮಾಸನದಲ್ಲಿ ಮಂಡಿತನಾಗಿ ಬಲಗೈಯಲ್ಲಿ ಚಿನ್ಮುದ್ರೆ, ಎಡಗೈಯಲ್ಲಿ ಪುಸ್ತಕ ಅಥವಾ ವೀಣಾಪಾಣಿಯಾಗಿ ನಿಂತಂತಿರುವ ಮೂರ್ತಿಗಳೂ ಇವೆ.

ಹನುಮಂತನ ವಾಹನವನ್ನು ವಿಷ್ಣು ದೇವಾಲಯಗಳಲ್ಲಿ ಬಳಸುತ್ತಾರೆ. ಗಂಟೆಯ ಮೇಲೆ ಸ್ಥಾನಕ ಮುದ್ರೆಯ ಹನುಮಂತನನ್ನೂ ಬಿಡಿಸುತ್ತಾರೆ.



# ಆಂಜನೇಯನ ಭಕ್ತ ಔರಂಗಜೇಬ

ಮಧ್ಯಪ್ರದೇಶದಲ್ಲಿರುವ ಇಂದೂರ್ ಒಂದು ಕಾಲದಲ್ಲಿ ಇಂದ್ರಪುರವೆಂದು ಕರೆಸಿಕೊಳ್ಳುತ್ತಿತ್ತು. ಪುರಾತತ್ವ ಇಲಾಖೆಯ ಅನ್ವೇಷಣೆಯ ಮೇರೆಗೆ ಇಂದ್ರನಿಗೆ ಸಂಬಂಧಿಸಿದಂತಿರುವ ಇಂದ್ರೇಶ್ವರನ ಪ್ರಾಚೀನ ದೇವಮಂದಿರವನ್ನು ತೋರಿಸುತ್ತಾರೆ.

ಇ.ಸ. ೧೩೦೫ರಲ್ಲಿ ಆಸ್ಮುಲ್ ಮುಲ್‌ತಾನಿ ಎಂಬ ಹೆಸರಿನ ಖಿಲ್ಜಿ ಮನೆತನದ ಸೇನಾಪತಿಯು ಈ ಪವಿತ್ರ ಕ್ಷೇತ್ರದ ಮೇಲೆದಾಳಿ ಮಾಡಿ ಅದನ್ನು ಸಂಪೂರ್ಣವಾಗಿ ನಾಶಪಡಿಸಿದನು. ಮುಂದೆ ೧೩೭೪ರಲ್ಲಿ ಹೋಳ್‌ಕರ್ ಸಂತತಿಯವರಿಂದ ಈ ಕ್ಷೇತ್ರವು ಪುನರುದ್ಧಾರವನ್ನು ಹೊಂದುವಂತಾಯಿತು. ಹಳೆಯ ಇಂದೂರಿನ ಭಾಗದಲ್ಲಿ ಇಂದಿಗೂ ಇಂದ್ರೇಶ್ವರ ದೇವಾಲಯವಿರುವದನ್ನು ಕಾಣಬಹುದು. ಕಾಲಾಂತರದಲ್ಲಿ ಇಂದ್ರಪುರವು ಅಪಭ್ರಂಶ ರೂಪ ತಾಳಿ ಇಂದೂರ್ ಎಂದು ಗುರುತಿಸುವಂತಾಯಿತು. ಛತ್ರಪತಿ ಶಿವಾಜಿ ಮಹಾರಾಜನು ಆಗ್ರಾಕ್ಕೆ ಭೇಟಿಯನ್ನಿತ್ತು ಪುನಃ ದಕ್ಷಿಣಕ್ಕೆ ಮರಳಿ ಬರುತ್ತಿದ್ದಾಗ ಅವರ ಕೆಲವೇ ಸಂಗಡಿಗರೊಂದಿಗೆ ಇಂದೂರಿಗೆ ಬಂದು ಹೋದರೆಂಬುದು ಇತಿಹಾಸದಿಂದ ತಿಳಿದು ಬರುವದು.

ಛತ್ರಪತಿ ಶಿವಾಜಿ ಮಹಾರಾಜನಂತೆ ಆತನ ಗುರುಗಳೆನಿಸಿದ ಸಮರ್ಥ ರಾಮದಾಸರೂ ಸಹ ಭಾರತ ಪರ್ಯಟನ ಕಾಲದಲ್ಲಿ

ಇಂದೂರಿಗೆ ಬಂದು ಹೋದರು. ತಾವು ಬಂದು ಹೋದ ಗುರುತು ಎಂಬಂತೆ ಇಂದೂರಿನಲ್ಲಿ ಅವರು ಮಾರುತಿ ಮಂದಿರವನ್ನು ಪ್ರತಿಷ್ಠಾಪಿಸಿದರು. ಮುಂದೆ ಈ ದೇವನು ಗ್ರಾಮದೇವತೆ ಎಂದು ಪೂಜೆಗೊಳ್ಳತೊಡಗಿದನು. ಆ ಭಾಗದ ಜನರು ಈ ದೇವನನ್ನು "ಖೇಡಾಪತಿ" ಎಂದು ಕರೆಯುವದು ವಾಡಿಕೆಯಲ್ಲಿದೆ.

ಔರಂಗಜೇಬನು ತನ್ನ ಜೀವಿತಕಾಲದಲ್ಲಿ ಈ ಖೇಡಾಪತಿಗೆ ನಿತ್ಯಪೂಜಾ ನೈವೇದ್ಯಗಳು ನಡೆಯುವಂತೆ ಮುರಾದಶಹಾಫಕೀರ ಎಂಬುವವರನ್ನು ನಿಯಮಿಸಿದ್ದನು. ಈ ಕಾರ್ಯಕ್ಕಾಗಿ ಆತನಿಗೂ ಹಾಗೂ ದೇವಾಲಯಕ್ಕೂ ಕೆಲವು ಜಮೀನುಗಳನ್ನು ಉಂಬಳಿ ಕೊಟ್ಟರು.

ಮುಂದೆ ಮರಾಠಾ ಸುಬೇದಾರರಾಗಿದ್ದ ಮಹ್ಲಾರರಾವ್ ಹೊಳ್ಕರರು ತಮ್ಮ ಕಾಲದಲ್ಲಿ ಮುಸಲ್ಮಾನ ಅರ್ಚಕರನ್ನು ತೆಗೆದು ಹಾಕಿ ಆ ಸ್ಥಳದಲ್ಲಿ ಹಿಂದೂ ಅರ್ಚಕರನ್ನು ನಿಯಮಿಸಿದರು. ಹೀಗೆ ನಿಯುಕ್ತ ಮಾಡಲಾದ ಅರ್ಚಕನ ಹೆಸರು ಮಹಂತ ಬೈರಾಗಿ ಬಾಬಾ ಎಂದು ದೇವಸ್ಥಾನದ ಕಾಗದ ಪತ್ರಗಳಿಂದ ತಿಳಿದು ಬರುವದು ಮುಂದೆ ಆ ಸಂತತಿಯಲ್ಲಿ ಆಸಾರಾಮ ಸಂತತಿಯವರು ಆ ಕಾರ್ಯವನ್ನು ಮುಂದುವರೆಸಿಕೊಂಡು ಬಂದಿರುವರು.

ಔರಂಗಜೇಬನು ಚಿತ್ರಕೂಟದಲ್ಲಿರುವ ಶ್ರೀರಾಮನ ದೇವಾಲಯಕ್ಕೂ ಸಹ ಕೆಲವು ದತ್ತಿಗಳನ್ನು ಬಿಟ್ಟುಕೊಟ್ಟಿರುವನೆಂಬ ವಿಚಾರವನ್ನು ಆಧಾರ ಸಹಿತವಾಗಿ ಪ್ರಸಿದ್ಧ ಪಾಕ್ಷಿಕ ಆಂಗ್ಲ ಪತ್ರಿಕೆಯೊಂದು ಪ್ರಕಟಿಸಿರುವದುಂಟು.

ಹಿಂದೂ ಧರ್ಮ ನಾಶ ಮಾಡಲು ಹೊರಟ ಔರಂಗಜೇಬನು ಇಸ್ಲಾಮಾಬಾದಿನ ಹತ್ತಿರ ಈಶ್ವರ ದೇವಾಲಯವನ್ನು ಸ್ಥಾಪಿಸಿರುವದುಂಟು. ಈ ಮಹಾನುಭಾವನು ಔರಂಗಾಬಾದಿಗೆ ತೀರ ಸಮೀಪದ ಸ್ಥಳವೆನಿಸಿದ ದೇವಗಿರಿ ಅಥವಾ ದೌಲತಾಬಾದಿನಿಂದ ಕೇವಲ ೩ ಕಿಲೋಮೀಟರ್ ಅಂತರದಲ್ಲಿರುವ ಖುಲ್‌ದಾಬಾದ್ ಎಂಬ ಸ್ಥಳದಲ್ಲಿಯೇ ತಾನು ಸಾಯುವ ಮೊದಲೇ ತನ್ನ ಸಮಾಧಿಯಾಗುವಂತೆ

ತೀರ್ಮಾನ ಮಾಡಿಕೊಂಡಿದ್ದನು. ಮುಂದೆ ಆತನ ಮೃತದೇಹವನ್ನು ತಂದು ಖಿಲ್‌ದಾಬಾದಿನಲ್ಲಿಯೇ ಸಮಾಧಿ ಮಾಡಲಾಯಿತು.

ಖಿಲ್‌ದಾಬಾದಿನಲ್ಲಿರುವ ಮಾರುತಿಯ ವಿಗ್ರಹವು ಮಲಗಿ ವಿಶ್ರಾಂತಿ ಪಡೆಯುತ್ತಿರುವ ಭಂಗಿಯಲ್ಲಿರುವದು. ಈ ದೇವನಿಗೆ ಪ್ರತಿ ಶನಿವಾರ ತಪ್ಪದೆ ಇಪ್ಪತ್ತೊಂದು ಸಲ ಬಂದು ಸೇವಾದಿಗಳನ್ನು ಮಾಡಿದಲ್ಲಿ ಭಕ್ತರ ಇಷ್ಟಾರ್ಥಗಳೆಲ್ಲ ಪೂರ್ಣಗೊಳ್ಳುತ್ತವೆ ಎಂಬ ನಂಬಿಕೆಯು ಬೆಳೆಯಿತು. ಇದರಿಂದಾಗಿ ಪ್ರತಿ ಶನಿವಾರವೂ ಪರಸೆಯ ಪ್ರಮಾಣದಲ್ಲಿ ಭಕ್ತರು ಬಂದು ಹೋಗುವದುಂಟು. ಈ ಭಕ್ತರಲ್ಲಿ ಔರಂಗಾಬಾದಿನಿಂದ ಬರುವ ಜನರೇ ಬಹಳ. ಇಂದು ಆ ದೇವನಿಗಾಗಿ ಸುಮಾರು ಐವತ್ತು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಭವ್ಯವಾದ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದ್ದಾರೆ. ಇತಿಹಾಸದ ಈ ಘಟನೆಯನ್ನು ಪ್ರತ್ಯಕ್ಷವಾಗಿ ಕಂಡು ಬಂದ ನಂತರವೇ ಈ ಲೇಖನವು ಸಿದ್ಧವಾದುದು ದೈವೀಯೋಗವೆನಿಸುವುದು.



# ಪ್ರಸನ್ನ ವೆಂಕಟದಾಸರು

ಮಾನವನ ಭಕ್ತಿಯ ಭಾವವು ವಿಶ್ವದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಭಾವನಾಜೀವಿಯಾದ ಮಾನವ ವಿಚಾರಶೀಲನೂ, ಚಿಂತಕನೂ ಅಹುದು. ಆತನು ಬಾಳಿನುದ್ದಕ್ಕೂ ಅನುಭವಿಸಿದ ಭಾವಾನುಭಾಗಳೊಂದಿಗೆ ವಿಶ್ವದಾಶ್ರಯದಲ್ಲಿಯೇ ಬೆಳೆಯುತ್ತ ಬಂದಿದ್ದಾನೆ. ನಿಸರ್ಗದೊಂದಿಗೆ ಅದೃಷ್ಟದ ಕೈಗೂಸಾಗಿ ಪಾಲನೆಗೊಂಡಿದ್ದಾನೆ. ತಾನು ಬೆಳೆದ ನಿಸರ್ಗದ ಒಂದೊಂದೇ ಚಮತ್ಕಾರಗಳನ್ನು ಕಂಡು ತನಗರಿವಿಲ್ಲದಂತಹ ಶಕ್ತಿಗೆ ಮಾರು ಹೋಗಿ ಅವ್ಯಕ್ತವಾದ ಆ ಶಕ್ತಿಯೇ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದವನೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾನೆ. 'ನನ್ನೊಂದಿಗೆ ಈ ನಿಸರ್ಗವನ್ನು ಸೃಷ್ಟಿಸಿದವನೊಬ್ಬನಿದ್ದಾನೆ. ಆತನೇ ಎಲ್ಲ ಜೀವವನ್ನು ರೂಪಿಸುವವನು. ಆತ ಸರ್ವಶಕ್ತನಾದ ಭಗವಂತ. ನಾನು ಆತನ ದಾಸ' ಎಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾನೆ. ಆತನ ಈ ಭಾವನೆ ಹಾಗೂ ಬದುಕು ವಿಶ್ವಕ್ಕೆ ಶಾಂತಿಯನ್ನು ಒದಗಿಸುವ ಸಂದೇಶಗಳಾಗಿ ಗುರುತಿಸಲ್ಪಡುತ್ತಿವೆ.

ಈಶ ದಾಸಭಾವದ ಪ್ರಾಕಾರವನ್ನುಕಂಡು ಕೊಂಡಾಗ ಮುಂದೆ ಕಾಲಾಂತರದಲ್ಲಿ ಹರಿದಾಸ ಪದರೂಪವನ್ನು ತಾಳಿತು. ಹರಿದಾಸವೆಂಬುದು ಜಾತಿವಾಚಕ ಶಬ್ದವಲ್ಲ. ಈ ವಿಚಾರದಲ್ಲಿ ನಾವು ಮಹಾವೀರಾಗ್ರಣಿಯಾದ,

ವ್ಯಾಕರಣ ಪಂಡಿತನೆಂದೆನಿಸಿಕೊಳ್ಳುವ ಕನ್ನಡನಾಡಿನ ಕಿಷ್ಕಿಂದಾನಿವಾಸಿ ಎಂದೆನಿಸಿಕೊಂಡ ಆಂಜನೇಯನ ಹೆಸರನ್ನು ಸೂಚಿಸಬಹುದು. ಒಂದು ಸಂದರ್ಭದಲ್ಲಿ ಆ ಮಹಾನುಭಾವನು ಮದಾಂಧನಾದ ರಾವಣನಿಗೆ "ದಾಸೋಹಂ ಕೋಸಲೇಂದ್ರಸ್ಯ" ಎಂಬ ಮಾತಿನಿಂದ ತನ್ನ ಪರಿಚಯ ಮಾಡಿಕೊಡುತ್ತಾನೆ. ಆದುದರಿಂದ ದಾಸಶಬ್ದದ ಮೂಲಪುರುಷ ಆಂಜನೇಯನೇ ಎಂದು ಹೇಳಬಹುದು.

ಕರ್ನಾಟಕದ ಹರಿದಾಸ ಪರಂಪರೆಗೆ ಎಂಟು ನೂರುವರುಷಗಳ ಇತಿಹಾಸವಿದೆ. ಭಾಗೀರಥಿಯಂತಿರುವ ಈ ದಾಸ ಪರಂಪರೆಯು ಇಂದಿಗೂ ಜೀವನದಿಯಾಗಿ ಹರಿದು ಬರುತ್ತಿರುವುದನ್ನು ನಾವು ಕಾಣುತ್ತೇವೆ. ಹರಿದಾಸರು ತಮ್ಮ ಕಾರ್ಯಕ್ರಮಗಳನ್ನಾರಂಭಿಸುವಾಗ "ನಮಃ ಶ್ರೀಪಾದರಾಜಾಯ" ಎಂದು ಪ್ರಾರಂಭಿಸಿ ವ್ಯಾಸರಾಯರನ್ನು ಪುರಂದರದಾಸರ ಹೆಸರಿನೊಂದಿಗೆ ವಿಜಯದಾಸರ ಹೆಸರನ್ನೂ ಸ್ಮರಿಸಿಕೊಳ್ಳುತ್ತಾರೆ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ತಿರುಮಲಾಧೀಶನ ಅನುಗ್ರಹ ಪಡೆದ ಹರಿದಾಸರೆಂದೆನಿಸಿದ ಪ್ರಸನ್ನ ರಾಯರನ್ನು ಮಾತ್ರ ಹಿಂದಕ್ಕೆ ತಳ್ಳಿದ್ದಾರೆ. ಪ್ರಸನ್ನರು ವಿಜಯದಾಸರಿಗಿಂತ ಹಿರಿಯರು. ಸಾಹಿತ್ಯ ಸೇವೆಯಲ್ಲಿ ಹಾಗೂ ಪರಮಾತ್ಮನ ಅನುಗ್ರಹ ಪಡೆದವರಲ್ಲಿ ಅಗ್ರಮಾನ್ಯರು. ಹೀಗಿದ್ದರೂ ದಾಸಪರಂಪರೆಯವರ ಗಮನವು ಪ್ರಸನ್ನರಲ್ಲಿ ಕೇಂದ್ರೀಕೃತವಾಗಿಲ್ಲ. ಇದಕ್ಕೆ ಮೂಲಕಾರಣವೆಂದರೆ ವಿಜಯದಾಸರಂತೆ ಪ್ರಸನ್ನರು ಶಿಷ್ಯವರ್ಗವನ್ನು ಕಟ್ಟಿಕೊಳ್ಳದೆ ಏಕಾಂತ ಭಕ್ತರಾಗಿ ಬಾಳಿರುವುದೇ ಈ ವಿಷಯಕ್ಕೆ ಕಾರಣವಾಗಿರಬಹುದು ಎಂದು ಭಾವಿಸಬಹುದು."

ಕರ್ನಾಟಕದ ಹರಿದಾಸರೆಲ್ಲ ನೂರಕ್ಕೆ ತೊಂಬತ್ತೈದರಷ್ಟು ಜನ ಪಂಢರಪುರದ ವಿಠ್ಠಲನ ಹೆಸರನ್ನೇ ಅಂಕಿತವಾಗಿಟ್ಟುಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ನರಹರಿತೀರ್ಥರು, ವ್ಯಾಸರಾಯರು, ವಾದಿರಾಜರು ಹಾಗೂ ಪ್ರಸನ್ನ ವೆಂಕಟರು, ಕನಕದಾಸರು ಇವರೇ ಮೊದಲಾದ ಕೆಲವರು ತಮ್ಮ ಆರಾಧ್ಯ ದೈವವನ್ನು ಅಂಕಿತವಾಗಿಟ್ಟುಕೊಂಡು

ಕೃತಿರಚನೆ ಮಾಡಿದ್ದಾರೆ. ಪ್ರಸನ್ನರ ಜೀವನವಂತೂ ತಿರುಮಲಾಧೀಶನೊಂದಿಗೆ ಹಾಸುಹೊಕ್ಕಾಗಿ ಬೆಳೆದುಬಂದಿದೆ. ಅವರು ಹೆಚ್ಚಾಗಿ ನಿಸರ್ಗದ ಆರಾಧಕರು. ನಿರಕ್ಷರ ಕುಕ್ಷಿಗಳು, ದನಗಾಹಿಯಾಗಿ ಬಾಳಿದವರು. ಸಾಧಕರಿಗೆ ಅವರ ಜೀವನವು ಚೇತೋಹಾರಿಯಾದ ಮಾರ್ಗದರ್ಶವನ್ನೀಯುತ್ತದೆ.

ಪ್ರಸನ್ನರ ಪೂರ್ವಜರೆಲ್ಲ ಆದಿಲ್‌ಶಾಹಿ ರಾಜ್ಯದ ರಾಜಧಾನಿಯಾದ ಬೀಜಾಪುರದ ಸಮೀಪದಲ್ಲಿರುವ ಕಾಖಂಡಕಿ ಎಂಬ ಗ್ರಾಮ ನಿವಾಸಿಗಳು. ಇಬ್ರಾಹೀಮ ಆದಿಲ್‌ಶಹನಂತೂ ವೆಂಕಟೇಶನ ಪರಮ ಭಕ್ತನಾಗಿದ್ದ. ಒಳ್ಳೆ ಸಂಸ್ಕೃತ ವಿದ್ವಾಂಸನಾಗಿದ್ದ. ಸಂಗೀತ ಚಿತ್ರಕಲೆಗಳಲ್ಲಿ ಅಪ್ರತಿಭ ಪಂಡಿತನೆಂದೆನಿಸಿಕೊಳ್ಳುತ್ತಿದ್ದ. ಈತನ ಕಾಲದಲ್ಲಿ ರಾಜಧಾನಿಯ ಸಮೀಪದಲ್ಲಿಯೇ ವೆಂಕಟಾಪುರವೆಂಬ ಅಗ್ರಹಾರವೂ ನಿರ್ಮಾಣಗೊಂಡಿತು.

ಒಂದು ಕಾಲದಲ್ಲಿ ಕರ್ನಾಟಕದ ಪ್ರತಿಯೊಂದು ಭಾಗದಿಂದಲೂ ದೇವನ ಪಲ್ಲಕ್ಕಿಯೊಂದಿಗೆ ಯಾತ್ರಿಕರು ತಿರುಮಲೆಗೆ ಬಂದು ಹೋಗುವ ಸಂಪ್ರದಾಯವಿತ್ತು. ಆದಿಲ್‌ಶಾಹಿ ರಾಜ್ಯದ ಮಾಂಡಲೀಕರೆನಿಸಿದ ವಾಗನಗೇರಿಯ ಬೇಡರ ನಾಯಕರು (ಸುರಪುರದವರು) ತಿರುಮಲೆಯ ಬೆಟ್ಟದ ಮೇಲೆ ತಮ್ಮ ನಾಡಿನಿಂದ ಯಾತ್ರೆಗೆಂದು ಹೋಗುವವರಿಗಾಗಿ ಅನ್ನಛತ್ರವನ್ನು ಕಟ್ಟಿಸಿದ್ದರು. ಈ ಛತ್ರವೇ ಮೊಟ್ಟ ಮೊದಲನೆಯ ಕರ್ನಾಟಕದ ಛತ್ರವೆನಿಸಿಕೊಂಡಿತು. ಪ್ರತಿದಿನದ ಹೂವಿಗಾಗಿ ಹೂತೋಟವನ್ನು ರಚಿಸಿದ್ದರು. ಏಕಾಂತಸೇವೆಗಾಗಿ ಪ್ರತಿದಿನ ಹಾಲು ಪೂರೈಸುವಂತೆಯೂ, ದೇವನಿಗೆ ಪಲ್ಲಂಗಕ್ಕಾಗಿ ನವಾರವನ್ನೂ ಸಹ ಈ ನಾಯಕರಿಂದಲೇ ಕೊಡಲ್ಪಡುತ್ತಿತ್ತು. ಆದಿಲ್‌ಶಾಹಿ ರಾಜ್ಯದಿಂದ ಎರಡು ಹಳ್ಳಿಗಳೂ ಸಹ ದೇವನ ಸೇವೆಗಾಗಿ ಬಿಡಲ್ಪಟ್ಟಿದ್ದವು.

ಔರಂಗಜೇಬನು ವಿಜಾಪುರದ ಮೇಲೆ ದಾಳಿ ಮಾಡಿದಾಗ ಪ್ರಸನ್ನರ ಪೂರ್ವಜರು ವಾಸವಾಗಿದ್ದ ಕಾಖಂಡಕಿ ಗ್ರಾಮವು ನೆಲಸಮವಾಗಿ ಹೋಯಿತು. ಒಂದೇ ದಿನ ನಾನೂರು ಜನ ಹಿಂದೂ

ಮಹಿಳೆಯರು ಬಾವಿಗೆ ಹಾರಿ ಪ್ರಾಣ ಕಳೆದುಕೊಂಡರು. ಈ ಗೊಂದಲದಿಂದ ಹೇಗೋ ಪಾರಾಗಿ ಬಂದ ಕುಟುಂಬವು ಘಟಪ್ರಭಾ ನದಿಯ ದಂಡೆಯ ಮೇಲಿರುವ ಬಾಗಲಕೋಟೆಗೆ ಬಂದುಸೇರಿತು. ತಾಯಿ ತಂದೆ ಇಬ್ಬರು ಗಂಡು ಸಂತಾನರಿಂದ ಕೂಡಿದ ಈ ಕುಟುಂಬಕ್ಕೆ ಪ್ಲೇಗಿನ ಹಾವಳಿಯಲ್ಲಿ ಹಿರಿಯರಾದ ತಂದೆ ತಾಯಿಗಳು ಆಹುತಿಯಾದರು. ಕೊನೆಯ ಮಗನಾದ ವೆಂಕಪ್ಪಯ್ಯ ಅತೀ ಚಿಕ್ಕಬಾಲಕ. ಅತ್ತಿಗೆಯ ಅವಹೇಳನದ ಮಾತನ್ನು ತಾಳಲಾರದೆ ದನಕಾಯುವ ವೃತ್ತಿಯನ್ನಾರಂಭಿಸಿದ. ಗೋಪಾಲಕನಾದ. ಆಗಾಗ ಆತನಿಗೆ ಎಲ್ಲಿಂದಲೋ ಕೊಳಲಿನ ನಾದವು ಕೇಳಬರತೊಡಗಿತು. ನಿಸರ್ಗದಲ್ಲಿ ಮೈಮರೆತು ಆ ನಾದ ಮಾಧುರ್ಯದಲ್ಲಿ ಒಂದಾಗಿ ಹೋಗುತ್ತಿದ್ದ. ಒಂದು ಸಂದರ್ಭದಲ್ಲಿ ಬ್ರಹ್ಮೋತ್ಸವಕ್ಕೆಂದು ತಿರುಮಲೆಗೆ ವಿಜಾಪುರದಿಂದ ಹೊರಟ ಪಲ್ಲಕ್ಕಿಯು ಬಾಗಲಕೋಟೆಗೆ ಬಂದಿಳಿದಾಗ ವೆಂಕಪ್ಪಯ್ಯ ಆ ಪ್ರವಾಸಿಗರೊಂದಿಗೆ ದಿನಕ್ಕೊಂದು ಊರಿನಂತೆ ಸಂಚಾರ ಮಾಡುತ್ತ ತಿರುಮಲೆಗೆ ಬಂದು ಸೇರಿದ. ದೇವಸ್ಥಾನದ ಮುಂಭಾಗದಲ್ಲಿದ್ದ ಸುರಪುರದ ಛತ್ರದಲ್ಲಿಯೇ ಆತನಿಗೆ ಆಶ್ರಯವು ಲಭಿಸಿತು. ಛತ್ರದ ಪಾರುಪತ್ಯದಾರರಿಗೆ ಕನ್ನಡನಾಡಿನ ಹುಡುಗ ದೊರೆತುದು ಹೆಚ್ಚಿನ ಅನುಕೂಲವೆನಿಸಿತು. ಅಂದಿನಿಂದ ವೆಂಕಪಯ್ಯ ಹನ್ನೆರಡು ವರುಷಗಳ ಕಾಲ ಶ್ರೀನಿವಾಸನ ಸೇವೆಯಲ್ಲಿ ನಿರತನಾದ. ಬಂದ ಯಾತ್ರಿಕರಿಗೆಲ್ಲ ಅನುಕೂಲತೆಗಳನ್ನೊದಗಿಸುತ್ತ ಸಜ್ಜನರ ಸಹವಾಸದಲ್ಲಿ ದಿನಗಳೆಯತೊಡಗಿದ.

ಒಂದು ಸಲ ಬ್ರಹ್ಮೋತ್ಸವ ಕಾಲದಲ್ಲಿ ಕನಕದಾಸರ ಭಕ್ತರು ಒಟ್ಟುಗೂಡಿಕೊಂಡು ದೇವನ ರಥದ ಮುಂದೆ ಕಂಬಳಿಗಳನ್ನು ಹೊದ್ದುಕೊಂಡು, ಕಾಲಿಗೆ ಗೆಜ್ಜೆಕಟ್ಟಿಕೊಂಡು, ಡೊಳ್ಳು ಜಾಗಟೆ, ತಾಳವಾದ್ಯಗಳೊಂದಿಗೆ "ದೇವೀ ನಮ್ಮನೇ ದ್ಯಾವರು ಬಂದಾರೆ ಬನ್ನಿರೇ ನೋಡಬನ್ನೀರೇ" ಎಂಬ ಕನಕದಾಸರ ಪದ್ಯವನ್ನು ಭಾವ ಪರವಶರಾಗಿ ಏಕೋಭಾವದಿಂದ ಮೈದುಂಬಿ ತಾಳಲಯಬದ್ಧವಾಗಿ ನರ್ತಿಸುತ್ತ, ಭಜನೆ ಮಾಡುತ್ತ ಕುಣಿಯುತ್ತಿರುವುದನ್ನು ಕಂಡಾಗ ಆ ದೃಶ್ಯವು ವೆಂಕಪ್ಪಯ್ಯನ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮವನ್ನು ಮಾಡಿತು.

“ಪ್ರಭೋ, ದೇವ, ನಾನು ನಿರಕ್ಷರ ಕುಕ್ಷಿ, ಆದರೂ ನನ್ನಿಂದ ಇಲ್ಲಿಯವರೆಗೆ ಅವ್ಯಾಹತವಾಗಿ ನಿನ್ನ ಸೇವೆ ಸಾಂಗವಾಗಿ ಸಾಗುತ್ತಬಂದಿದೆ. ನನ್ನ ಮೇಲೆ ಅನುಗ್ರಹ ಮಾಡಬಾರದೇ. ನಾನು ಈ ಜನರಂತೆ ನಿನ್ನ ಮಹಿಮೆಗಳನ್ನು ಕೊಂಡಾಡುತ್ತಾ ನರ್ತಿಸುವ ಭಾಗ್ಯವನ್ನು ನನಗೆ ದಯಪಾಲಿಸಬಾರದೇ. ಇಂದೇ ಸಂಕಲ್ಪಮಾಡುತ್ತೇನೆ. ನಿನ್ನ ಅನುಗ್ರಹವಾಗುವವರೆಗೆ ನಾನೆಂದೂ ಅನ್ನವನ್ನು ಸ್ವೀಕಾರ ಮಾಡುವುದಿಲ್ಲ. ಯಾರಿಗೂ ಬೇಡವಾದ ಈ ಜೀವ ಇದ್ದರೇನು ಇರದಿದ್ದರೇನು. ಅದನ್ನು ನಿನ್ನ ಪಾದಾರವಿಂದದಲ್ಲಿಯೇ ಸಮರ್ಪಿಸುತ್ತೇನೆ.” ಎಂದು ಉಪವಾಸವನ್ನಾರಂಭಿಸಿದ. ಯಾರು ಏನು ಹೇಳಿದರೂ ತನ್ನ ಉಪವಾಸವನ್ನು ಬಿಡಲಿಲ್ಲ. ದಿನದಿಂದ ದಿನಕ್ಕೆ ಆತನ ದೇಹ ಕ್ಷೀಣಿಸತೊಡಗಿತು. ಆತನ ಪರಿಸ್ಥಿತಿಯನ್ನು ಕಂಡು ಮನಕರಗಿದ ಶ್ರೀದೇವಿಯು “ಶ್ರೀನಾಥ, ಈ ಮಗುವಿನ ಕಡೆಗೆ ಗಮನ ಹರಿಸಬಾರದೇ, ತಾವು ಭಕ್ತ ಪರಾಧೀನರೆಂದೆನಿಸಿಕೊಳ್ಳುವುದಿಲ್ಲವೆ. ಆ ಮಗುವನ್ನುಳಿಸಿರಿ. ನಿಮ್ಮ ದಾಸಾನುದಾಸನನ್ನಾಗಿ ಮಾಡಿರಿ” ಎಂದು ಕೇಳಿಕೊಂಡಳು. ಅದೇ ಸಮಯಕ್ಕೆ ಸರಿಯಾಗಿ ವೆಂಕಪ್ಪಯ್ಯನಿಗೆ ಕೊಳಲಿನ ನಾದದೊಂದಿಗೆ ದಿವ್ಯ ಪ್ರಕಾಶದ ದರ್ಶನವಾದಂತೆನಿಸ ತೊಡಗಿತು. “ಮಗೂ ನಾಲಿಗೆಯನ್ನು ಮುಂದೆಮಾಡು ಎಂದು ಹೇಳಿದಾಗ ಆತನು ತನ್ನ ನಾಲಿಗೆಯನ್ನು ಮುಂದೆ ಚಾಚಿದ. ಆ ನಾಲಿಗೆಯ ಮೇಲೆ ಸ್ವತಃ ತಿರುಮಲಾಧೀಶನೇ “ಪ್ರಸನ್ನವೆಂಕಟ” ಎಂಬ ಹೆಸರನ್ನು ಬರೆದ. ಮಗೂ ಈ ಘಳಿಗೆಯಿಂದ ನಿನ್ನ ನಾಲಿಗೆಯಿಂದ ಹೊರಹೊಮ್ಮುವ ಕೃತಿಗಳೆಲ್ಲ “ಪ್ರಸನ್ನ ವೆಂಕಟ, ಹೆಸರಿನಿಂದಲೇ ಹೊರಹೊಮ್ಮುವಂತಾಗಲಿ” ಎಂದು ಅನುಗ್ರಹಮಾಡಿದ. ಮರುಕ್ಷಣ ಎಚ್ಚೆತ್ತು ಮೇಲೆದ್ದು ಕುಳಿತುಕೊಂಡ ವೆಂಕಪ್ಪಯ್ಯನ ಮುಖದಿಂದ “ತಪ್ಪು ನೋಡದೆ ಬಂದೆಯಾ ಎನ್ನ ತಂದೆಯಾ” ಎಂಬ ಪದ್ಯವು ಪ್ರಸನ್ನವೆಂಕಟ ಎಂಬ ಹೆಸರಿನಿಂದ ಹರಿದು ಬರುವಂತಾಯಿತು.

ತಿರುಮಲಾಧೀಶನ ಅನುಗ್ರಹವನ್ನು ಪಡೆದು ಮರಳಿ ಬಾಗಲಕೋಟೆಗೆ ಬಂದ ಪ್ರಸನ್ನರು ಕೆಲವು ದಿನ ಕೃಷ್ಣಾತೀರದ ಗಲಗಲಿ ಎಂಬ ಅಗ್ರಹಾರದ ವಿದ್ವಾಂಸರಲ್ಲಿ ವೇದಾಂತಾಭ್ಯಾಸವನ್ನು ಮುಗಿಸಿದರು.

ಶ್ರೀಮದ್ಭಾಗವತ ಗ್ರಂಥದ ಮೇಲೆ ಅವರು ವಿಶೇಷ ಆಸಕ್ತಿಯನ್ನು ತಾಳಿದರು. ಶ್ರೀಕೃಷ್ಣನ ಬಾಲಲೀಲೆಗಳನ್ನು ನಾನಾ ರೀತಿಯಲ್ಲಿ ಹಾಡಿ ಹೊಗಳಿದಾಗ "ರಂಗ ಕೊಳಲನೂದಿದಾಗ ರಂಗಯ್ಯ ಕೊಳಲನೂದಲು ಮಂಗಳವಾಯಿತೀಧರ" ಎಂಬ ಪದ್ಯವಂತೂ ಶ್ರೀಕೃಷ್ಣನ ರಾಸಲೀಲೆಯ ಸಮಗ್ರ ಚಿತ್ರವನ್ನೇ ಕಣ್ಮುಂದೆ ನಿಲ್ಲುವಂತೆ ಮಾಡುವದು.

ತಿರುಮಲಾಧೀಶನಾದ ಶ್ರೀನಿವಾಸನು ತನ್ನ ಭಕ್ತನನ್ನು ಸ್ವಸ್ಥಾನಕ್ಕೆ ಕಳಿಸಿ ಕೊಡುವಾಗ ಪ್ರಸನ್ನದಾಸರಿಗೊಪ್ಪಿಸಿದ ಗೋಪಾಳಬುಟ್ಟಿ ಶ್ರೀದೇವಿ, ಭೂದೇವಿ ಸಮೇತ ಶ್ರೀನಿವಾಸನ ವಿಗ್ರಹ ಹಾಗೂ ಅವರು ಉಪಯೋಗಿಸುತ್ತಲಿದ್ದ ತಂಬೂರಿ ಇವೇ ಮೊದಲಾದ ಹರಿದಾಸರ ಸಂಪತ್ತಿನ ನಿಧಿಯನ್ನು ಇಂದಿಗೂ ಬಾಗಲಕೋಟೆಯಲ್ಲಿರುವ ಅವರ ವಂಶಜರ ಮನೆಯಲ್ಲಿ ಕಾಣಬಹುದು.

ಧನಾಜಿ ಜಾಧವನ ಮಗನಾದ ಚಂದ್ರಸೇನ ಜಾಧವ ಎಂಬ ಸರದಾರನು ಗ್ರಹಣ ಕಾಲದಲ್ಲಿ ಬಾದಾಮಿಗೆ ಬಂದಾಗ ದಾಸರನ್ನು ಕರೆಸಿಕೊಂಡು ಅವರಿಗಾಗಿ ಎರಡು ಮನೆಗಳನ್ನು ದಾನಮಾಡಿದನಲ್ಲದೆ ಕೆಲವು ಭೂಮಿಗಳನ್ನೂ ಸಹ ಇನಾಮು ಹಾಕಿಕೊಟ್ಟನು. ಬೇಸರವೆನಿಸಿದಾಗ ದಾಸರಾಯರು ಬಾದಾಮಿಗೆ ಬಂದು ವಾಸಮಾಡತೊಡಗಿದರು. ಅವರಿಗೆ ಗೃಹದಾನವನ್ನಿತ್ತ ಚಂದ್ರಸೇನ ಜಾಧವನೂ ಸಹ ಬಾದಾಮಿಯಲ್ಲಿಯೇ ಮರಣ ಹೊಂದಿದನು. ಮುಂದೆ ಎರಡು ತಿಂಗಳಲ್ಲಿ ಪ್ರಸನ್ನವೆಂಕಟ ದಾಸರೂ ಸಹ ಬಾದಾಮಿಯಲ್ಲಿಯೇ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಚಾಲುಕ್ಯರ ರಾಜಧಾನಿ ಎಂದು ಖ್ಯಾತವಾದ ಗುಹಾಂತರ್ದೇವಾಲಯಗಳಿಂದ ಪ್ರವಾಸಿಗರನ್ನಾಕರ್ಷಿಸುವ ಬನಶಂಕರಿ ದೇವಿಯ ದಿವ್ಯಕ್ಷೇತ್ರವೆಂದೆನಿಸಿಕೊಳ್ಳುವ ಬಾದಾಮಿಯಲ್ಲಿರುವ ಹೊಂಡದ ಮೇಲಿರುವ ಪ್ರಸನ್ನವೆಂಕಟ ದಾಸರ ಕಟ್ಟೆಯು ಇಂದಿಗೂ ತಿರುಮಾಲಾಧೀಶನ ಸೇವಕನೊಬ್ಬನು ಚಿರನಿದ್ರೆಯಲ್ಲಿರುವ ಸಂಕೇತವನ್ನು ಸೂಚಿಸುವದುಂಟು.



# ಯಕ್ಷನಗರಿ ತಂಜಾವೂರು

ನಿಸರ್ಗ ರಮಣೀಯ ಕಾವೇರಿ ತೀರದ ತಾಣವೆನಿಸಿದ ಒಂದು ಭೂಭಾಗವನ್ನು ತಂಜಾವೂರು ಪ್ರಾಂತವೆಂದು ಗುರುತಿಸಲಾಗುತ್ತದೆ. ಒಂದು ಕಾಲದಲ್ಲಿ ಫಲವತ್ತಾದ ಈ ನೆಲವನ್ನೆಲ್ಲ ವಿಜಾಪುರದ ಆದಿಲ್‌ಶಾಹಿ ಮನೆತನದವರು ಆಳುತ್ತಿದ್ದರು.

ಲೋಕ ವಿಖ್ಯಾತನಾದ ಛತ್ರಪತಿ ಶಿವಾಜಿಯ ತಂದೆಯಾಗಿದ್ದ ಶಹಾಜಿರಾಜ ಭೋಸಲೆ ಈತನು ವಿಜಾಪುರದ ದಕ್ಷಿಣದ ಸುಬೇದಾರ್ ಎಂಬ ಹೆಸರಿನಿಂದ ಬೆಂಗಳೂರಿನಲ್ಲಿದ್ದುಕೊಂಡು ಈ ಪ್ರದೇಶವನ್ನೆಲ್ಲ ನೋಡಿಕೊಳ್ಳುತ್ತಿದ್ದನು. ಆತನಲ್ಲಿ ರಘುನಾಥ ಹನುಮಂತೆ ಎಂಬ ಚಾಣಾಕ್ಷನಾದ ಮುತ್ಸದ್ದಿ ಆಶ್ರಿತನಾಗಿದ್ದನು. ಆತನ ಮುಜುಂದಾರಿಕೆಯಲ್ಲಿ ಈ ಭಾಗವು ಸುರಕ್ಷಿತವಾಗಿತ್ತು.

ಮೊಗಲ್ ಸಾಮ್ರಾಟನಾಗಿದ್ದ ಔರಂಗಜೇಬನನ್ನು ಕೆಣಕಿದ ಶಿವಾಜಿಗೆ ಒಂದಿಲ್ಲೊಂದು ದಿನ ಆತನನ್ನೆದುರಿಸಬೇಕಾಗಬಹುದೆಂಬ ಹೆದರಿಕೆಯೂ ಇತ್ತು, ಆದುದರಿಂದಲೇ ದಕ್ಷಿಣದ ತುಟ್ಟತುದಿಯಲ್ಲಿರುವ ಜಿಂಜೀ ಕೋಟೆಯನ್ನು ಬಹು ಚಾಣಾಕ್ಷತನದಿಂದ ಆತನು ತನ್ನ ಕೈವಶ ಮಾಡಿಕೊಂಡನು. ಅದೇ ಸಂದರ್ಭದಲ್ಲಿ ಪಿತ್ರಾರ್ಜಿತವಾದ ತಂಜಾವೂರಿನ ಮೇಲೆ ತನ್ನ ಹಕ್ಕೂ ಇದೆ ಎಂಬ ವಾದವನ್ನು ಹೂಡಿದನು. ರಾಜ್ಯವು

ದೊರೆಯದೇ ಹೋದಾಗ ತಂದೆ ಧರಿಸುತ್ತಿದ್ದ ಬಿರುದು ಬಾವಲಿಗಳನ್ನಾದರೂ ಪಡೆಯಬೇಕೆಂದು ವಾದಿಸತೊಡಗಿದನು. ಆದರೆ ಶಹಾಜಿ ರಾಜನ ಆಶ್ರಯದಲ್ಲಿದ್ದ ಮುತ್ಸದ್ದಿಗಳು ಅದನ್ನೂ ಸಹ ಆತನಿಗೆ ದೊರೆಯದಂತೆ ನೋಡಿಕೊಂಡರು.

ಬೆಂಗಳೂರು ಕೈಬಿಟ್ಟು ಹೋದ ನಂತರ ಶಹಾಜಿಯ ಇನ್ನೊಬ್ಬ ಮಗ (ಈತನು ಶಿವಾಜಿಯ ಮಲ ಸೋದರ)ನಾದ ವೆಂಕೋಜಿಯು ಇಸವಿ ೧೬೭೬ರಲ್ಲಿ ತಂಜಾವೂರಿನ ಮೇಲೆ ತನ್ನ ಸಂಪೂರ್ಣ ಪ್ರಭುತ್ವವನ್ನು ಸ್ಥಾಪಿಸಿದನು. ಕೊಲ್ಲಾಪುರ, ಸಾತಾರಾ, ಬರೋಡಾ, ನಾಗಪೂರ, ಅಕ್ಕಲಕೋಟೆ, ಸೊಂಡೂರ ಮೊದಲಾದ ಭಾಗಗಳಲ್ಲಿರುವಂತೆ ತಂಜಾವೂರಿನಲ್ಲಿಯೂ ಸಹ ಮರಾಠರ ರಾಜ್ಯವು ಆರಂಭಗೊಂಡಿತು.

ದಕ್ಷಿಣದಲ್ಲಿ ಬೆಳೆದು ಬಂದ ಈ ಮರಾಠಾ ರಾಜ್ಯವು ಸಂಗೀತ, ಸಾಹಿತ್ಯ ಲಲಿತಕಲೆ, ಪಂಡಿತರ ಪೋಷಣೆ ಇವೇ ಮೊದಲಾದ ಕಾರ್ಯಗಳಿಂದ ದಕ್ಷಿಣದ ಜನಜೀವನದೊಂದಿಗೆ ಒಂದಾಗಿ ಬೆಳೆಯುವಂತಾಯಿತು. ಇಂದು ಆ ರಾಜ್ಯವು ನಶಿಸಿ ಹೋದರೂ ಸಹ ತಂಜಾವೂರಿನ ಸಂಸ್ಕೃತಿಯು ಮಾತ್ರ ಅಖಿಲಭಾರತದಲ್ಲಿ ಅಚ್ಚಳಿಯದೆ ಉಳಿದುಕೊಂಡು ಬರುವಂತಾಗಿರುವುದು. ಈ ರಾಜ್ಯವು ಇಸವಿ ೧೮೦೦ರವರೆಗೂ ಅಬಾಧಿತವಾಗಿ ಬೆಳೆದು ಬರುವಂತಾಯಿತು.

ಶಹಾಜಿ ರಾಜನ ಕಾಲಾವಧಿಯಲ್ಲಿ ಕರ್ನಾಟಕ ಹಾಗೂ ತಮಿಳುನಾಡು ಈ ಪ್ರದೇಶಕ್ಕೆ ಸಾಕಷ್ಟು ಪ್ರಮಾಣದಲ್ಲಿ ಅನೇಕ ಕುಟುಂಬಗಳು ವಲಸೆ ಬಂದು ನೆಲೆಸುವಂತಾದವು. ಅದರಲ್ಲಿ ವಿಶೇಷವಾಗಿ ಬ್ರಾಹ್ಮಣ ವರ್ಗದವರನ್ನು ದೇಶಸ್ಥರು ಎಂದು ಗುರುತಿಸುವ ಸಂಪ್ರದಾಯವು ನಡೆದುಕೊಂಡು ಬಂದಿರುವುದು. ಬ್ರಾಹ್ಮಣ ವರ್ಗದವರಂತೆ ಅನೇಕ ಸರದಾರರು, ಸಾಮಂತರು, ಕಲಾವಿದರು, ಇವರೇ ಮೊದಲಾದವರ ಆಗಮನವಾಯಿತು. ಇದರಿಂದಾಗಿ ಕರ್ನಾಟಕ ಅಥವಾ ಮೈಸೂರಿನೊಂದಿಗೆ ತಂಜಾವೂರಿನ ಸಂಬಂಧವು ವಿಶೇಷವಾಗಿ ಇಂದಿಗೂ ಬೆಳೆದುಕೊಂಡು ಬರುವಂತಾದುದು ವಿಶೇಷದ ಸಂಗತಿಯಾಗಿರುವುದು.

ರಾಜ್ಯದ ಮುಖ್ಯ ಸ್ಥಳವೆನಿಸಿದ ತಂಜಾವೂರಿನಲ್ಲಿ ಬಹು ಸುಂದರವಾದ, ಅಷ್ಟೇ ಆಶ್ಚರ್ಯಕರವಾದ ರೀತಿಯಲ್ಲಿ ನಿರ್ಮಿತವಾದ ಬೃಹದೇಶ್ವರ ದೇವಾಲಯವಿರುವುದು. ಈ ದೇವಾಲಯದಲ್ಲಿ ತಂಜಾವೂರನ್ನಾಳಿದ ಅರಸು ಮನೆತನವನ್ನು ಕುರಿತು ಬಿಡಿಸಲಾದ ಬೃಹದಾಕಾರದ ಲೇಖನವಿರುವುದು. ಈ ಲೇಖನವನ್ನು ಚೆನ್ನಾಗಿ ಅಭ್ಯಾಸ ಮಾಡಿದಲ್ಲಿ ಅಂದಿನ ಕಾಲದ ರಾಜಕೀಯ ರೀತಿ ನೀತಿಗಳು ರಾಜ್ಯಕ್ಕಾಗಿ ಸೇವೆ ಸಲ್ಲಿಸಿದ ಸರದಾರರ ಹೆಸರು, ರಾಜ್ಯದ ಕೀರ್ತಿ ಬೆಳೆಸಲು ಶ್ರಮಿಸಿದ ಅಧಿಕಾರ ವರ್ಗದವರ ನಾಮಧೇಯಗಳು, ಹಾಗೂ ರಾಮದಾಸ ಸಂಪ್ರದಾಯವನ್ನು ಬೆಳೆಸಲು ಕಾರಣರಾದ ರಾಘವಸ್ವಾಮಿ, ಭೀಮಸ್ವಾಮಿ, ಮೌನೀಸ್ವಾಮಿ, ಮೇರುಸ್ವಾಮಿ, ಮಾಧವಸ್ವಾಮಿ, ಸೇತು ಮಾಧವಸ್ವಾಮಿ, ಮೊದಲಾದವರ ಹೆಸರುಗಳನ್ನೂ ಸಹ ನಾವು ಈ ಲೇಖನದಲ್ಲಿ ಕಾಣಬಹುದು.

ಈ ರಾಜ್ಯದ ಸೇವೆಯಲ್ಲಿದ್ದ ಸರದಾರರಲ್ಲಿ ಘಾಟಿಗೆ, ಗೌಡೇವರ, ಶೇಡಗೆ, ಜಗತಾಪ, ಮಹಡೀಕ, ಸೂರ್ಯವಂಶಿ, ಮೋಹಿತೆ, ಮೊದಲಾದವರ ಹೆಸರುಗಳನ್ನೂ ಕಾಣಬಹುದಾಗಿದೆ. ಈ ರಾಜ್ಯದಲ್ಲಿ ಪ್ರಮುಖ ಅಧಿಕಾರಿಗಳಾಗಿ ನಾರೋಪಂತ, ಡಬೀರ್, ಭಗವಂತರಾಯ, ಆತನ ಮೊಮ್ಮಗ್ರ ವಿಠ್ಠಲ ಅಮಾತ್ಯ, ಬಾಬೂರಾಯ ಇವರ ಹೆಸರುಗಳಿವೆ.

ತಂಜಾವೂರಿನ ಅರಸು ಮನೆತನದಲ್ಲಿ ವೆಂಕೋಜಿಯಿಂದ ಆರಂಭ ಮಾಡಿಕೊಂಡು ತುಳಜೋಜಿ ಅಥವಾ ತುಳಜೇಂದ್ರ ರಾಜನ ಕಾಲಾವಧಿಯವರೆಗೆ ಅಂದರೆ ಇಸವಿ ೧೬೭೫ರಿಂದ ೧೭೬೫ರ ಕಾಲಾವಧಿಯವರೆಗೆ ಗಂಗಾಧರ ಬಾಬಾಜಿ ಹಾಗೂ ಆತನ ಮಗನಾದ ತ್ರ್ಯಂಬಕರಾಯ, ಮೊಮ್ಮಗನಾದ ಆನಂದರಾಯ ಮೊದಲಾದವರು ಈ ಅರಸು ಮನೆತನಕ್ಕೆ ಆಗಾಧವಾದ ಸೇವೆ ಸಲ್ಲಿಸಿದರೆಂಬುದು ಶಿಲಾ ಲೇಖನದ ಅಭ್ಯಾಸದಿಂದ ತಿಳಿದು ಬರುವುದು. ರಾಜ್ಯದ ವ್ಯವಸ್ಥೆಯನ್ನು ಕುರಿತಾಗಿಯೂ ಕೆಲವು ಮಾಹಿತಿಗಳು ಕಾಣಸಿಗುವುವು. ಈ ಭಾಗದ

ಪ್ರದೇಶಗಳಿಗೆಲ್ಲಾ ರಾಜನೇ ಪರದೈವ ಎಂಬ ಸಂಬೋಧನೆಗಳಿದ್ದುದು ಕಾಣಸಿಗುವುದು. ಆತನ ಆಶ್ರಿತರಾಗಿ ಅಮಾತ್ಯ ಪದವಿಯಲ್ಲಿ ವಂಶ ಪಾರಂಪರ್ಯ ಸೇವೆ ಮಾಡಿದವರೂ ಉಂಟು. ಇವರು ಕೆಲವು ಸಂದರ್ಭದಲ್ಲಿ ಆಪ್ತ ಸಲಹೆಗಾರರಾಗಿಯೂ ಮತ್ತೆ ಕೆಲವು ವೇಳೆ ಖಡ್ಗಧಾರಿಗಳಾಗಿಯೂ, ಸೇನಾ ಪ್ರಮುಖರಾಗಿಯೂ ಸೇವೆಗೈದಿದ್ದಾರೆ. ಸೇನಾಧಿಕಾರಿಯನ್ನು ದಳವಿ ಎಂದು ಅಥವಾ ದಳಪತಿ ಎಂದು ಸಂಬೋಧಿಸಲಾಗಿದೆ. ಗಂಗಾಧರ ಪಂತರ ಮೊಮ್ಮಗನಂತೂ ಸಾಮಾನ್ಯ ಸೇವೆಯಿಂದ ಅತ್ಯುನ್ನತವಾದ ಪದವಿಯನ್ನು ತಲುಪಿದ ವಿಚಾರವಿದೆ. ಈತನು ರಾಮನಾಡಿನಲ್ಲಿ ನಡೆದ ಯುದ್ಧದಲ್ಲಿ ತನ್ನ ಅತುಲಪರಾಕ್ರಮ ತೋರಿಸಿ ಮೆರೆದಿದ್ದಾನೆ. ಧರ್ಮಾಧಿಕಾರಿಯಾಗಿ ಕೆಲಸವನ್ನಾರಂಭಿಸಿದ ಈತನು ಪಂತ ಪ್ರಧಾನ ಪದವಿಯನ್ನು ಹೊಂದಿದ್ದಾನೆ.

ದಕ್ಷಿಣಾಪಥವನ್ನೆಲ್ಲ ಪಾದಾಕ್ರಾಂತ ಮಾಡಿಕೊಳ್ಳುವ ಹಂಬಲದಿಂದ ದಕ್ಷಿಣಕ್ಕಿಳಿದ ಔರಂಗಜೇಬನೊಂದಿಗೆ ಸಂಧಿ ಮಾಡಿಕೊಳ್ಳಲು ವೆಂಕೋಜಿಯ ದಾಸೀಪುತ್ರನಾದ ರಾಯಭಾನು ಸಿಂಗ ಎಂಬಾತನು ಪುಣೆಯಿಂದ ಬಂದು ಬಾದಶಹನೊಂದಿಗೆ ಭೇಟಿಯಾಗಿ ಹೋದನೆಂಬುದು ಈ ಶಿಲಾಲೇಖನದಿಂದ ತಿಳಿದು ಬರುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಮೇರು ಕೃತಿಗಳನ್ನು ರಚಿಸುವುದು, ಸಂಗೀತ ಶಾಸ್ತ್ರದಲ್ಲಿ, ನಾಟ್ಯಶಾಸ್ತ್ರದಲ್ಲಿ, ಅಶ್ವಶಾಸ್ತ್ರ, ಗಜಶಾಸ್ತ್ರ, ಆಯುರ್ವೇದ ಮೊದಲಾದ ವಿಷಯಗಳನ್ನು ಕುರಿತು ಅನೇಕ ಪಂಡಿತರಿಂದ ಗ್ರಂಥಗಳನ್ನು ರಚಿಸುವುದರಲ್ಲಿಯೂ ಹಾಗೂ ಅಗ್ರಹಾರಗಳ ನಿರ್ಮಾಣ, ಅನ್ನಸತ್ರಗಳನ್ನು ನಡೆಸುವುದು, ಪಂಡಿತರಿಗೆ ಆಶ್ರಯ ಲಭಿಸುವಂತೆ ನೋಡಿಕೊಳ್ಳುವುದು - ಇವೇ ಮೊದಲಾದ ಕಾರ್ಯಕ್ರಮಗಳಲ್ಲಿ ಗಂಗಾಧರ ಪಂತ, ತ್ರಂಬಕಪಂತ ಹಾಗೂ ಆನಂದರಾಯ ಇವರ ಪಾತ್ರವು ವಿಶೇಷವಾಗಿತ್ತೆಂಬುದು ತಿಳಿದು ಬರುತ್ತದೆ. ಸ್ವತಃ ಅರಸರೇ ಸಂಗೀತ ಶಾಸ್ತ್ರದಲ್ಲಿ, ಸಂಸ್ಕೃತಾಭ್ಯಾಸದಲ್ಲಿ ವಿಶೇಷ ಪರಿಣತರಾಗಿದ್ದರು. ಇವರ ಕಾಲಾವಧಿಯಲ್ಲಿ ರಘುನಾಥ

ಹಣಮಂತ್ರೆ, ಘುಂಡಿರಾಜ ವ್ಯಾಸ, ಜಗನ್ನಾಥ ಬಾಲಕೃಷ್ಣ ಉಗಾವಕರ ಹಾಗೂ ಭಾಸ್ಕರವಿಲಾಸ ಎಂಬ ಗ್ರಂಥವನ್ನು ರಚಿಸಿದ ವಿಠ್ಠಲ ಅಮಾತ್ಯ ಇವರಿಂದಲೂ ಅನೇಕ ಉದ್ಗ್ರಂಥಗಳು ರಚನೆಗೊಂಡಿವೆ. ರಾಜಾ ತುಳಜೇಂದ್ರನ ಕಾಲದಲ್ಲಿ ಡಬೀರ ನಾರೋಪಂತರ ಹೆಸರು ವಿಶೇಷ ರೀತಿಯಲ್ಲಿ ಕಾಣಬರುತ್ತದೆ. ಡಬೀರ ಈ ಶಬ್ದವು ಫಾರಸೀ ಭಾಷೆಯಿಂದ ಬಂದುದಾಗಿದೆ. ಇವರು ಲೇಖನ ಸಾಹಿತ್ಯವನ್ನು ಸಾಧಿಸಿದವರು. ರಾಜ್ಯದ ಲೇಖನ ವ್ಯವಹಾರಗಳಿಗೆಲ್ಲ ಪ್ರಥಮ ಸ್ಥಾನವನ್ನುಹೊಂದಿದವರು. ಧರ್ಮಾಧಿಕಾರಿಯ ಹುದ್ದೆಯು ಕೋಶಾಧಿಕಾರಿಗೆ ಸಮಾನವಾದುದೆಂದು ಭಾವಿಸುತ್ತಿದ್ದರು. ಇಸವಿ ೧೭೨೮ರಿಂದ ೧೭೩೬ರ ಕಾಲಾವಧಿಯಲ್ಲಿ ಘನಶ್ಯಾಮ ಪಂಡಿತನು ರಾಜನ ಖಾಸಗೀ ಕೋಶಾಧಿಕಾರಿಯಾಗಿ ಸೇವೆ ಸಲ್ಲಿಸಿದನು. ಯಾರು ರಾಜನ ಅಂಗರಕ್ಷಕ ದಳದ ಪ್ರಮುಖರೋ ಅಂಥಹವರನ್ನು ಸರಖೇಲ್ ಎಂದು ಕರೆಯುತ್ತಿದ್ದರು. ಅತ್ಯಂತ ವಿಶ್ವಾಸಪಾತ್ರರಾದವರಿಗೆ ಮಾತ್ರ ಈ ಪದವಿಯು ಲಭ್ಯವಾಗುತ್ತಿತ್ತು. ಅಣ್ಣಪ್ಪ ಸೇಗಡೆ ಎಂಬ ಸರಖೇಲ್‌ನು ಕೋಮಲಚೇರಿ ಎಂಬ ಸ್ಥಳದಲ್ಲಿ ನಡೆದ ಯುದ್ಧದಲ್ಲಿ ತನ್ನ ಪರಾಕ್ರಮದಿಂದ ರಾಜನನ್ನು ರಕ್ಷಿಸಿದನೆಂದು ಹೇಳಲಾಗಿರುವುದು.

ಕಿಲ್ಲೇದಾರ್ ಹಾಗೂ ಫೌಜದಾರ ಈ ಹುದ್ದೆಗಳಲ್ಲಿ ಘಾಟಗೆ ಮನೆತನದವರು ಕೆಲಸ ಮಾಡುತ್ತಿದ್ದರು. ಕೆಲ ಸಮಯದವರೆಗೆ ಸಯ್ಯದ ಎಂಬುವವನೂ ಸಹ ಕಿಲ್ಲಾಧಿಕಾರಿಯಾಗಿದ್ದನು. ಇಸವಿ ೧೭೮೦ರಲ್ಲಿ ಆಂಗ್ಲರು ತಂಜಾವೂರ ಜಿಲ್ಲೆ ಹಾಗೂ ಅರಮನೆಗಳನ್ನು ತಮ್ಮ ಮತ್ತೋಟಿಗೆ ತೆಗೆದುಕೊಂಡರು.

ಈ ರಾಜ್ಯವು ಸುಮಾರು ಆರೇಳು ನೂರು ಚದರ ಮೈಲು ಹರಡಿಕೊಂಡಿತ್ತು. ಇದರಲ್ಲಿ ಪಟ್ಟುಕೊಟ್ಟಾಯಿ, ಮನ್ನಾರಗುಡಿ, ಮಾಯಾವರಮ್, ಕುಂಭಕೋಣಮ್, ತಿರುವಾಡಿ ಎಂಬ ಭಾಗಗಳಿದ್ದವು. ಈ ಭಾಗದ ಮೇಲ್ವಿಚಾರಕನನ್ನು ಸುಬೇದಾರ ಎಂದೆನ್ನುತ್ತಿದ್ದರು. ಇವು ಸಮ್ಮತ್ತಿಯ ತಾಲ್ಲೂಕು, ಮಹಲ್, ಪೇಠಾಗಳಷ್ಟಿದ್ದವು. ಈ ಭಾಗದಲ್ಲಿ

ಕಂದಾಯವನ್ನು ವಸೂಲಿ ಮಾಡುವವರಿಗೆ ಅಮೀನ್ ಎಂದು ಕರೆಯುವ ಸಂಪ್ರದಾಯವಿತ್ತು. ರಾಜ್ಯದ ಆದಾಯವು ಕೃಷಿಯನ್ನೇ ಪ್ರಧಾನವಾಗಿ ನಂಬಿಕೊಂಡಿತ್ತು. ಜಮಾಬಂದಿಯ ವ್ಯವಸ್ಥಾಪಕರನ್ನು ದಿವಾಣರೆಂದು ಗುರುತಿಸುತ್ತಿದ್ದರು.

ಕನ್ನಡ, ತಮಿಳು, ತೆಲಗು, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಅನೇಕ ಗ್ರಂಥಗಳ ರಚನೆಗಳಾಗಿರುವುವು. ಸ್ವತಃ ರಾಜನಿಂದಲೇ ಉರ್ದು ಹಾಗೂ ತಮಿಳು ಭಾಷೆಗಳಲ್ಲಿ ನಾಟಕಗಳು ರಚನೆಯಾಗಿವೆ. ಈ ಎರಡೂ ಭಾಷೆಗಳಲ್ಲಿ ಕೃತಿರಚನೆ ಮಾಡಿರುವುದರಿಂದ ಈ ರಾಜರು ನಾಟಕಗಳ ರಚನೆಯಲ್ಲಿ ಅದ್ಯ ಪ್ರವೃತ್ತರೆನಿಸಿ ಕೊಂಡಿದ್ದಾರೆ. ಇಷ್ಟೇ ಅಲ್ಲದೆ ಸ್ವತಃ ಅವರು ಸಂಗೀತ ಶಾಸ್ತ್ರದಲ್ಲಿ ಹಾಗೂ ಗೀತ ವಾದ್ಯಗಳಲ್ಲಿ ಮಹಾ ಪರಿಣತರೆನಿಸಿಕೊಳ್ಳುತ್ತಿದ್ದರು. ರಾಜಾ ಸರ್ಫೋಜಿ ಹಾಗೂ ಪ್ರತಾಪ ಸಿಂಹರಿಂದ ಅನೇಕ ಕೃತಿ ರಚನೆಗಳಾಗಿದ್ದು ಇಂದಿಗೂ ಆ ಕೃತಿಗಳು ಪ್ರಸಾರದಲ್ಲಿವೆ.

ದಕ್ಷಿಣ ಭಾರತದಲ್ಲಿ ತಂಜಾವೂರು ಸುಸಂಸ್ಕೃತ ರಾಜ್ಯವಾಗಿತ್ತು. ಅನೇಕ ಪಂಡಿತರ ಆಶ್ರಯಸ್ಥಾನವೆಂದೆನಿಸಿಕೊಂಡಿತ್ತು. ಇಲ್ಲಿಯ ರಾಜರಿಂದ ಸಂಗ್ರಹಿತವಾದ ಗ್ರಂಥಗಳು ಜಗತ್ಪ್ರಸಿದ್ಧವಾದ ಸರಸ್ವತಿ ಗ್ರಂಥಾಲಯದಲ್ಲಿ ಇಂದಿಗೂ ಕಾಣಬರುವಂತಾಗಿರುವುವು. ಇಸವಿ ೧೮೫೫ರಲ್ಲಿ ಇದು ಸಂಪೂರ್ಣವಾಗಿ ತನ್ನ ಅಧಿಕಾರವನ್ನು ಕಳೆದುಕೊಂಡಿತು. ಹಿಂದಿನವರು ಮಾಡಿದ ಸೇವೆಯಿಂದ ಇಂದಿಗೂ ತಂಜಾವೂರು ಪ್ರವಾಸಿ ಅಭ್ಯಾಸಿಗರಿಗೆ ಯಕ್ಷನಗರಿಯಾಗಿಯೇ ತೋರಿಬರುವುದು.



# ಮಂಚಾಲಿ-ಮಂತ್ರಾಲಯ

ಮರೆಯಲಾಗದ ಮಹಾಸಾಮ್ರಾಜ್ಯವೆನಿಸಿದ ವಿಜಯನಗರದ ಅರಸರ ಕಾಲದಲ್ಲಿ ನಮ್ಮ ನಾಡಿನಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲಿದ್ದ ಒಂದು ಗ್ರಾಮವನ್ನು "ಮಂಚಾಲಿ" ಎಂಬ ಹೆಸರಿನಿಂದ ಕರೆಯುತ್ತಿದ್ದರು. ಗ್ರಾಮದ ಹೊರಭಾಗದಲ್ಲಿ ಹರಿಯುತ್ತಿದ್ದ ನದಿಯ ದಂಡೆಯ ಮೇಲೆ ಪುಟ್ಟದಾದ ಒಂದು ಗುಡಿಯು ಕಾಣಬರುತ್ತಿತ್ತು. ಅದು ಗ್ರಾಮದೇವತೆಯಾದ ಮಂಚಾಲಮ್ಮನ ದೇವಾಲಯವಾಗಿತ್ತು. ಇವಳು ಗ್ರಾಮರಕ್ಷಕಳು. ಆದುದರಿಂದ ಗ್ರಾಮನಿವಾಸಿಗಳು ಈ ದೇವಿಯನ್ನು ಮಾತೃಸ್ವರೂಪದಲ್ಲಿ ಪೂಜೆಗೈಯುತ್ತಾ ಬಂದಿದ್ದರು. ಶಕ್ತಿ ಸ್ವರೂಪಿಣಿಯಾದ ಈ ಮಂಚಾಲಮ್ಮನ ಹೆಸರನ್ನೇ ಅವರು ತಮ್ಮ ಗ್ರಾಮಕ್ಕಿಟ್ಟು ಕೊಂಡುದರಿಂದ ಆ ಗ್ರಾಮವನ್ನು ಮಂಚಾಲಿ ಎಂಬ ಹೆಸರಿನಿಂದ ಕರೆಯುವುದು ರೂಢಿಯಲ್ಲಿ ಬಂದಿತ್ತು, ನಾಡಿನುದ್ದಕ್ಕೂ ಹರಿದುಬರುತ್ತಿರುವ ತುಂಗಭದ್ರಾ ನದಿಯ ದಂಡೆಯ ಮೇಲೆ ಇಂಥ ಶಕ್ತಿ ದೇವತೆಗಳು ಸಾಕಷ್ಟು ಪ್ರಮಾಣದಲ್ಲಿ ಪೂಜೆಗೊಳ್ಳುತ್ತಿರುವುದನ್ನು ಅಭ್ಯಾಸದಿಂದ ತಿಳಿದುಕೊಳ್ಳಬಹುದು, ಉದಾಹರಣೆಗಾಗಿ ಹೊಸೂರಮ್ಮ, ಹುಲಿಗೆಮ್ಮ ಈ ದೇವತೆಯರ ಹೆಸರಿನಿಂದ ಎಡಬಲ ದಂಡೆಯ ಮೇಲೆ ಗ್ರಾಮಗಳಿದ್ದು, ಅವುಗಳನ್ನು ಹುಲಗಿ, ಹೊಸೂರು ಎಂಬ ಹೆಸರಿನಿಂದ ಕರೆಯುತ್ತಿರುವುದನ್ನು ಇಲ್ಲಿ ನಾವು ಗಮನಿಸಬಹುದು.

ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಮಂಚಾಲಿ ಗ್ರಾಮವಿರುವ ಭಾಗವನ್ನು ರಾಯರ ಸೀಮೆ ಎಂದು ಗುರುತಿಸುವ ಸಂಪ್ರದಾಯವಿತ್ತು. ಈ ಮಾತನ್ನೇ ನಮ್ಮ ನಾಡನ್ನಾಳಿದ ವಿದೇಶೀಯರು ರಾಯಲ್‌ಸೀಮಾ ಎಂಬ ಹೆಸರಿನಿಂದ ಕರೆಯುವಂತೆ ಮಾಡಿದರು. ಇಂದಿಗೂ ಈ ಪದ್ಧತಿ ಇದೆ. ಆದರೆ ಇಂದು ನಮ್ಮನ್ನಾಳುತ್ತಿದ್ದ ಬ್ರಿಟಿಷರು ಭಾರತದಿಂದ ತೊಲಗಿ ಹೋಗಿದ್ದಾರೆ. ವಿಜಯನಗರದ ಅರಸರು ಹೇಳಹೆಸರಿಲ್ಲದಂತಾಗಿದ್ದಾರೆ. ಹೀಗಿದ್ದರೂ ಸಹ ಮಹಾನುಭಾವರೊಬ್ಬರ ತಪಸ್ಸಿನ ಫಲವಾಗಿ ಇಂದು ಈ ಭಾಗವನ್ನು ಭಕ್ತರೆಲ್ಲ ಗುರುರಾಯರ ಸೀಮೆ ಎಂದು ಭಾವಿಸುತ್ತಲಿರುವದು ವಿಶೇಷದ ಸಂಗತಿಯಾಗಿದೆ.

ವಿಜಯನಗರ ಸಾಮ್ರಾಜ್ಯವು ಸಂಪೂರ್ಣ ನಾಶವಾಗಿ ಹೋದಮೇಲೆ ಈ ಭಾಗದಲ್ಲಿ ಬಹುಮನಿ ರಾಜ್ಯವು ಹುಟ್ಟಿಕೊಂಡಿತು. ಕಾಲಾಂತರದಲ್ಲಿ ಅದು ಐದು ಭಾಗಗಳಾಗಿ ವಿಂಗಡಿಸಲ್ಪಟ್ಟಿತು, ಹೀಗೆ ವಿಂಗಡಿಸಲ್ಪಟ್ಟ ಭಾಗದಲ್ಲಿ ಆಲೂರು, ಆದವಾನಿ, ರಾಯದುರ್ಗ, ಬಳ್ಳಾರಿ, ಕೊಪ್ಪಳ, ಕರ್ನೂಲ್, ರಾಯಚೂರು ಈ ಎಲ್ಲಾ ಭಾಗಗಳು ವಿಜಾಪುರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಆದಿಲ್ ಶಾಹಿ ಸಾಮ್ರಾಜ್ಯದ ಅಧಿಪತ್ಯಕ್ಕೆ ಒಳಪಟ್ಟಿದ್ದವು. ಸುಪ್ರಸಿದ್ಧ ತೀರ್ಥಕ್ಷೇತ್ರವೆನಿಸಿದ ತಿರುಪತಿ ಕ್ಷೇತ್ರವಾದರೂ ಸಹ ಆದಿಲ್‌ಶಾಹಿ ರಾಜ್ಯಕ್ಕೆ ಸೇರಿದುದಾಗಿತ್ತು. ಈ ಮನೆತನದ ಇಬ್ರಾಹಿಂ ಆದಿಲ್‌ಶಾಹನ ಕಾಲದಲ್ಲಿ ಇಬ್ರಾಹಿಂಪುರ ಎಂಬ ಹೆಸರಿನಿಂದ ಕಟ್ಟಲ್ಪಟ್ಟ ಅಂದಿನ ಹೊಸ ಬಡಾವಣೆಯಲ್ಲಿ ಶ್ರೀ ವೆಂಕಟೇಶನ ದೇವಾಲಯವು ಕಟ್ಟಲ್ಪಟ್ಟಿತೆಂಬ ಮಾತನ್ನು ಇತಿಹಾಸದ ಅಭ್ಯಾಸದಿಂದ ನಾವು ತಿಳಿದುಕೊಳ್ಳಬಹುದು.

ಆದವಾನಿಯಲ್ಲಿದ್ದ ಸಿದ್ಧಿ ಮಸೂದ್‌ಖಾನ್, ಕರ್ನೂಲಿನಲ್ಲಿದ್ದ ಸಿದ್ಧಿ ಜೋಹಾರ್ ಇವರಿಬ್ಬರೂ ಆದಿಲ್‌ಶಾಹಿ ಸಾಮ್ರಾಜ್ಯದ ನಾಮಾಂಕಿತ ಸರದಾರರೆಂದು ಗುರುತಿಸಲ್ಪಡುತ್ತಿದ್ದರು. ರಾಘವೇಂದ್ರ ಗುರು ಸಾರ್ವಭೌಮರು ತಮ್ಮ ಜೀವಿತಾವಧಿಯಲ್ಲಿ ರಾಜಧಾನಿಯಾದ ವಿಜಾಪುರಕ್ಕೆ ಭೇಟಿಯನ್ನಿತ್ತಿದ್ದರೆಂದೂ ಆಗ ಬಾದಶಹನು ಗುರುಗಳಿಗೆ

ಅತ್ಯಂತ ವೈಭವೋಪೇತವಾದ ಸತ್ಕಾರವನ್ನು ಮಾಡಿ ಬಾಗಿಲುಕೋಟೆಯ ಭಾಗದಲ್ಲಿ ಅನೇಕ ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟನೆಂದೂ ತಿಳಿದುಬರುತ್ತದೆ.

ಮೊಗಲ್ ಸಾಮ್ರಾಟನಾದ ಔರಂಗಜೇಬನ ಕಾಲಾವಧಿಯಲ್ಲಿ ದಕ್ಷಿಣದಲ್ಲಿದ್ದ ಆದಿಲ್‌ಶಾಹಿ ಕುತೂಬ್‌ಶಾಹಿ ರಾಜ್ಯಗಳು ನಶಿಸಿಹೋದವು. ಈ ವಿಪ್ಲವದಿಂದಾಗಿ ಕೆಲವು ಕಾಲ ಮಂಚಾಲಿ ಗ್ರಾಮವು ನಿಜಾಮರ ಅಧೀನದಲ್ಲೂ ಅನಂತರ ಗುತ್ತಿಯ ಮುರಾರಿರಾಯನ ಅಧೀನದಲ್ಲಿಯೂ ಅನಂತರ ಹೈದರ ಹಾಗೂ ಟೀಪು ಇವರ ಅಧೀನದಲ್ಲಿದ್ದುದು ತಿಳಿದುಬರುವುದು. ಭಾರತ ರಾಷ್ಟ್ರವು ಸ್ವತಂತ್ರವಾದ ನಂತರ ಇಂದು ಈ ಗ್ರಾಮವು ಆಂಧ್ರ ರಾಜ್ಯದ ಗಡಿಭಾಗಕ್ಕೆ ಸೇರಿದ ಸುಪ್ರಸಿದ್ಧವಾದ ತೀರ್ಥಕ್ಷೇತ್ರವೆಂದು ಗುರುತಿಸಲ್ಪಡುತ್ತಿದೆ. ಗುರುಸಾರ್ವಭೌಮರ ಮಹಿಮಾತಿಶಯಗ ಳಿಂದಾಗಿ ಈ ಪುಟ್ಟಗ್ರಾಮವು ಸೂಜಿಗಲ್ಲಿನಂತೆ ಎಲ್ಲ ಭಕ್ತರನ್ನು ತನ್ನೆಡೆಗೆ ಆಕರ್ಷಿಸುತ್ತಲಿರುವುದು ಬಹು ಮನೋಜ್ಞವಾಗಿ ಕಾಣಬರುತ್ತಿದೆ.

ಮಹಾನುಭಾವರಾದ ರಾಘವೇಂದ್ರ ತೀರ್ಥರ ಪ್ರಥಮಾವತಾರ ವೆಂದು ಗುರುತಿಸಲ್ಪಡುವ ಪ್ರಹ್ಲಾದ ಮಹಾರಾಜನ ಕಾಲಾವಧಿಯಲ್ಲಿ ಈ ಪ್ರವಾಹದ ದಂಡೆಯ ಮೇಲೆ ಅನೇಕ ಯಜ್ಞಯಾಗಾದಿ ಪುಣ್ಯಕರ್ಮಗಳು ನಡೆದುಹೋದುದನ್ನು ಸ್ಮರಿಸಿಕೊಂಡ ರಾಯರು ತಮ್ಮ ಯತ್ಯಾಶ್ರಮದ ಕೊನೆಗಾಲದ ಕುರುಹು ಸದಾ ಕಾಲವೂ ಈ ಸ್ಥಳದಲ್ಲುಳಿಯಬೇಕು ಎಂದು ಭಾವಿಸಿ ಆದವಾನಿಯ ನವಾಬರಿಂದ ತಮ್ಮ ಶಿಷ್ಯನಾದ ವೆಂಕಣ್ಣನ ಮುಖಾಂತರ ಈ ಸ್ಥಳವನ್ನು ದಾನವಾಗಿ ಪಡೆದು ಕೊಂಡರೆಂಬ ಮಾತು ಗುರುರಾಜರ ಜೀವನ ಚರಿತ್ರೆಯನ್ನು ಅಭ್ಯಾಸಮಾಡಿದಾಗ ತಿಳಿದುಬರುತ್ತದೆ.

ರಾಘವೇಂದ್ರ ತೀರ್ಥರು ತಮ್ಮ ಜೀವಿತಾವಧಿಯಲ್ಲಿ ಆಚಾರ್ಯ ಮಧ್ವರ ಗ್ರಂಥಗಳಿಗೆ ಸುಲಲಿತವೂ ಸುಲಭವೂ ಆದ ಶೈಲಿಯಲ್ಲಿ ಸರ್ವರಿಗೂ ಅರ್ಥವಾಗುವಂತೆ ಟೀಕಾಗ್ರಂಥಗಳನ್ನು ರಚಿಸಿದ್ದಾರೆ,

ಅಲ್ಲದೆ ಮಹಾಮಹಿಮರಾದ ಜಯತೀರ್ಥರಿಂದ ರಚಿತವಾದ "ಸುಧಾ" ಗ್ರಂಥಕ್ಕೆ "ಪರಿಮಳ" ಎಂಬ ಹೆಸರಿನ ಟಿಪ್ಪಣಿಯನ್ನು ಮಾಡಿದ್ದಾರೆ. ಇದರಿಂದಾಗಿ ಗುರುರಾಜರನ್ನು ಪರಿಮಳಾಚಾರ್ಯ ಎಂಬ ಹೆಸರಿನಿಂದಲೂ ಸಹ ಕರೆಯುವುದು ವಾಡಿಕೆಯಲ್ಲಿದೆ. ಅವರ ಈ ಕಾರ್ಯವು ದ್ವೈತ ಸಿದ್ಧಾಂತಕ್ಕೆ ಮಾಡಿದ ಬಹು ದೊಡ್ಡ ಉಪಕಾರವೆಂದು ಜಿಜ್ಞಾಸುಗಳು ಭಾವಿಸುತ್ತಾರೆ.

ಕೃಷ್ಣಾ ಹಾಗೂ ತುಂಗಭದ್ರಾ ನದಿಗಳ ಮಧ್ಯಭಾಗವನ್ನು (ದೋ-ಅಬ್) ಎರಡು ದಂಡೆಗಳ ಮಧ್ಯಪ್ರದೇಶ ಎಂದು ಕರೆಯುತ್ತ ಬಂದಿದ್ದಾರೆ. ಈ ಪ್ರದೇಶದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಶ್ರೀಪದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರೇ ಮೊದಲಾದ ದಾಸಶ್ರೇಷ್ಠರಿಂದ ಹಾಕಿಕೊಡಲ್ಪಟ್ಟ ರಾಜಮಾರ್ಗವನ್ನನುಸರಿಸಿ ಮುಂದೆ ಈ ನಡುನಾಡನಿನಲ್ಲಿ ಹುಟ್ಟಿದ ಮಹಿಪತಿರಾಯರು, ಪ್ರಸನ್ನ ವೆಂಕಟದಾಸರು, ವಿಜಯ ರಾಯರು, ಗೋಪಾಲದಾಸರು, ಜಗನ್ನಾಥದಾಸರೇ ಮೊದಲಾದ ದಾಸವರೇಣ್ಯರು ಆ ದಾಸಸಾಹಿತ್ಯದ ಪರಂಪರೆಯ ಪ್ರವಾಹವನ್ನು ರಕ್ಷಿಸಿಕೊಂಡು, ಪೋಷಿಸಿಕೊಂಡು ಬಂದರು. ದಾಸ ಪಂಥೀಯರಿಗೆಲ್ಲಾ ಮಂತ್ರಾಲಯ ಹಾಗೂ ಮಳಖೇಡ್ ಈ ಎರಡೂ ಸ್ಥಳಗಳು ಕಾಶಿ, ರಾಮೇಶ್ವರದಂತೆ ಪರಮಪವಿತ್ರ ತಾಣಗಳಾಗಿ ಕಂಡವು. ಆದುದರಿಂದಲೇ ಪ್ರತಿಯೊಬ್ಬರೂ ತಪ್ಪದೇ ಈ ಎರಡೂ ಸ್ಥಳಗಳಿಗೆ ಭೇಟಿಯನ್ನೀಯುತ್ತ ಬಂದರು. ತಮ್ಮ ಆರಾಧ್ಯ ಗುರುಗಳಾದ ಈ ಮಹನೀಯರಿಬ್ಬರ ಗುಣಾತಿಶಯಗಳನ್ನು ಕುರಿತು ಭಕ್ತಿಯಿಂದ ಹಾಡಿ ಕೊಂಡಾಡಿ ಕುಣಿದಾಡತೊಡಗಿದರು. ಅಂದು ಆ ಮಹಾನುಭಾವರು ಹಾಕಿಕೊಟ್ಟ ಈ ಕ್ರಮದಿಂದಾಗಿ ಅವರಿಂದ ರಚಿತವಾದ ಪದಪದ್ಯಗಳನ್ನು ಹಾಡುತ್ತ ವೈಷ್ಣವ ಭಕ್ತರೆಲ್ಲ ಈ ಸ್ಥಳಗಳಿಗೆ ಯಾತ್ರೆ ಬರಲಾರಂಭಿಸಿದರು. ಇದರಿಂದಾಗಿ ದಾಸ ಪಂಥೀಯರಿಗೆಲ್ಲಾ ಮಂತ್ರಾಲಯ ಹಾಗೂ ಮಳಖೇಡ್ ಈ ಸ್ಥಳಗಳು ತವರುಮನೆಯಂತಾಗಿ ಪರಿಣಮಿಸಿದವು. ಅವರ ಸಾಹಿತ್ಯ ಪ್ರಭಾವವು ಬೆಳೆದು ಬಂದಂತೆಲ್ಲಾ ಜನಜೀವನದಲ್ಲಿ ದೇವನೆಂದರೆ "ತಿರುಪತಿಯ

ತಿಮ್ಮಪ್ಪ" ಗುರುಗಳೆಂದರೆ "ಮಂತ್ರಾಲಯದ ರಾಘಪ್ಪ" ಎಂಬ ವಿಶ್ವಾಸದ ನಾಣ್ಣುಡಿಯು ಬೆಳೆದು ಬರುವಂತಾಯಿತು.

ಅತ್ಯಂತ ಪವಿತ್ರವಾದ ನಿಸರ್ಗ ರಮಣೀಯ ಸ್ಥಳವೆನಿಸಿದ ಮಂತ್ರಾಲಯ ಗ್ರಾಮಕ್ಕೆ ಹೋಗಿಬರಲು ಇಂದಿನಂತೆ ಅರವತ್ತು-ಎಪ್ಪತ್ತು ವರ್ಷಗಳ ಹಿಂದೆ ಯಾವ ವಿಶೇಷ ಸೌಕರ್ಯಗಳೂ ಇರಲಿಲ್ಲ. ಆದುದರಿಂದ ಯಾತ್ರಿಕರು ಈ ಕ್ಷೇತ್ರಗಳಿಗೆ ಹೋಗಿ ಬರುವ ಸಂಕಲ್ಪ ಮಾಡಿದಲ್ಲಿ ಅವರು ತಮ್ಮ ಪ್ರಯಾಣವನ್ನು ಕುದುರೆಗಳ ಮೇಲೆಯೋ ಇಲ್ಲವೇ ಕಾಲುನಡಿಗೆಯಲ್ಲಿಯೋ ಗುಂಪು ಗುಂಪಾಗಿ ಪ್ರಯಾಣ ಮಾಡುವ ಪದ್ಧತಿ ಇತ್ತು. ಭರತಖಂಡವೆಲ್ಲಾ ಸಂಪೂರ್ಣವಾಗಿ ತಮ್ಮ ಸ್ವಾಧೀನಕ್ಕೆ ಬಂದಾಗ ಆಡಳಿತದ ಅನುಕೂಲಕ್ಕಾಗಿ ಆಂಗ್ಲರು ಭಾರತದ ಉದ್ದಗಲಕ್ಕೂ ರೈಲು ಮಾರ್ಗಗಳನ್ನು ಹಾಕಲಾರಂಭಿಸಿದರು. ಅವರಿಂದ ಪ್ರಾರಂಭಿಸಲ್ಪಟ್ಟ ಮುಂಬೈ- ಮದರಾಸು ಮಹಾನಗರಗಳ ರೈಲು ಮಾರ್ಗದಲ್ಲಿ ಮಧ್ಯ ಬಿಂದುವಿನಂತೆ "ತುಂಗಭದ್ರಾ ಸ್ಟೇಷನ್" ಎಂಬ ರೈಲು ನಿಲ್ದಾಣವು ಕಾಣುವಂತಾಯಿತು. ಈ ದಾರಿಯಲ್ಲಿ ಓಡಾಡುತ್ತಿದ್ದ ಉಗಿಬಂಡಿಗಳಿಗೆ ಈ ನಿಲ್ದಾಣದಲ್ಲಿಯೇ ನೀರು ತುಂಬಿಕೊಂಡು ಆ ರೈಲುಗಳು ಮುಂದಿನ ಪ್ರಯಾಣವನ್ನಾರಂಭಿಸುತ್ತಿದ್ದವು. ರೈಲು ನಿಲ್ದಾಣದಿಂದ ಹೊರಬಂದೊಡನೆ ನಾಲ್ಕೆಂಟು ಗುಡಿಸಲುಗಳಿದ್ದದು ಕಾಣಬರುತ್ತಿತ್ತು. ಶ್ರೀಮದಕ್ಷೋಭ್ಯ ಮಠಾಧೀಶರಾಗಿದ್ದ ಕೋಡಂಗಲ್ ಸ್ವಾಮಿಗಳವರಿಂದ ಇಲ್ಲಿ ಕೆಲವು ರಚನಾತ್ಮಕ ಕಾರ್ಯಗಳಾದವು. ಆದುದರಿಂದ ಈ ಸ್ಥಳಕ್ಕೆ ಬಂದಿಳಿದ ಯಾತ್ರಿಕರು ಅದನ್ನು ಅಣುಮಂತ್ರಾಲಯ ಎಂದು ಕರೆಯಲಾರಂಭಿಸಿದರು. ಹಿಂದೆ ನಿಜಾಮರ ಸರಹದ್ದಿನಿಂದ ಗಡಿಪಾರು ಮಾಡಲ್ಪಟ್ಟ ಪಂಡಿತ್ ತಾರಾನಾಥರೂ ಸಹ ತಮ್ಮ ವಿಧಾಯಕ ಕಾರ್ಯಕ್ರಮಗಳಿಗಾಗಿ ಈ ಸ್ಥಳದಲ್ಲಿಯೇ ಆಶ್ರಮವನ್ನಾರಂಭಿಸಿದರು. ಇದರಿಂದಾಗಿ ವಿಚಾರವೇತ್ತರು ಹೆಚ್ಚಿನ ಸಂಖ್ಯೆಯಲ್ಲಿ ಈ ಸ್ಥಳವನ್ನು ಹುಡುಕಿಕೊಂಡು ಬರಲಾರಂಭಿಸಿದರು.

ಭಗವದ್ಭಕ್ತರಾದ ಯಾತ್ರಿಕರು ಮಾಧವಾರಮ್, ಚಟ್ನೀಹಳ್ಳಿ ಎಂಬ ಗ್ರಾಮಗಳ ಮೇಲೆ ಹಾದು ಮಂಚಾಲಿ ಕ್ಷೇತ್ರಕ್ಕೆ ಬಂದು

ತಲುಪುತ್ತಿದ್ದರು. ಸುಮಾರು ಮೂವತ್ತೈದು ನಲವತ್ತು ವರ್ಷಗಳ ಹಿಂದೆ ಈ ಮಾರ್ಗದಲ್ಲಿ ಬಸ್ಸಿನ ಓಡಾಟವೂ ಪ್ರಾರಂಭವಾಯಿತು. ಆದುದರಿಂದಾಗಿ ರೈಲಿನಿಂದಿಳಿದ ಯಾತ್ರಿಕರು ಆ ಬಸ್ಸುಗಳ ಮುಖಾಂತರ ಮಂಚಾಲಿ ಗ್ರಾಮವನ್ನು ತಲುಪುವಂತಾಯಿತು. ಹೀಗಿದ್ದರೂ ಸಹ ದಿನಕ್ಕೆ ಕೇವಲ ಒಂದೋ ಎರಡೋ ಬಸ್ಸುಗಳು ಮಾತ್ರ ಈ ಮಾರ್ಗವಲ್ಲಿ ಸಂಚರಿಸುತ್ತಿದ್ದವು. ಮುಂದೆ ಈ ಕಾಲು ಶತಮಾನದಲ್ಲಿ ನಾಡಿನ ನಾಲ್ಕೂ ಮೂಲೆಗಳಿಂದ ಈ ಕ್ಷೇತ್ರಕ್ಕೆ ಬಂದು ಹೋಗಲು ರಾಜಮಾರ್ಗಗಳು ನಿರ್ಮಾಣಗೊಂಡವು. ತುಂಗಭದ್ರಾ ಪ್ರವಾಹಕ್ಕೆ ಸೇತುವೆಯು ನಿರ್ಮಾಣವಾದುದರಿಂದ ಬಹು ದೂರದ ಪ್ರದೇಶಗಳೆಂದೆನಿಸಿಕೊಳ್ಳುತ್ತಿದ್ದ ಸ್ಥಳಗಳೆಲ್ಲಾ ತೀರ ಸಮೀಪದ ತಾಣಗಳಾಗಿ ಕಾಣತೊಡಗಿದವು.

ಗುರುರಾಜರ ಆರಾಧನೆಯ ನಿಮಿತ್ತವಾಗಿ ಮೂವತ್ತೈದು ನಲವತ್ತು ವರ್ಷಗಳ ಹಿಂದೆ ಈ ಕ್ಷೇತ್ರಕ್ಕೆ ಬಂದು ಹೋಗುತ್ತಿದ್ದ ಯಾತ್ರಿಕರ ಸಂಖ್ಯೆ ಕೇವಲ ಒಂದೆರಡು ಸಾವಿರಗಳಷ್ಟು ಮಾತ್ರ ಇರುತ್ತಿತ್ತು. ಹೀಗೆ ಬಂದು ಕೂಡಿದ ಯಾತ್ರಿಕರ ಅನುಕೂಲಕ್ಕಾಗಿ ಅವರ ಸೇವೆಮಾಡಲು ಗದುಗಿನಲ್ಲಿದ್ದ ನವಲಿ ವಕೀಲರೆನಿಸಿಕೊಂಡಿದ್ದ ಹಿರಿಯರ ನೇತೃತ್ವದಲ್ಲಿ ಯಾತ್ರಿಕರ ಸೇವಾ ಸಂಘ ಎಂಬ ಸಂಸ್ಥೆಯು ಹುಟ್ಟಿಕೊಂಡಿತು. ಈ ಸಂಸ್ಥೆಯ ಸದಸ್ಯರು ಆರಾಧನೆಯ ಕಾಲದಲ್ಲಿ ಬಂದ ಭಕ್ತರ ಭೋಜನದ ವ್ಯವಸ್ಥೆಯನ್ನು ನೋಡಿಕೊಳ್ಳುವುದು, ಅವರಿಗೆ ಸ್ಥಳಾವಕಾಶವನ್ನು ಕಲ್ಪಿಸಿಕೊಡುವುದು, ಅವರು ತಮ್ಮ ಸಂಗಡ ತಂದಿದ್ದ ಹಣವನ್ನು ಭದ್ರವಾಗಿ ರಕ್ಷಿಸಿ ಮರಳುವಾಗ ಆ ಹಣವನ್ನು ಮರಳಿ ಕೊಡುವುದು ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದರು. ಮುಂದೆ ಈ ಸಂಸ್ಥೆಯು ಕೇಂದ್ರ ಸರಕಾರದೊಡನೆ ಪತ್ರವ್ಯವಹಾರವನ್ನು ಮಾಡಿ ತುಂಗಭದ್ರಾ ಸ್ಟೇಷನ್ ಎಂಬ ಹೆಸರಿನ ಬದಲಾಗಿ "ಮಂತ್ರಾಲಯಂ ರೋಡ್" ಎಂದು ಆ ನಿಲ್ದಾಣಕ್ಕೆ ಹೆಸರಿಡಬೇಕೆಂದು ಪ್ರಯತ್ನಿಸ ತೊಡಗಿದರು. ಕಾಲಾಂತರದಲ್ಲಿ ಈ ಪ್ರಯತ್ನವು ಫಲಿಸಿತು. ಜನತೆಯ ಬೇಡಿಕೆಯನ್ನು ಮನ್ನಿಸಿದ ಸರ್ಕಾರವು ಆ ನಿಲ್ದಾಣದ ಹೆಸರನ್ನು ಬದಲಿಸಿ ಮಂತ್ರಾಲಯಂ ರೋಡ್ ಎಂಬ ಹೊಸ ಹೆಸರಿನಿಂದ ಕರೆಯಲಾರಂಭಿಸಿದರು.

ಸುಮಾರು ಐವತ್ತು ವರ್ಷಗಳ ಹಿಂದೆ ಮಂಚಾಲಿಯಲ್ಲಿರುವ ಗುರುರಾಜರ ವೃಂದಾವನದ ಮೇಲೆ ಇಂದಿನಂತೆ ಸಿಮೆಂಟ್ ಕಾಂಕ್ರೀಟಿನ ಕಟ್ಟಡಗಳಿರಲಿಲ್ಲ. ಸಾಮಾನ್ಯವಾದ ತಗಡು ಹೊದಿಕೆಯ ಛಾವಣಿಯನ್ನು ಮಾತ್ರ ಕಾಣಬಹುದಾಗಿತ್ತು. ಅದೇ ರೀತಿಯಾಗಿ ಮುಂಭಾಗದಲ್ಲಿರುವ ಮಂಚಾಲಮ್ಮನ ಗುಡಿಯೂ ಸಹ ಬಹು ಚಿಕ್ಕದಾಗಿತ್ತು. ಈ ಗುಡಿಯ ಮುಂಭಾಗವಲ್ಲಿಯೇ ಕ್ಷೇತ್ರಕ್ಕೆ ಬಂದ ಯಾತ್ರಾರ್ಥಿಗಳು ಇಳಿದುಕೊಳ್ಳುವುದಕ್ಕಾಗಿ ತಗಡಿನ ಹೊದಿಕೆಯಿಂದ ಮಾಡಿದ ಕೆಲವು ಕೋಣೆಗಳಿಂದ ಕೂಡಿದ ಒಂದೇ ಒಂದು ಛತ್ರವು ಮಾತ್ರ ಕಾಣಬರುತ್ತಿತ್ತು. ಆ ಛತ್ರದಲ್ಲಿ ಸ್ಥಳವು ಇಲ್ಲದಂತಾದಾಗ ಬೃಂದಾವನದ ನಾಲ್ಕು ಬದಿಯಲ್ಲಿದ್ದ ಕಲ್ಲುಮಂಟಪಗಳಲ್ಲಿ ಯಾತ್ರಿಕರು ಬಿಡಾರ ಮಾಡಿಕೊಂಡಿರುತ್ತಿದ್ದರು. ಮುಂದೆ ಉತ್ತರ ಕರ್ನಾಟಕದ ಭಕ್ತರೆಲ್ಲಾ ಒಕ್ಕೂಡಿಕೊಂಡು "ಹುಬ್ಬಳ್ಳಿಯ ಛತ್ರ" ಎಂಬ ಹೆಸರಿನ ನೂತನ ಕಟ್ಟಡವೊಂದನ್ನು ಕಟ್ಟಿಸಿದರು. ಕಾಲುಶತಮಾನದ ಹಿಂದೆ ಈ ಹುಬ್ಬಳ್ಳಿಯ ಛತ್ರವೇ ಆ ಕ್ಷೇತ್ರದಲ್ಲಿ ಅತ್ಯಂತ ಸುಸಜ್ಜಿತವಾದ ಛತ್ರವೆಂದು ಕರೆಸಿಕೊಳ್ಳುತ್ತಿತ್ತು. ಅಂದು ಇಂದಿನಂತೆ ದಿನಂಪ್ರತಿ ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಬಂದುಹೋಗುವ ಪದ್ಧತಿ ಇರಲಿಲ್ಲ. ತಮ್ಮ ಇಷ್ಟಾರ್ಥಗಳ ಸಿದ್ದಿಗಾಗಿ ಯಾರು ಸೇವಾದಿಗಳನ್ನು ಕೈಕೊಳ್ಳುತ್ತಾರೆಯೋ ಅಂಥವರ ಸಂಖ್ಯೆಯು ಮಾತ್ರ ಇಲ್ಲಿ ಕಾಣಬಹುದಿತ್ತು. ಆದುದರಿಂದ ಈ ಸೇವೆಯಲ್ಲಿ ನಿರತರಾದ ಭಕ್ತರಿಗೆ ಗ್ರಾಮನಿವಾಸಿಗಳು ಅನೇಕ ರೀತಿಯಲ್ಲಿ ಸಹಕಾರವನ್ನೀಯುತ್ತಿದ್ದರು, ಶ್ರೀಮಠದ ಪರಿವಾರದವರೂ ಸಹ ಸೇವಾಕರ್ತೃಗಳನ್ನು ಬಹು ಆತ್ಮೀಯತೆಯಿಂದ ನೋಡಿಕೊಳ್ಳುತ್ತಿದ್ದರು. ಇದರಿಂದಾಗಿ ಸಾಧಕರ ಮನಸ್ಸಿಗೆ ನೆಮ್ಮದಿ ಉಂಟಾಗುತ್ತಿತ್ತು. ಸೇವೆಗೆ ಸುಪ್ರೀತರಾದ ಗುರುಗಳ ಅನುಗ್ರಹವನ್ನು ಪಡೆದು ಮರಳಿದ ಯಾತ್ರಿಕರಿಗೆ ಈ ಸ್ಥಳವು ಗುರು ಕಾರಣ್ಯದ ಮಹಿಮೆಯಿಂದಾಗಿ "ಮಂತ್ರಾಲಯವಾಗಿ" ಪರಿಣಮಿಸ ತೊಡಗಿತು. ಗುರುಗಳಲ್ಲಿ ಸೇವೆಮಾಡಿ ಅನುಗ್ರಹ ಪಡೆದಭಕ್ತರು ಮುಂದೆ ಈ ಸ್ಥಳವನ್ನು ಮಹಾ ಮಂತ್ರಾಲಯ ಎಂಬ ಹೆಸರಿನಿಂದ ಕೊಂಡಾಡಲಾರಂಭಿಸಿದರು. ಇದರಿಂದಾಗಿ ಜನ ಸಾಮಾನ್ಯರ ಹೃದಯಲ್ಲಿದ್ದ

"ಮಂಚಾಲಿ" ಎಂಬ ಹೆಸರು ಮಾಯವಾಗಿ "ಮಂತ್ರಾಲಯ" ಎಂಬ ಹೆಸರೇ ಆಳವಾಗಿ ಬೇರೂರಲಾರಂಭಿಸಿತು.

ಗುರುರಾಜರ ವೃಂದಾವನವಿರುವ ಒಳಭಾಗದ ಪ್ರಾಂಗಣದಲ್ಲಿ ಇಂದು ಯಾವ ಸ್ಥಳದಲ್ಲಿ ಪ್ರಹ್ಲಾದ ಮಹಾರಾಜರ ಉತ್ಸವ ಮೂರ್ತಿಯನ್ನಿಡುತ್ತಾರೆಯೋ ಆ ಸ್ಥಳದಲ್ಲಿ ಹಿಂದೆ ಬೃಹದಾಕಾರವಾಗಿ ಬೇವಿನ ಮರವೊಂದು ಬೆಳೆದು ನಿಂತಿತ್ತು. ಸೇವಾರ್ಥಿಗಳು ಬಿಸಿಲಿನ ಆಯಾಸದ ನಿವಾರಣೆಗಾಗಿ ಆಗಾಗ ಆ ಗಿಡದ ನೆರಳಿಗೆ ಬಂದು ಆಶ್ರಯಿಸುತ್ತಿದ್ದರು. ಅದೇ ರೀತಿಯಾಗಿ ಇನ್ನೊಂದು ಭಾಗದಲ್ಲಿ ಕಣಗಲು ಹೂವಿನ ಒಂದು ಕಂಟೆಯು ಅಸಾಧ್ಯವಾಗಿ ಬೆಳೆದುಕೊಂಡು ನಿಂತಿತ್ತು. ಬಿಸಿಲಿನ ಪ್ರಖರತೆಯಲ್ಲಿಯೂ ಸಹ ಅರಳಿನಿಂತ ವರ್ಣರಂಜಿತವಾದ ಆ ಹೂವುಗಳನ್ನು ನೋಡಿದಾಗ ಯಾತ್ರಿಕರ ಮನಸ್ಸು ಆಹ್ಲಾದಗೊಳ್ಳುತ್ತಿತ್ತು. ಇಂದು ಅವುಗಳೆಲ್ಲಾ ಮಾಯವಾಗಿ ಹೋಗಿವೆ. ಎಲ್ಲಿ ಕಣ್ಣಾಡಿಸಿದರೂ ಆ ಪ್ರಾಂಗಣದಲ್ಲಿ ಆಧುನಿಕತೆಯ ಸಿಮೆಂಟಿನ ಮಂಟಪಗಳೇ ಕಾಣ ಬರುವಂತಾಗಿವೆ.

ಯಾತ್ರಾರ್ಥಿಗಳು ಅತಿ ನಸುಕಿನ ಜಾವದಲ್ಲೆದ್ದು ಮಂಜುಳವಾಗಿ ಹರಿಯುತ್ತಿದ್ದ ತುಂಗಭದ್ರಾ ಪ್ರವಾಹದಲ್ಲಿ ಮನಸೋಕ್ತವಾಗಿ ಮಿಂದು, ಪರಿಶುದ್ಧ ಹೃದಯರಾಗಿ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಸೂರ್ಯನಾರಾಯಣನಿಗೆ ಅರ್ಘ್ಯವನ್ನಿತ್ತು, ಶ್ರೀಮಠಕ್ಕೆ ಬಂದು, ಗುರುರಾಜರ ಬೃಂದಾವನಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕುವುದು, ದಿಂಡುರುಳುಪಿಕೆಯ ಸೇವೆಯಲ್ಲಿ ತೊಡಗುವುದು, ಇವೇ ಮೊದಲಾದ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಕೆಲವರು ಅಲ್ಲಲ್ಲಿ ಗುಂಪು ಗುಂಪಾಗಿ ಕೂಡಿ ಕೊಂಡು ಗುರುಸಾರ್ವಭೌಮರ ಅಷ್ಟೋತ್ತರ ಸೇವಾ ಕಾರ್ಯದಲ್ಲಿ ನಿರತರಾಗಿ ಬಿಡುತ್ತಿದ್ದರು. ಪ್ರಾತಃ ಸ್ಮರಣೀಯರಾಗಿದ್ದ ಶ್ರೀ ಸುಯಮೀಂದ್ರ ತೀರ್ಥರು ತಮ್ಮ ಸಂಸ್ಥಾನದ ಪೂಜೆಯನ್ನಾರಂಭಿಸಿದಾಗ ಬಂದ ಭಕ್ತರೆಲ್ಲ ಯತಿವರೇಣ್ಯರ ದೇವತಾಪೂಜೆಯನ್ನು ನೋಡಿ ಪುನೀತರಾಗುತ್ತಿದ್ದರು. ಈ ಪೂಜಾ ಕಾರ್ಯವು ಮುಗಿದ ನಂತರ

ವೃಂದಾವನವಸ್ಥರಾಗಿರುವ ಗುರುಗಳಿಗೆ ಹಸ್ತೋದಕ, ಮಹಾ ಮಂಗಳಾರತಿ ಮೊದಲಾದುವುಗಳನ್ನು ಮಾಡಿ ಮುಗಿಸಿದ ನಂತರ ಬಂದ ಭಕ್ತರಿಗೆಲ್ಲಾ ಸ್ವಹಸ್ತದಿಂದ ತೀರ್ಥವನ್ನಿತ್ತು ಅವರನ್ನೆಲ್ಲಾ ಭೋಜನಕ್ಕೆ ಕಳುಹಿಸಿ ಕೊಡುತ್ತಿದ್ದರು. ಅಂದಿನ ಕಾಲದಲ್ಲಿ ನಿತ್ಯದ ಅಡಿಗೆಗೆ, ಊಟಕ್ಕೆ ಕುಳಿತಾಗ ನೀರನ್ನು ಬಡಿಸುವಿಕೆಗೆ, ಇವೇ ಮೊದಲಾದವುಗಳಿಗೆಲ್ಲಾ ನದಿಯಿಂದ ನೀರನ್ನು ಹೊತ್ತುತರಬೇಕಾಗುತ್ತಿತ್ತು. ಈ ಕಾರ್ಯಕ್ಕಾಗಿ ಅಂದು ಬಳಸುತ್ತಿದ್ದ ನೀರಿನ ಕೊಡಗಳನ್ನು ನೋಡಿದಲ್ಲಿ ಇಂದಿನವರಿಗೆ ಅಚ್ಚರಿಯಾಗುವುದು ಸಹಜ. ಏಕೆಂದರೆ ಇಂದಿನದೆಲ್ಲಾ ಪ್ಲಾಸ್ಟಿಕ್‌ದ, ನಾಜೂಕಿನ ಯುಗವೆಂದೆನಿಸಿಕೊಳ್ಳುವುದರಿಂದ ಹೀಗಾಗುವುದು ಸಹಜ. ಅಂದು ಬಂದ ಯಾತ್ರಿಕರಿಗೆ ನೀರನ್ನು ಪೂರೈಸುತ್ತಿದ್ದ ಸೇವಕನೊಬ್ಬನನ್ನು ಮಂತ್ರಾಲಯದಲ್ಲಿ ಇಂದಿಗೂ ನಾವು ನೋಡಬಹುದು. ದುಡಿತದಿಂದ, ವಯಸ್ಸಿನಿಂದ, ಬಡತನದಿಂದ ಆತನು ತುಂಬಾ ಹಣ್ಣಾಗಿ ಹೋಗಿದ್ದಾನೆ. ಆದರೂ ಸಹ ಬದುಕಾಗಾಗಿ ಆತನು ಇಡ್ಲಿ, ವಡೆ ಮೊದಲಾದವುಗಳನ್ನು ಮಾರಿಕೊಂಡು ಜೀವಿಸುತ್ತಿದ್ದಾನೆ. ಆ ಕಪ್ಪು ಮನುಷ್ಯನನ್ನು ಕಂಡಾಗೆಲ್ಲಾ ಮೂವತ್ತು ವರ್ಷಗಳ ಹಿಂದಿನ ಜೀವನ ಒಂದೊಂದಾಗಿ ಕಣ್ಮುಂದೆ ಹಾದುಹೋದಂತೆನಿಸುತ್ತದೆ.

ಈ ಮೊದಲೇ ತಿಳಿಸಿದಂತೆ ಮಂಚಾಲಿ ಒಂದು ಕುಗ್ರಾಮವಾಗಿತ್ತು. ಆದುದರಿಂದ ಶ್ರೀಮಠದವರು ಬಂದು ಇಲ್ಲಿಯೇ ಬಿಡಾರಮಾಡಲು ಪ್ರಾರಂಭಿಸಿದ ನಂತರ ಸಾಯಂಕಾಲವಾದೊಡನೆ ಶ್ರೀಮಠದ ತುಂಬೆಲ್ಲಾ ಒಂದರ್ಧ ಗಂಟೆ ವಿದ್ಯುತ್ ದೀಪಗಳು ಬೆಳಗುವಂತೆ ಮಾಡಲು ಆಯಿಲ್ ಇಂಜನ್ ಒಂದನ್ನು ಪ್ರಾರಂಭಿಸುತ್ತಿದ್ದರು. ಈ ಕೃತ್ರಿಮ ಬೆಳಕಿನಲ್ಲಿ ಶ್ರೀಮಠದ ಆವರಣವನ್ನು ಪ್ರವೇಶ ಮಾಡಿದ ರೇಡಿಯೋ ಕೂಡ ದೇಶವಿದೇಶಗಳ ಸುದ್ದಿಗಳನ್ನು ಬಿತ್ತರಿಸಲು ಪ್ರಾರಂಭಿಸುತ್ತಿತ್ತು. ರಾಷ್ಟ್ರವಿಮೋಚನೆಗಾಗಿ ಭಾರತದ ತುಂಬೆಲ್ಲಾ ಚಳುವಳಿಯು ಆರಂಭವಾದುದರಿಂದ ಯಾತ್ರಿಕರು ಬಹು ಆಸಕ್ತಿಯಿಂದ ಆ ರೇಡಿಯೋ ಪ್ರಸಾರಗಳನ್ನು ಕೇಳುತ್ತಿದ್ದರು. ಈ ಕಾರ್ಯಕ್ರಮವು ಮುಗಿದನಂತರ ದಾಸಸಾಹಿತ್ಯದ ಬಳಗದವರು ಒಕ್ಕೂಡಿಕೊಂಡು ತಾಳ, ತಂಬೂರಿ,

ಗೆಜ್ಜೆ ಮೊದಲಾದ ಸಾಧನಗಳನ್ನು ಹಿಡಿದು ಪರಂಪರಾಗತವಾಗಿ ಬಂದ ದಾಸರ ಪದ ಪದ್ಯಗಳನ್ನು ಹೇಳಲು ಪ್ರಾರಂಭಿಸುತ್ತಿದ್ದರು. ಪ್ರಶಾಂತ ವಾತಾವರಣದಲ್ಲಿ ಸಾಮೂಹಿಕವಾಗಿ ನಡೆಯುತ್ತಿದ್ದ ಈ ಕಾರ್ಯಕ್ರಮವು ಬಂದ ಭಕ್ತರ ಮೇಲೆಲ್ಲಾ ವಿಶೇಷ ಪರಿಣಾಮವನ್ನುಂಟು ಮಾಡುತ್ತಿತ್ತು.

ಸುಮಾರು ಮೂವತ್ತೈದು ವರ್ಷಗಳ ಹಿಂದೆ ಗುರುರಾಜರ ಭಕ್ತರೊಬ್ಬರು ಸುಂದರವಾದ ಬೆಳ್ಳಿಯ ರಥವನ್ನು ಮಾಡಿಸಿ ಶ್ರೀಮಠಕ್ಕೆ ಅದನ್ನು ದಾನವಾಗಿತ್ತಿದ್ದರು. ದಿವ್ಯವಾದ ಆ ರಥವನ್ನು ನೋಡಿ ಪುನೀತರಾಗಲು ನಾನಾ ಭಾಗಗಳಿಂದ ಯಾತ್ರಿಕರು ಬಂದು ಹೋಗುತ್ತಿದ್ದರು. ಆರಾಧನೆಯ ಕೊನೆಯ ದಿನವಂತೂ ರಾಯರು ರಥಾರೂಢರಾಗಿ ನಿಂತಾಗ ಮುಂಭಾಗದಲ್ಲಿ ನಿಂತು ಕೊಂಡಿದ್ದ ದಾಸರ ಗುಂಪು (ರಥವಾನೇರಿದ ರಾಘವೇಂದ್ರ ಸದ್ಗುಣಸಾಂದ್ರ ಎಂಬ ಪದ್ಯವನ್ನು) ಏಕಾಗ್ರ ಭಾವದಿಂದ ಹಾಡುತ್ತಿದ್ದುದನ್ನು ಕಂಡಾಗಲಂತೂ ಭಕ್ತರ ಮೈಮನಗಳು ಭಾವಪರವಶವಾಗಿ ಹೋಗುತ್ತಿದ್ದವು. ಕಾಲನ ಪ್ರಭಾವವು ಎಲ್ಲೆಡೆಯಲ್ಲಿಯೂ ಪಸರಿಸಿದಂತೆ ಈ ಕ್ಷೇತ್ರದ ಮೇಲೂ ಸಹ ಅಗಲಾರಂಭಿಸಿತು. ದಿನಕಳೆದಂತೆಲ್ಲಾ ಒಂದೊಂದಾಗಿ ಆಧುನಿಕ ಸೌಕರ್ಯಗಳು ಕಾಣಬರತೊಡಗಿದವು. ಇದರ ಪರಿಣಾಮವಾಗಿ ಕ್ಷೇತ್ರಕ್ಕೆ ಬರುವ ಭಕ್ತರ ಸಂಖ್ಯೆಯು ಸಹ ಇಮ್ಮಡಿ-ನಾಲ್ಮಡಿಯಾಗಿ ಬೆಳೆಯಲಾರಂಭಿಸಿತು. ಪುಟ್ಟದಾದ ಹಳೆಯ ಗುಡಿಯಲ್ಲಿದ್ದ ಮಂಚಾಲಮ್ಮನಿಗೆ ಭವ್ಯವಾದ ಮಂದಿರವೇ ಕಾಣುವಂತಾಯಿತು. ಹೀಗೆ ನಮಗರಿವಿಲ್ಲದಂತೆ ಒಂದೊಂದೇ ಹೆಜ್ಜೆಯ ರೂಪದಲ್ಲಿ ನವ್ಯತೆಯ ಪ್ರಭಾವವು ಈ ಗ್ರಾಮವನ್ನು ಪ್ರವೇಶ ಮಾಡಿತು. ರಾಷ್ಟ್ರವು ಸ್ವಾತಂತ್ರ್ಯವಾಗಿತ್ತು. ನಾವು ನಮ್ಮದೇ ಆದ ರಾಷ್ಟ್ರವೊಂದನ್ನು ಪಡೆದುಕೊಂಡಿದ್ದೆವು. ಸ್ವತಂತ್ರ ರಾಷ್ಟ್ರದ ಅಭ್ಯುದಯಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಯಿತು. ಅಲ್ಲಲ್ಲಿ ಅಣೆಯಕಟ್ಟುಗಳು ನಿರ್ಮಾಣಗೊಂಡವು. ದಾರಿಗಡ್ಡವಾಗಿದ್ದ ಪ್ರವಾಹಗಳನ್ನು ದಾಟಲು ಸೇತುವೆಗಳ ನಿರ್ಮಾಣ ಕಾರ್ಯವು ಭರದಿಂದ ಪ್ರರಾಂಭವಾಯಿತು. ವಾಹನಗಳ ಸೌಕರ್ಯವು ಕೂಡ ಹೆಚ್ಚಿನ ಪ್ರಮಾಣದಲ್ಲಿ

ಲಭಿಸುವಂತಾಯಿತು. ಇದರಿಂದಾಗಿ ಸ್ವಾತಂತ್ರ್ಯದ ತಿಳಿವಾತಾವರಣದಲ್ಲಿ ಸರಾಗವಾಗಿ ನಾಡಿನುದ್ದಕ್ಕೂ ಇರುವ ತೀರ್ಥ ಕ್ಷೇತ್ರಗಳನ್ನು ಹುಡುಕಿಕೊಂಡು ಹೋಗುವ ಪ್ರಥೆಯು ಬೆಳೆಯಲಾರಂಭಿಸಿತು.

ಪ್ರಗತಿಯ ಮುನ್ನೋಟದ ಫಲವಾಗಿ ಕೇಂದ್ರ ಸರ್ಕಾರದ ಪ್ರವಾಸೋದ್ಯಮ ಇಲಾಖೆಯು ಮಂಚಾಲಿಯಲ್ಲಿ ಯಾತ್ರಾರ್ಥಿಗಳಿಗಾಗಿ ಬಹು ಸುಂದರವಾದ ಪ್ರವಾಸಿ ಮಂದಿರವೊಂದನ್ನು ಕಟ್ಟಿಸಿತು. ಹಾಗೆಯೇ ಅಖಿಲ ಭಾರತ ಮಟ್ಟದಲ್ಲಿರುವ ವೈಶ್ಯ ಜನಾಂಗದವನೂ ಸಹ ತಮ್ಮ ಸಂಸ್ಥೆಯಿಂದ ಕಲ್ಯಾಣ ಮಂಟಪ, ವಸತಿ ಗೃಹಗಳನ್ನು ಏರ್ಪಡಿಸಿದರು. ಹೀಗೆ ಒಂದೊಂದೇ ಸೌಕರ್ಯಗಳು ಬೆಳೆದಂತೆಲ್ಲಾ ಯಾತ್ರಿಕರಿಂದ ಕೂಡಿದ ಕಾಂಟ್ರಾಕ್ಟ್ ಬಸ್ಸುಗಳು ಮಂತ್ರಾಲಯದತ್ತ ಧಾವಿಸಿಬರತೊಡಗಿದವು. ಈ ಒತ್ತಡವನ್ನು ಕಂಡು ಶ್ರೀಮಠದವರೂ ಸಹ ತಮ್ಮದೇ ಆದ ರೀತಿಯಲ್ಲಿ ಸಾಲುಸಾಲಾಗಿ ಅನೇಕ ಕಟ್ಟಡಗಳನ್ನು ಕಟ್ಟಿಸತೊಡಗಿದರು. ಇದನ್ನೆಲ್ಲಾ ಕಂಡ ಗ್ರಾಮನಿವಾಸಿಗಳು ತಾವು ಹಿಂದುಬೀಳದೆ ತಮಗನುಕೂಲವಾದ ರೀತಿಯಲ್ಲಿ ಕಟ್ಟಡಗಳನ್ನು ಕಟ್ಟಿಸಿ ಅವುಗಳನ್ನೆಲ್ಲಾ ಬಾಡಿಗೆಗೆ ಕೊಡಲಾರಂಭಿಸಿದರು. ಇದರಿಂದಾಗಿ ಉಪಾಹಾರಗೃಹಗಳು, ಸ್ಟುಡಿಯೋಗಳು, ಇನ್ನಿತರೇ ವ್ಯಾಪಾರಿ ಮಳಿಗೆಗಳು ಬೆಳೆಯಲಾರಂಭಿಸಿದವು. ಇಷ್ಟೆಲ್ಲಾ ಪರಿವರ್ತನೆಯಾದರೂ ಸಹ ಇಂದು ಪ್ರತಿದಿನ ಬಂದುಹೋಗುವ ಯಾತ್ರಾರ್ಥಿಗಳ ಸಂಖ್ಯೆಯನ್ನು ನೋಡಿದಾಗ ಈಗಾಗಿರುವ ಸೌಲಭ್ಯಗಳು ತೀರ ಕಡಿಮೆಯ ಪ್ರಮಾಣದ್ದಾಗಿವೆ ಎಂದೆನಿಸುವದು. ಪ್ರವಾಸಿಗರ ಆರೋಗ್ಯವನ್ನು ಕಾಪಾಡಿಕೊಳ್ಳಲು ಪರಿಸರದ ಶುಚಿತ್ವವನ್ನು ರಕ್ಷಿಸಿಕೊಳ್ಳಲು ಯಾವುದೇ ತರಹದ ಪ್ರಯತ್ನಗಳು ಇಲ್ಲದಿರುವುದು ಬಹು ಶೋಚನೀಯವಾಗಿ ತೋರುತ್ತವೆ. ಇನ್ನು ಮುಂದಾದರೂ ಸಹ ಈ ವಿಚಾರದಲ್ಲಿ ಸಂಬಂಧಪಟ್ಟವರು ಗಮನ ಹರಿಸುವುದು ಅತ್ಯಾವಶ್ಯಕ.

ಯಾವುದಾದರೊಂದು ಕ್ಷೇತ್ರವು ಅಭಿವೃದ್ಧಿ ಹೊಂದುತ್ತಿದ್ದಂತೆ ಅದಕ್ಕಂಟಿಕೊಂಡು ಅನೇಕ ಸಮಸ್ಯೆಗಳು ಸಹ ನಮಗರಿವಿಲ್ಲದಂತೆ

ಬೆಳೆದು ನಿಲ್ಲುತ್ತವೆ. ಮಂತ್ರಾಲಯದಲ್ಲಿ ಅಂಚೆಯ ಕಛೇರಿಯೇನೋ ಇದೆ, ಆದರೆ ದೂರವಾಣಿಯ ಸಂಪರ್ಕವು ಮಾತ್ರ ಸರಿಯಾದ ರೀತಿಯಲ್ಲಿಲ್ಲ. ನಾನಾ ಭಾಗಗಳಿಂದ ಬರುವ ಯಾತ್ರಿಕರಿಗೆ ಈ ಕ್ಷೇತ್ರದಲ್ಲಿ ದಿನಂಪ್ರತಿ ನಡೆಯುವ ಕಾರ್ಯಕ್ರಮಗಳೇನು? ಯಾವ ಯಾವ ಸಂದರ್ಭಗಳಲ್ಲಿ ಎಂಥ ಸೇವಾದಿಗಳು ನಡೆಯುತ್ತವೆ ಎಂಬುದನ್ನು ತಿಳಿಯಪಡಿಸುವ ಫಲಕಗಳು ಎಲ್ಲಿಯೂ ಕಾಣಬರುವುದಿಲ್ಲ. ಬಂದ ಯಾತ್ರಿಕರಿಗೆ ಬಿಡಾರದ ಸೌಕರ್ಯಗಳನ್ನು ಪಡೆದುಕೊಳ್ಳಲು ಯಾರನ್ನು ಭೇಟಿಯಾಗಬೇಕು? ಎಂಬುದೇ ಬಹುದೊಡ್ಡ ಸಮಸ್ಯೆಯಾಗುತ್ತದೆ. ಇದಕ್ಕಾಗಿ ಅಲ್ಲಲ್ಲಿ ವಿಚಾರಣಾ ಕೇಂದ್ರಗಳನ್ನಾರಂಭಿಸುವುದು ಬಹು ಮುಖ್ಯವಾದ ಕೆಲಸವೆನಿಸುತ್ತದೆ.

ಸಮಗ್ರ ಭಾರತದಲ್ಲಿಯೇ ಪ್ರಥಮ ಸ್ಥಾನದಲ್ಲಿರುವ ತಿರುಪತಿಯ ಕ್ಷೇತ್ರವು ಇಂದು ಆ ದೇವರ ಹೆಸರಿನಲ್ಲಿ ವಿಶ್ವವಿದ್ಯಾನಿಲಯವನ್ನೇ ಪ್ರಾರಂಭಿಸಿದೆ. ಸಂಸ್ಕೃತ ಮಹಾಪಾಠಶಾಲೆ ಇದೆ. ವೇದಾಭ್ಯಾಸಗಳ ಶಾಲೆ ಇದೆ. ಅಣ್ಣಮ್ಮಾಚಾರ್ಯ ಹಾಗೂ ಕರ್ನಾಟಕದ ದಾಸ ಸಾಹಿತ್ಯ ಇವುಗಳ ಪ್ರಚಾರಕಾರ್ಯ, ಗ್ರಂಥ ಪ್ರಕಟಣ ವಿಭಾಗ, ಪ್ರಚಾರ ಇಲಾಖೆ, ವೈದ್ಯಕೀಯ ವಿಭಾಗ, ಇವೇ ಮೊದಲಾದ ಲೋಕೋಪಯೋಗಿ ಕಾರ್ಯಕ್ರಮಗಳನ್ನು ಹಾಕಿಕೊಂಡು ಶ್ರೀನಿವಾಸನ ಹೆಸರಿನಿಂದ ಬಂದ ಹಣವನ್ನು ಸಾರ್ಥಕ ರೀತಿಯಲ್ಲಿ ಬಳಸುತ್ತಲಿದೆ. ಮಂತ್ರಾಲಯವಾದರೂ ಸಹ ಆಂಧ್ರದಲ್ಲಿರುವ ಬಹುದೊಡ್ಡ ಯಾತ್ರಾಸ್ಥಳವೆಂದೇನಿಸಿಕೊಳ್ಳುತ್ತದೆ. ಪ್ರತಿಕ್ಷಣವೂ ಯಾತ್ರಿಕರ ತಂಡಗಳು ತಂಡೋಪತಂಡವಾಗಿ ಬಂದು ಹೋಗುತ್ತಲಿವೆ. ಹಿಂದಿನದಕ್ಕಿಂತ ಇಂದು ಆದಾಯವೂ ನೂರ್ಮಡಿಯಾಗಿ ಹೆಚ್ಚಿದಂತೆನಿಸುತ್ತದೆ. ಹೀಗಿದ್ದರೂ ಸಹ ತಿರುಪತಿಯಲ್ಲಿ ನಡೆದಂತೆ ಈ ಕ್ಷೇತ್ರದಲ್ಲಿ ಯಾವುದೇ ತರಹದ ಕೆಲಸ ಕಾರ್ಯಗಳು ನಡೆಯುತ್ತಿಲ್ಲ ಎಂದೆನಿಸಿದಾಗ ಯಾತ್ರಿಕರಿಗೆ ಬಹು ಅಚ್ಚರಿಯೆನಿಸುತ್ತದೆ. "ಕೆರೆಯ ನೀರನು ಕೆರೆಗೆ ಚೆಲ್ಲಿ" ಎಂಬ ದಾಸರ ಮಾತಿನಂತೆ ಜನಸಾಮಾನ್ಯರಿಂದ ಬಂದ ಹಣವನ್ನು ಲೋಕಕಲ್ಯಾಣಕ್ಕಾಗಿ ಬಳಸಲು ಪ್ರಾರಂಭಿಸಿದಾಗ ಅದು ಒಂಬತ್ತೆ ನೂರಾಗಿ, ನೂರಕ್ಕೆ ಸಾವಿರವಾಗಿ ಪುನಃ ಪುನಃ ಆ

ಕೇಂದ್ರಕ್ಕೆ ಮರಳಿ ಬರುತ್ತಿರುವ ಮಾತನ್ನು ತಿರುಪತಿಯ ಶ್ರೀನಿವಾಸನ ಕಾರ್ಯವ್ಯಾಪ್ತಿಯನ್ನು ಕುರಿತು ಅಭ್ಯಾಸ ಮಾಡಿದಾಗ ನಮಗೆ ತಿಳಿದುಬರುತ್ತದೆ. ಅಂಥ ಚಟುವಟಿಕೆಗಳು ಮಂತ್ರಾಲಯದ ಗುರುಸಾರ್ವಭೌಮರ ಹೆಸರಿನಿಂದ ಪ್ರಾರಂಭವಾಗಬೇಕಾದುದು ಅತ್ಯಾವಶ್ಯಕವೆನ್ನಿಸುತ್ತದೆ.

ಕರ್ನಾಟಕ ರಾಜ್ಯ ಸರ್ಕಾರವು ತನ್ನ ನಾಡಿನ ಪ್ರಜೆಗಳ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಬಹು ಕಾಲದ ಹಿಂದೆಯೇ ತಿರುಮಲೈ, ತಿರುಪತಿ, ತಿರುಚಾನೂರು ಹಾಗೂ ಶ್ರೀಶೈಲ ಕ್ಷೇತ್ರಗಳಲ್ಲಿ ತನ್ನದೇ ಆದ ಛತ್ರಗಳನ್ನು ನಡೆಸಿಕೊಂಡು ಬರುತ್ತಲಿದೆ. ಈಗ ಮಂತ್ರಾಲಯಕ್ಕೆ ಬಂದು ಹೋಗುವ ಕರ್ನಾಟಕದ ಭಕ್ತರಿಗಾಗಿ ನಮ್ಮದೇ ಆದ ಛತ್ರವೊಂದನ್ನು ನಿರ್ಮಿಸಿರುವುದು ಕನ್ನಡಿಗರಿಗೆಲ್ಲಾ ಅಭಿಮಾನವನ್ನುಂಟುಮಾಡುವ ಮಾತಾಗಿದೆ. ಇಂದು ಮಂತ್ರಾಲಯದಲ್ಲಿ ಪ್ರಾರಂಭವಾಗುವ ಈ ಛತ್ರವು ಆಂಧ್ರಪ್ರಾಂತದಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ನೆಡೆಸಲ್ಪಡುವ ನಾಲ್ಕನೇ ಛತ್ರವೆಂದು ಗುರುತಿಸಲ್ಪಡುತ್ತದೆ. ಪ್ರಜಾಪ್ರಭುತ್ವದ ಇಂದಿನ ದಿನಗಳಲ್ಲಿ ಇಂಥ ಕೆಲಸ ಕಾರ್ಯಗಳಾಗುತ್ತಿರುವುದನ್ನು ಕಂಡಾಗ ಭಾವುಕರಾದ ಕನ್ನಡಿಗರ ಹೃದಯವು ಕೃತಾರ್ಥಭಾವದಿಂದ ತುಂಬಿ ಬರುವುದರಲ್ಲಿ ಸಂದೇಹವಿಲ್ಲ.

ಸುರಪನಾಲಯದಂತೆ ಮಂತ್ರಾಲಯಃ ಕರೆಸುವುದು
ಕಂಗೊಳಿಸುವುದು ನೋಳ್ಪ ಜನಕೆ
ಕಾಮಧೇನುವಿನಂತೆ ಇಪ್ಪ ಗುರುವರ ಸಾರ್ವಭೌಮ
ಸುಧೀಂದ್ರಸುತ ರಾಘವೇಂದ್ರ ಆಮಯಾದಿಹ
ಖಿಳ ತಮಿಶ್ರವೋಡಿಸುವ ಚಿಂತಾಮಣಿ
ಪ್ರಕಾಶದಂತಿಪ್ಪ ಬೃಂದಾವನದಿ



# ಅಹಲ್ಯಾಬಾಯಿ

ಅಹಲ್ಯಾ, ದ್ರೌಪದಿ, ಸೀತಾ, ತಾರಾ, ಮಂಡೋದರಿ ಮೊದಲಾದವರ ಹೆಸರುಗಳನ್ನು ಪ್ರತಿದಿನವೂ ಭಾರತೀಯರು ಸ್ಮರಿಸಿಕೊಳ್ಳುವುದುಂಟು. ಈ ಸ್ತೋತ್ರದಲ್ಲಿ ಬರುವ ಅಹಲ್ಯಾ ಹೆಸರು ಶ್ರೀರಾಮನಿಂದ ಉದ್ಧರಿತಳಾದ ಋಷಿ ಪತ್ನಿಯದಾಗಿರುವಳು. ಆದರೆ ಇಲ್ಲಿ ಹೇಳುತ್ತಿರುವ ವಿಷಯವು ಮಧ್ಯಯುಗದ ಭಾರತಕ್ಕೆ ಸಂಬಂಧಿಸಿದ ಉದಾತ್ತ ಮಹಿಳೆಯೊಬ್ಬಳ ಜೀವನ ಚರಿತ್ರೆಯ ವಿಷಯ. ಭಾರತದ ಯಾವ ಕ್ಷೇತ್ರಕ್ಕೇ ನೀವು ಭೇಟಿಯನ್ನಿತ್ತರೂ ಈ ಮಹಾತಾಯಿಯಿಂದ ರಕ್ಷಿಸಲ್ಪಟ್ಟ ದೇವಮಂದಿರಗಳನ್ನು ಕಾಣಬಹುದು. ಈ ಸಾಧ್ವೀ ಶಿರೋಮಣಿಯ ಜೀವನ ಭಾರತೀಯರೆಲ್ಲರಿಗೂ ಬೋಧಪ್ರದ ವಿಷಯ.

ಚೌನಡಿ ಔರಂಗಾಬಾದ ಜಿಲ್ಲೆಗೆ ಸೇರಿದ ಒಂದು ಹಳ್ಳಿ. ಗ್ರಾಮನಿವಾಸಿಗಳಾಗಿದ್ದ ಮಾಣಕೋಜಿ ಹಾಗೂ ಸುಶೀಲಾ ದಂಪತಿಗಳಲ್ಲಿ ಕ್ರಿ.ಶ. ೧೭೨೫ ಸುಮಾರಿನಲ್ಲಿ ಹೆಣ್ಣು ಮಗುವಿನ ಜನನವಾಯಿತು. ಅವಳು ಗ್ರಾಮಲಕ್ಷ್ಮಿಯಂತೆ ಬೆಳೆಯತೊಡಗಿದಳು. ಎಂಟು ವರ್ಷದ ಬಾಲಕಿಯಾಗಿದ್ದಾಗ ಒಂದು ಸಲ ದೇವಾಲಯದಲ್ಲಿ ಮಲ್ಹಾರ ರಾವ್ ಹೋಳ್‌ಕರರ ಗಮನಕ್ಕೆ ಬರುವಂತಾಳು. ಸಲಕ್ಷಣಯುಕ್ತಳಾದ ಇವಳನ್ನು ತಮ್ಮ ಮನೆಯ ಸೊಸೆಯಾಗಿ ತಂದುಕೊಳ್ಳಲು ನಿರ್ಧರಿಸಿದರು. ಅದಕ್ಕೆ

ಕಾರಣವೂ ಇತ್ತು, ಮಗನಾಗಿದ್ದ ಖಂಡೇರಾಯನು ಮಹಾ ಮುಂಗೋಪಿಯಾಗಿದ್ದ, ವಿಲಾಸಿಯಾಗಿದ್ದ. ಮಧ್ಯಪಾನಾಸಕ್ತನಾಗಿದ್ದ. ಅಂಥ ಮಗನನ್ನು ಸರಿಯಾದ ದಾರಿಗೆ ತರಬೇಕಾಗಿದ್ದಲ್ಲಿ ಬಡಕುಟುಂಬದಲ್ಲಿ ಹುಟ್ಟಿದ ಈ ಮಗು ಯೋಗ್ಯಳು ಎಂಬುದೇ ಅವರ ನಿರ್ಧಾರವಾಗಿತ್ತು. ತಮ್ಮ ಸಂಕಲ್ಪವು ಕೈಗೂಡುವಂತೆ ಅವರು ನೋಡಿಕೊಂಡರು.

ಮಲ್ಹಾರರಾಯರು ಸೊಸೆಗೆ ರಾಜ್ಯಾಂಗದ ಎಲ್ಲ ವ್ಯವಹಾರಗಳಲ್ಲಿ ಶಿಕ್ಷಣವು ದೊರೆಯುವಂತೆ ನೋಡಿಕೊಂಡರು. ಯುದ್ಧಕೌಶಲ್ಯದಲ್ಲಿ ಪರಿಣತಳಾಗುವಂತೆ ಮಾಡಿದರು. ಸಂಸ್ಕೃತ ಸಾಹಿತ್ಯದಲ್ಲಿ ಕಾವ್ಯ ನಾಟಕಗಳಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದರು, ಅವರಿಗೆ ಅಹಲ್ಯಾಬಾಯಿ ಸೊಸೆಯಾಗಿರದೆ ಮಗಳಾಗಿ ಬಾಳಿದಳು.

ಪತಿಯೇ ಪರದೈವ, ಪಾಲಿಗೆ ಬಂದುದೇ ಪಂಚಾಮೃತ ಎಂಬ ಭಾವನೆಯಲ್ಲಿ ಪೂರ್ಣ ನಂಬಿಕೆಯನ್ನಿಟ್ಟಿದ್ದ ಅಹಲ್ಯಾಬಾಯಿಯು ತನ್ನ ಸಂತತವಾದ ಪ್ರಯತ್ನದಿಂದ ಪತಿಯ ಮನಸ್ಸನ್ನೊಲಿಸಿಕೊಂಡಳು. ಒಂದು ಗಂಡು ಹಾಗೂ ಹೆಣ್ಣು ಮಗುವಿನ ತಾಯಿಯಾಗಿ ಹೋಳ್‌ಕರ ಮನೆತನಕ್ಕೆ ಸಂತಾನದ ಕುಡಿಯನ್ನೊದಗಿಸಿದಳು. ೧೭೫೪ರಲ್ಲಿ ಜಾಟರೊಂದಿಗೆ ಕುಂಭೇರಿ ಕೋಟೆಯಬಳಿ ಘನ, ಘೋರ ಯುದ್ಧ ನಡೆದಾಗ, ಈ ಯುದ್ದದಲ್ಲಿ ಅವಳು ಪತಿಯಾದ ಖಂಡೇರಾಯರನ್ನು ಕಳೆದುಕೊಳ್ಳ ವಂತಾಯಿತು. ಸತಿ ಹೋಗುವ ಸಿದ್ದತೆಯಲ್ಲಿದ್ದಾಗ ಪ್ರಜೆಗಳ ಅಗ್ರಹಕ್ಕೆ ಬೆಲೆಕೊಟ್ಟು ಮಾವನ ಸೇವೆಗೆಂದು ಬದುಕುಳಿದಳು. ರಾಜವೈಭವದ ಚಿಹ್ನೆಗಳನ್ನೆಲ್ಲ ತೊರೆದು ವಿರಾಗಿಣಿಯಂತೆ ಶುಭ್ರ ವಸ್ತ್ರಗಳನ್ನು ಧರಿಸಿ ಸದಾಕಾಲ ಪೂಜೆ, ಧ್ಯಾನಗಳಲ್ಲಿ ದಿನಗಳೆಯ ತೊಡಗಿದಳು.

೧೭೬೧ರಲ್ಲಿ ನಡೆದ ಪಾಣಿಪತ್ ಯುದ್ದದಲ್ಲಿ ಅಹಲ್ಯಾಬಾಯಿ ಸಹ ಭಾಗವಹಿಸಿದ್ದಳು. ಮರಾಠರಿಗಾದ ಸೋಲಿನಿಂದಾಗಿ ಉತ್ತರ ಭಾರತದ ಅನೇಕ ಸಣ್ಣಪುಟ್ಟರಾಜರು ಸ್ವತಂತ್ರರಾಗಲು ಪ್ರಯತ್ನಿಸತೊಡ ಗಿದ್ದರು. ಆಗ ರಘುನಾಥಪಂತ ಪೇಶ್ವೆ (ರಾಘೋಭರಾರಿ) ಮಿಂಚಿನಂತೆ

ಸಂಚಾರಮಾಡಿ ಸಿಂಧೇ ಹೋಳ್‌ಕರರ ಸಹಾಯದಿಂದ ಅವರೆಲ್ಲರ ಸೊಕ್ಕನ್ನಡಗಿಸಿದ. ಮುಂದೆ ೧೭೬೬ರಲ್ಲಿ ಮಲ್ಲಾರರಾವ್ ಹೋಳ್‌ಕರರು ನಿಧನ ಹೊಂದಿದರು. ಆಗ ಚಂದ್ರಚೂಡ ಎಂಬ ಬ್ರಾಹ್ಮಣನೊಬ್ಬನು ಅಬಲೆಯಾದ ಅಹಲ್ಯಾಬಾಯಿಯ ರಾಜ್ಯವನ್ನು ಕೈವಶಮಾಡಿಕೊಂಡಲ್ಲಿ ಉತ್ತರದಲ್ಲಿ ನೀವು ಸ್ವತಂತ್ರವಾಗಿ ರಾಜ್ಯಭಾರ ಮಾಡಬಹುದೆಂದು ರಾಘೋಬಾದಾದಾನಿಗೆ ಕಿವಿಯೂದಿದ. ಆತನ ಮಾತಿಗೆ ಮರುಳಾದ ರಾಘೋಬಾ ಅಪಾರ ಸೇನೆಯೊಂದಿಗೆ ಉಜ್ಜಯನಿಯ ಸಮೀಪದಲ್ಲಿರುವ ಕ್ಷಿಪ್ರಾನದಿಯ ದಂಡೆಯ ಮೇಲೆ ಸೇನಾಶಿಬಿರವನ್ನು ರಚಿಸಿ ಯುದ್ಧ ತಯಾರಿಯನ್ನು ನಡೆಸಿದ. ಆಗ ಪಂತ ಪ್ರಧಾನರಾಗಿದ್ದ ಪೇಶ್ವೆಯವರ ಸುಬೇದಾರಿಕೆಯ ಜವಾಬ್ದಾರಿಯಲ್ಲಿದ್ದ ಅಹಲ್ಯಾಬಾಯಿಯು ರಾಘೋಬಾ ಈತನಿಗೆ ಒಂದು ಪತ್ರವನ್ನು ಬರೆದಳು.

"ತುಕೋಜಿಯೊಂದಿಗೆ ನನ್ನ ಸೇನೆಯು ಕ್ಷಿಪ್ರಾ ನದಿಯ ಇನ್ನೊಂದು ದಡದಲ್ಲಿ ಸಿದ್ಧವಾಗಿ ನಿಂತಿದೆ. ನಾನು ನನ್ನ ಮಹಿಳಾಪಥಕವನ್ನೂ ಕಳಿಸುತ್ತಲಿದ್ದೇನೆ. ಒಂದು ವೇಳೆ ತಾವು ಈ ಯುದ್ಧದಲ್ಲಿ ಸೋತರೆ ಮಹಿಳೆಯರಿಂದ ಪರಾಜಿತರಾದ ಅವಮಾನಕ್ಕೆ ಗುರಿಯಾಗುವಿರಿ. ಒಂದು ವೇಳೆ ನೀವೇ ಗೆದ್ದಲ್ಲಿ ಅಬಲೆಯ ಮೇಲೆ ಆಕ್ರಮಣಮಾಡಿದಿರಿ ಎಂಬ ಅಪಖ್ಯಾತಿಗೆ ಗುರಿಯಾಗುವಿರಿ, ಆದುದರಿಂದ ವಿಚಾರಮಾಡಿ ಮುನ್ನಡೆಯಿಡುವುದು ವಿಹಿತ"

ಪುಣೆಯ ದರ್ಬಾರಿನವರು ರಾಘೋಬಾದಾದನಿಗೆ ಛೀಮಾರಿಹಾಕಿ ಪತ್ರಬರೆದರು. ಆಗ ಆತನು ಅಹಲ್ಯಾಬಾಯಿಗೆ ಪತ್ರವನ್ನು ಬರೆದ.

"ನಾವು ಆಕ್ರಮಣಕ್ಕಾಗಿ ಬಂದವರಲ್ಲ. ನಿಮ್ಮನ್ನು ಕಂಡು ಸಾಂತ್ವನದ ಮಾತಾಡಿ ಹೋಗಲು ಬಂದಿದ್ದೇವೆ."

ಈ ಪತ್ರಕ್ಕೆ ಉತ್ತರ ರೂಪದಲ್ಲಿ ಅಹಲ್ಯಾ ಬಾಯಿಯು, "ಹಾಗಾದರೆ ಈ ಸೈನ್ಯದ ಅಟ್ಟಹಾಸವೇಕೆ? ಈ ರಾಜ್ಯ ನಿಮ್ಮದು. ಈ ಮನೆಯೂ ನಿಮ್ಮದು. ಮಿತಪರಿವಾರದಿಂದ ಬಂದು ಹೋಗಲು

ಯಾವ ಅಭ್ಯಂತರವೂ ಇಲ್ಲ." ಅವಳ ಅಭಿಪ್ರಾಯದಂತೆ ರಾಘೋಬಾ, ಮಿತ ಪರಿವಾರದೊಂದಿಗೆ ಬಂದು ಅವಳನ್ನು ಭೇಟಿಯಾಗಿ ಮರಳಿದ.

ಪತಿ ಹಾಗೂ ಮಾವ ಇಬ್ಬರನ್ನೂ ಕಳೆದುಕೊಂಡ ಇವಳು ಇಂದೂರಿನಿಂದ ನರ್ಮದಾ ನದಿಯ ದಂಡೆಯ ಮೇಲಿರುವ ಮಹೇಶ್ವರ ರಾಜಧಾನಿಯನ್ನು ಬದಲಿಸಿದಳು. ಹಿಂದೂಪದ ಪಾದಶಾಹಿತ್ವದ ಶತ್ರುಗಳ ಸದ್ದಡಗಿಸಲು ಪೇಶ್ವೆಯರಿಗೆ ಸದಾಕಾಲವೂ ನೆರವಾಗಿ ನಿಂತಳು. ತನ್ನ ರಾಜ್ಯದಲ್ಲಿ ಮಲೆತು ನಿಂತಿದ್ದ ಮೋಕ್ಷಿಮಾ, ಸೋನಧೀ ಹಾಗೂ ಭಿಲ್ ಮತ್ತು ಗಣಪತರಾವ್ ಮರಾಠ ಇವರ ಬಂಡನ್ನಡಗಿಸಲು ತನ್ನೆಲ್ಲ ಸರದಾರರನ್ನು ಒಕ್ಕೂಡಿಸಿ ಯಾರು ಈ ಪುಂಡರ ಸೊಲ್ಲನ್ನಡಗಿಸುವರೋ ಅಂಥ ವೀರರಿಗೆ ನನ್ನ ಮಗಳನ್ನು ಧಾರೆ ಎರೆದು ಕೊಡುವುದಾಗಿ ಸಾರಿದಳು. ಯಶ್ವಂತರಾವ್ ಫಣಸೆ ಎಂಬ ತರುಣನು ಈ ಆಹ್ವಾನವನ್ನು ಸ್ವೀಕರಿಸಿದ. ಒಂದು ವರುಷ ಅವ್ಯಾಹತವಾಗಿ ಹೋರಾಡಿ ಪುಂಡರನ್ನೆಲ್ಲ ಸದೆ ಬಡಿದ. ಇದರಿಂದ ಕೊಟ್ಟ ಮಾತಿನಂತೆ ಅಹಲ್ಯಾ ಬಾಯಿಯು ಆ ತರುಣನಿಗೆ ತನ್ನ ಮಗಳನ್ನಿತ್ತು ವಿವಾಹ ಮಾಡಿದಳು.

ಅಹಲ್ಯಾಬಾಯಿ ಅತ್ಯಂತ ಧೀರ ಮಹಿಳೆಯಾಗಿದ್ದಳು. ಬಹು ದಕ್ಷವಾದ ಆಡಳಿತವು ಅವಳದಾಗಿತ್ತು. ಜಿಲ್ಲೆ, ತಹಶೀಲು ಹಾಗೂ ಪಂಚಾಯತಿ ಎಂಬುದಾಗಿ ತನ್ನ ರಾಜ್ಯವನ್ನು ವಿಂಗಡಿಸಿದಳು. ಪ್ರಜೆಗಳಿಗೆ ಅನ್ಯಾಯವಾಗದಂತೆ ಜಾಗರೂಕಳಾ ಗಿರುತ್ತಿದ್ದಳು. ರೈತರ ಕಲ್ಯಾಣಕ್ಕಾಗಿ ನಾನಾ ಯೋಜನೆಗಳನ್ನು ಸಿದ್ದಪಡಿಸಿದಳು. ಮಹೇಶ್ವರದ ಕೈಮಗ್ಗದ ಸೀರೆಗಳು ಭಾರತಾದ್ಯಂತ ಹೆಸರು ಗಳಿಸುವಂತಾದವು. ಮಲ್ಹಾರರಾಯರ ಕಾಲದಲ್ಲಿ ಎಪ್ಪತ್ನಾಲ್ಕು ಲಕ್ಷ ವರ್ಷಾದಾಯವಿದ್ದ ಇವಳ ರಾಜ್ಯದಲ್ಲಿ ಈಕೆಯ ಕಾಲದಲ್ಲಿ ಪ್ರತಿವರುಷ ಒಂದುನೂರು ಲಕ್ಷರೂಪಾಯಿಗಳ ಆದಾಯ ಬರುವಂತಾಯಿತು.

ಮಹಾರಾಷ್ಟ್ರದ ಪಂತ ಪ್ರಧಾನರು ಹೋಳ್‌ಕರ ಮನೆತನಕ್ಕೆ ಪ್ರತಿವರುಷ ನೂರುಲಕ್ಷ ಆದಾಯವಿರುವ ಜಹಗೀರಿಯನ್ನು

ದಯಪಾಲಿಸಿದ್ದರು. ಮಲ್ಹಾರರಾಯರು ನಿಧನರಾದಾಗ ಈ ಖಾಸಗೀ ಜಹಗೀರಿಯ ಹಣದ ಮೊತ್ತವು ಹದಿನಾರು ಕೋಟಿಯಷ್ಟು ಧನವು ಅವರ ಸ್ವಂತದ ಖಜಾನೆಯಲ್ಲಿತ್ತು. ಅಹಲ್ಯಾಬಾಯಿಯು ಆ ಹಣವನ್ನೆಲ್ಲ ಪ್ರಾಚೀನ ಭಾರತದ ತೀರ್ಥ ಕ್ಷೇತ್ರಗಳಲ್ಲಿರುವ ದೇವಾಲಯಗಳ ಪುನರುದ್ಧಾರಕ್ಕಾಗಿಯೂ, ಅಗ್ರಹಾರಗಳ ನಿರ್ಮಾಣಕ್ಕಾಗಿಯೂ, ವೇದಪಾಠಶಾಲೆಗಳನ್ನು ನಡೆಸಿಕೊಂಡು ಹೋಗುವುದಕ್ಕಾಗಿಯೂ, ಸ್ನಾನಘಟ್ಟಗಳನ್ನು ನಿರ್ಮಿಸುವದಕ್ಕಾಗಿಯೂ, ಪರ್ವಕಾಲಗಳಲ್ಲಿ ಪುಣ್ಯಕ್ಷೇತ್ರಗಳಲ್ಲಿ ದಾನಧರ್ಮಾದಿಗಳು ನಡೆಯುವದಕ್ಕಾಗಿಯೂ, ವಿನಿಯೋಗಿಸಿದಳು. ಕುರುಕ್ಷೇತ್ರ, ಕಾಶಿ, ಅಯೋಧ್ಯಾ, ಮಥುರಾ, ಗೋಕರ್ಣ, ಪಂಢರಪುರ ರಾಮೇಶ್ವರ ಹೀಗೆ ಒಂದೇ ಎರಡೇ ಯಾವ ಸ್ಥಳಕ್ಕೆ ಹೋದರೂ ಈ ದೇವಾಲಯ ಈ ಸ್ನಾನಘಟ್ಟ ಇವುಗಳೆಲ್ಲ ಅಹಲ್ಯಾಬಾಯಿಯಿಂದ ಕಟ್ಟಿಸಲ್ಪಟ್ಟಿವೆ ಎಂದು ಇಂದಿಗೂ ಸ್ಥಳ ನಿವಾಸಿಗಳು ತೋರಿಸುವುದುಂಟು.

ಈ ಮಹಾಸಾಧ್ವಿಯು ದಕ್ಷಿಣದಲ್ಲಿರುವ ರಾಮೇಶ್ವರ, ಕಂಚಿ ಹಾಗೂ ತಿರುಪತಿ ಕ್ಷೇತ್ರಗಳಲ್ಲಿಯೂ ಸಹ ಅನೇಕ ಸೇವೆ ಮಾಡಿದಳೆಂದು ಇಂದೂರಿನ ಜನರು ಹೇಳುವುದುಂಟು. ಆದರೆ ಆ ಮಾತಿಗೆ ಸಾಕ್ಷಿಭೂತವಾಗಿ ನಾವು ಕೆಲವಾದರೂ ದಾಖಲೆಗಳನ್ನು ಹುಡುಕಿ ತೆಗೆಯಬೇಕಾಗಿದೆ. ಕಾಲಾವಕಾಶವು ಕಡಿಮೆ ಇದ್ದುದರಿಂದ ಈ ಕಾರ್ಯವನ್ನು ನಾನು ಸಾಧಿಸಲಾಗಲಿಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ.

ಈ ತಾಯಿಯ ಕೀರ್ತಿಯನ್ನು ಕೇಳಿದ ಅಂದಿನ ಕಾಲದ ಸುಪ್ರಸಿದ್ಧ ಕವಿಯಾಗಿದ್ದ "ಖಯಾಲ ರಾಸು" ಎಂಬಾತನು "ಅಹಲ್ಯಾ ಕಾಮಧೇನು" ಎಂಬ ಹೆಸರಿನ ಕಾವ್ಯವನ್ನೇ ರಚಿಸಿದ್ದಾನೆ. ಅದೇ ರೀತಿಯಲ್ಲಿ ಮರಾಠಿ ಕವಿ ಮೋರೋ ಪಂತನಂತೂ ತನ್ನ ಕಾವ್ಯದಲ್ಲಿ "ಅಮ್ಮ ನೀನು ಬೇರೆಯಲ್ಲ ಈ ಗಂಗಾಮಾತೆ ಬೇರೆಯಲ್ಲ, ನೀವಿಬ್ಬರೂ ಜನ ಕಲ್ಯಾಣಕ್ಕಾಗಿ, ಭಾರತೀಯರ ಉದ್ಧಾರಕ್ಕಾಗಿ ಈ ಪುಣ್ಯಭೂಮಿಯಲ್ಲಿ ನಮಗೆ ಕಾಣುವಂತಾಗಿರುವಿರಿ" ಎಂದು ವರ್ಣಿಸಿದ್ದಾನೆ.

ಕೈಹಿಡಿದು ಬಂದು ಪತಿ, ಪಿತೃವಾತ್ಸಲ್ಯದಿಂದ ಅವಳನ್ನು ಬೆಳೆಸಿದ ಮಾವ, ಹೆತ್ತಮಗ, ವೀರನಾದ ಅಳಿಯ ಹಾಗೂ ಮಗಳನ್ನು ಕಳೆದುಕೊಂಡ ಈ ಸಾಧ್ವಿಯು ತನ್ನ ಪ್ರಜೆಗಳನ್ನೇ ಮಕ್ಕಳಂತೆ ಜೋಪಾನಮಾಡಿದಳು. ಭಾರತೀಯ ಸಂಸ್ಕೃತಿಯನ್ನುಳಿಸುವುದೇ ತನ್ನ ಉಸಿರು ಎಂಬಂತೆ ನಡೆದುಕೊಂಡಳು. ಅರವತ್ತು ವರುಷಗಳ ಕಾಲ ಹೋಳ್ಕರ ಮನೆತನದ ಸೊಸೆಯಾಗಿ ಬಾಳಿದ ಇವಳು ಮುವತ್ತು ವರುಷಗಳ ಕಾಲ ರಾಜ್ಯಭಾರವನ್ನು ನಿರ್ವಹಿಸಿದಳು.

ಧರ್ಮಪರಾಯಣಳಾಗಿ ಬಾಳಿದ ಈ ಸಾಧ್ವಿ ೧೭೯೫ರಲ್ಲಿ ತನ್ನ ಇಹಲೋಕದ ಯಾತ್ರೆಯನ್ನು ಮುಗಿಸಿದಳು. ಇಂದು ಅವಳು ನಮ್ಮ ಬಾಹ್ಯಚಕ್ಷುವಿಗೆ ದೂರಾಗಿದ್ದರೂ ಅವಳಿಂದ ನಿರ್ಮಿತವಾದ ದೇವಾಲಯಗಳು, ಸ್ನಾನಘಟ್ಟಗಳು, ಧರ್ಮಛತ್ರಗಳು ಇಂದಿಗೂ ಆ ತಾಯಿಯ ದಿವ್ಯದರ್ಶನ ಮಾಡಿಸಲು ನಮ್ಮ ಕಣ್ಮುಂದೆ ಉಳಿದುಕೊಂಡು ಬಂದಿರುವುದು ಭಾರತೀಯರಿಗೆ ಒಂದು ರೀತಿಯ ಸಮಾಧಾನವನ್ನುಂಟು ಮಾಡುವುದು.



# ಶ್ರೀ ರಘೂತ್ತಮ ತೀರ್ಥರು-ಪ್ರಾಚೀನ ಗ್ರಂಥಕಾರರ ಹೃದ್ಗತವನ್ನು ತೋರಿಸಿದ ಮಹಾನುಭಾವರು

---

ದ್ವೈತಮತ ಪ್ರಚಾರಕ್ಕಾಗಿ ಶ್ರೀಮದಾನಂದ ತೀರ್ಥರು ಘಟ್ಟದ ಮೇಲಿರುವ ನಾಲ್ಕು ಜನ ಮಹಾದಿಗಂತಿಗಳನ್ನಾರಿಸಿ ಅವರಿಗೆ ಯತ್ಯಾಶ್ರಮವನ್ನಿತ್ತರು. ಇವರಲ್ಲಿ ಮೊದಲಿನವರಾದ ಪದ್ಮನಾಭತೀರ್ಥರು ಪುಣತಾಂಬೆಯವರಾದರೆ ನರಹರಿ ತೀರ್ಥರು ಓಡಿಸಾದಿಂದ ಬಂದವರು. ಇನ್ನು ಮಾಧವತೀರ್ಥ ಹಾಗೂ ಅಕ್ಷೋಭ್ಯ ತೀರ್ಥರಂತೂ ಭೀಮರಥೀ ತೀರದವರೆನಿಸಿ ಕೊಂಡಿದ್ದರು. ಮುಂದೆ ಇದೇ ಪರಂಪರೆಯು ಬೆಳೆಯುತ್ತ ಹೋದುದರಿಂದ ಜನಸಾಮಾನ್ಯರು ಅವರಾಳಿದ ಪೀಠವನ್ನು ಉತ್ತರಾದಿಮಠವೆಂದು ಗುರುತಿಸತೊಡಗಿದರು. ಇದಲ್ಲದೆ "ಉತ್ತರೋ ಗೋಪತಿರ್ಗೋಪ್ತಾ" ಎಂಬ ಪರಂಪರೆಯೂ ಈ ಮಠಕ್ಕುಂಟು.

ವಿಜಾಪುರ ಜಿಲ್ಲೆಯ ಇಂಡಿ ಹಾಗೂ ಗುಲಬರ್ಗಾ ಜಿಲ್ಲೆಯ ಅಬಜಲಪುರ ತಾಲ್ಲೂಕುಗಳನ್ನು ಇಬ್ಭಾಗವಾಗಿ ಮಾಡಿದ ಪ್ರವಾಹವನ್ನೇ ಭೀಮಾನದಿ ಎಂದು ಗುರುತಿಸುವದುಂಟು. ಆಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದ ಮಾಧವತೀರ್ಥರು ಈ ಭೀಮಾನದಿಯ ದಂಡೆಯಲ್ಲಿ ಬಹಳಕಾಲ ವಾಸವಾಗಿದ್ದು ಅಲ್ಲಿಯೇ ವೃಂದಾವನಸ್ಥರಾದರು. ಇವರ ನಂತರ ವಿದ್ಯಾನಿಧಿ ತೀರ್ಥರ ಕಾಲದಲ್ಲಿ, ಈ ಗ್ರಾಮದಲ್ಲಿ ಬಹುದೊಡ್ಡ ವಿದ್ಯಾಕೇಂದ್ರವು ಪ್ರಸಿದ್ಧಿಗೆ ಬರುವಂತಾಯಿತು. ರಾಷ್ಟ್ರದ ನಾನಾ

ಭಾಗಗಳಿಂದ ವಿದ್ಯಾರ್ಥಿಗಳು ಈ ಕ್ಷೇತ್ರವನ್ನು ಹುಡುಕಿಕೊಂಡು ಬರುತ್ತಿದ್ದರು. ಹೀಗೆ ವಲಸೆಬಂದ ಶೇಷಾದ್ರಿಗಳೆಂಬುವವರಿಗೆ ವಿದ್ಯಾನಿಧಿಗಳ ಅನುಗ್ರಹದಿಂದ ಪುತ್ರ ಸಂತಾನವಾಯಿತು. ಮಗುವಿಗೆ ವರದ ರಾಜನೆಂಬ ನಾಮಕರಣ ಮಾಡಿದರು. ಈ ಬಾಲಕನನ್ನು ಶ್ರೀ ರಘುನಾಥತೀರ್ಥರು ತಮ್ಮೊಂದಿಗೆ ಕರೆದುಕೊಂಡು ಹೋಗಿ ದಿಗಂತ ಪಂಡಿತನನ್ನಾಗಿ ಮಾಡಿದರು. ಆ ಮಹಾನುಭಾವರ ಕಾಲದಲ್ಲಿ ಕೃಷ್ಣಾ ತೀರದ ಕೊಪ್ಪರ ಕ್ಷೇತ್ರದಲ್ಲಿ ಶ್ರೀ ಲಕ್ಷ್ಮೀ ನಾರಾಯಣ ಮುನಿಗಳು, ವ್ಯಾಸರಾಯರು ಹಾಗೂ ರಘುನಾಥ ತೀರ್ಥರ ಸಮ್ಮಿಳನವಾಯಿತು. ವ್ಯಾಸರಾಯರಿಂದ ರಚಿತವಾದ ಗ್ರಂಥದ ವಿಮರ್ಶೆಯ ಕಾಲದಲ್ಲಿ (ಅನುಕ್ತ ಕಥ ನಾತ್ ಕ್ವಾಪಿ) ವರದರಾಜರು ತೋರಿಸಿದ ಪಾಂಡಿತ್ಯಕ್ಕೆ ಸಂತುಷ್ಟರಾದ ಗುರುಗಳು ತಮ್ಮ ಶಿಷ್ಯನಿಗೆ "ಆದ್ಯತ್ವ" ಮರ್ಯಾದೆಯನ್ನು ಅನುಗ್ರಹಿಸಿದರು. ಹಾಗೆಯೇ ಲಕ್ಷ್ಮೀ ನಾರಾಯಣ ಮುನಿಗಳಿಗೆ "ಶ್ರೀಪಾದರಾಜರು" ಎಂದು ಸಂಭೋಧಿಸಿದ ನಿಮಿತ್ತದಿಂದ ಇಂದಿಗೂ ಆ ಪರಂಪರೆಯನ್ನು ಶ್ರೀಪಾದರಾಜ ಮಠವೆಂದೇ ಕರೆಯುವದು ರೂಢಿಯಲ್ಲಿರುವುದು.

ಶ್ರೀ ರಘುನಾಥತೀರ್ಥರ ನಂತರ ಪಟ್ಟಕ್ಕೆ ಬಂದವರು ಶ್ರೀ ರಘುವರ್ಯ ತೀರ್ಥರು. ಇವರಾದರೂ ಸಹ ಬಹಳಕಾಲ ಮಣೂರಿನಲ್ಲಿಯೇ ವಾಸವಾಗಿದ್ದರು. ಶ್ರೀಮಠದ ಘನತೆಗೆ ತಕ್ಕಂತಹ ಅಧಿಕಾರಿಯನ್ನು ದಯಪಾಲಿಸಲು ಮೂಲರಾಮ ಚಂದ್ರನಲ್ಲಿ ಪ್ರಾರ್ಥಿಸುತ್ತಿದ್ದರು. ಆ ದೇವನ ಸೂಚನೆಯ ಮೇರೆಗೆ ಎಂಟು ವರುಷದ ಬಾಲ ವಟುವಿಗೆ ಸಂನ್ಯಾಸ ದೀಕ್ಷೆಯನ್ನಿತ್ತು ರಘೋತ್ತಮ ತೀರ್ಥರೆಂದು ನಾಮಕರಣ ಮಾಡಿ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭೀಷೇಕ ಮಾಡಿದರು. (ಇವರ ಕಾಲವು ೧೪೭೪ರಿಂದ ೧೫೧೦ರವರೆಗೆ) ಬಾಲ ಯತಿಗಳ ವಿದ್ಯಾಭ್ಯಾಸದ ಹೊಣೆಯನ್ನು ಶ್ರೀಮಠದ ಹಿರಿಯ ವಿದ್ವಾಂಸರಾಗಿದ್ದ ಆದ್ಯ ವರದ ರಾಜಾಚಾರ್ಯರಿಗೊಪ್ಪಿಸಲಾಯಿತು. ಆಚಾರ್ಯರ ಜೀವನದಲ್ಲಿ ಇದೊಂದು ಸುವರ್ಣ ಕಾಲವೆನಿಸಿತು. ಬಹು

ಭಕ್ತಿಯಿಂದ ಬಾಲ ಯತಿಗಳಿಗೆ ಪಾಠ ಪ್ರವಚನಗಳನ್ನು ಕಲಿಸಲಾರಂಭಿಸಿದರು. ವಯಸ್ಸು ಚಿಕ್ಕದಾದರೂ ಶ್ರೀರಘೂತ್ತಮರು ಅತ್ಯಂತ ಮೇಧಾವಿಗಳಾದುದರಿಂದ ಏಕ ಪಾಠಿಗಳೆಂಬ ನಂಬಿಕೆಯು ಆಚಾರ್ಯರಿಗೆ ಮನದಟ್ಟಾಗತೊಡಗಿತು. ಗುರು-ಶಿಷ್ಯರ ಬಾಂಧವ್ಯವು ಹಾಲು ಜೇನಿನಂತೆ ಬಹು ಅನ್ಯೋನ್ಯವಾಗಿತ್ತು.

ಪೂಜನೀಯರಾದ ಶ್ರೀ ರಘೋತ್ತಮ ತೀರ್ಥರ ಚರಿತ್ರೆಯಲ್ಲಿ ಅತ್ಯಂತ ಮಹತ್ವ ಪೂರಿತವಾದ ಅನೇಕ ಘಟನೆಗಳು ದೊರೆಯುತ್ತವೆ. ಅವರ ಸ್ಮರಣೆಯು ಜೀವನದ ಶಾಂತಿಗೆ ಮಾರ್ಗದರ್ಶನೋಪಾದಿಯಲ್ಲಿದೆ. ಇಂಥ ಮಹಾನುಭಾವರ ಕಾಲದಲ್ಲಿಯೂ ಸಹ ಒಂದು ವಿಚಿತ್ರ ಘಟನೆ ನಡೆದು ಹೋಗಿದೆ ಎಂದು ಹೇಳಲಾಗಿದೆ. ಗುರುಗಳು ಭೀಮರಥಿಯಲ್ಲಿ ಮಿಂದು ಅನ್ಹಿಕದಲ್ಲಿ ತಲ್ಲೀನರಾಗಿದ್ದಾಗ ಅಂದಿನ ದ್ವಾದಶಿಯ ಗಳಿಗೆಯು ಮೀರಿ ಹೋಗುವದೆಂಬ ಕಾರಣದಿಂದ ವರದರಾಜಾಚಾರ್ಯರು ಅಂಬರೀಷ ಮಹಾರಾಜನಂತೆ ತೀರ್ಥ ಪ್ರಾಶನ ಮಾಡಿದರು ಎಂದು ಹೇಳಿದ ಗ್ರಂಥಕಾರರು ಮುಂದೆ ಅದೇ ಗ್ರಂಥದಲ್ಲಿ ದಳಪತಿಯು ಭೋಜನಕ್ಕೆ ಹೇಳಿದಾಗ ಇಂಥ ಘಟನೆ ನಡೆಯಿತೆಂದು ವಿವರಣೆಯನ್ನಿತ್ತಿದ್ದಾರೆ. ಒಂದು ರೀತಿಯಲ್ಲಿ ಇದು ವಿರೋಧಾಭಾಸ ವೆಂದೆನಿಸಿದರೂ ಸಹ ಸತ್ಕಥಾ ಎಂಬ ಗ್ರಂಥದಲ್ಲಿ ಇದನ್ನು ಕಾಣುತ್ತೇವೆ. ಆದರೆ ಶ್ರೀ ರಘೋತ್ತಮ ತೀರ್ಥರ ಸಮಕಾಲೀನರ ಗ್ರಂಥದಲ್ಲಾಗಲೀ ಅಥವಾ ಅನಂತರ ನೂರಾರು ವರುಷಗಳಿಂದ ಬಂದ ಗ್ರಂಥಗಳಲ್ಲಾಗಲೀ ಈ ಘಟನೆಯ ಉಲ್ಲೇಖವು ಕಾಣಬರುವುದಿಲ್ಲ. ಅಲ್ಲದೇ ಅದ್ವಯವಂಶಪ್ರದೀಪ ಎಂಬ ಗ್ರಂಥದಲ್ಲಿ ಶ್ರೀ ರಘುನಾಥರಿಂದ ಕೊಡಲ್ಪಟ್ಟ ಅಧ್ಯಕ್ಷದ ಮಾನ ಮರ್ಯಾದೆಗಳೆಲ್ಲ ಮುಂದೆ ಅನೂಚಾನವಾಗಿ ನಡೆದುಕೊಂಡು ಬರುವಂತೆ ಶ್ರೀ ರಘೋತ್ತಮ ತೀರ್ಥರು ತಾಮ್ರ ಶಾಸನ ಹಾಕಿಕೊಟ್ಟ ಉಲ್ಲೇಖವಿದೆ. ಅದರ ನಂತರ ಬಂದ ಪ್ರತಿಯೊಬ್ಬ ಪೀಠಾಧಿಪತಿಗಳು ಅದನ್ನು ಪಾಲಿಸಿಕೊಂಡು ಬಂದಿದ್ದಾರೆ. ಆದುದರಿಂದ ಇದೊಂದು ಕಲ್ಪಿತ ಘಟನೆ ಎಂದೆನಿಸುವುದರಲ್ಲಿ ಸಂದೇಹವಿಲ್ಲ.

ಪ್ರಾತಃಸ್ಮರಣೀಯರೆನಿಸಿದ ಶ್ರೀ ರಘೋತ್ತಮರು ಒಂದು ದಿನ ತಾವೇ ಸುಧಾ ಗ್ರಂಥವನ್ನು ಪಾಠ ಹೇಳುವುದರಲ್ಲಿ ತಲ್ಲೀನರಾದುದನ್ನು ಕಂಡ ವರದರಾಜಾಚಾರ್ಯರಿಗೆ ತಮ್ಮ ಬಾಳು ಧನ್ಯ, ತಾವು ಕೃತ ಕೃತ್ಯರಾದರೆಂಬ ಭಾವ ಮೂಡುವಂತಾಯಿತೆಂದು ಅದೇ ಗ್ರಂಥಕಾರರು ಹೇಳಿದುದರಿಂದ ಈ ವಿಷಯವನ್ನು ಸಂಕ್ಷೇಪಗೊಳಿಸುವದು ವಿಹಿತವೆನಿಸುತ್ತದೆ. (ಇದೊಂದು ಆಧಾರ ರಹಿತವಾದ ಕಟ್ಟುಕಥೆ).

ಶ್ರೀ ರಘೋತ್ತಮ ತೀರ್ಥರು ತಮ್ಮ ಕಾಲದಲ್ಲಿ ಅತ್ಯಂತ ವಿರಕ್ತರೂ ಹಾಗು ಮೇಧಾವಿಗಳಾದ ಇಬ್ಬರು ಶಿಷ್ಯರನ್ನಾರಿಸಿ ಅವರಿಗೆ ಸನ್ಯಾಸ ದೀಕ್ಷೆಯನ್ನಿತ್ತು ಒಬ್ಬರಿಗೆ ವೇದೇಶತೀರ್ಥರೆಂದೂ ಇನ್ನೊಬ್ಬರಿಗೆ ವೇದವ್ಯಾಸ ತೀರ್ಥರೆಂದೂ ನಾಮಕರಣ ಮಾಡಿದ್ದಾರೆ. ಶ್ರೀವೇದೇಶ ತೀರ್ಥರು ಮಣೂರಿನಲ್ಲಿರುವ ವೇದಾಂತ ಪಾಠಶಾಲೆಯ ಮೇಲ್ವಿಚಾರಣೆಯ ಭಾರವನ್ನು ನಿರ್ವಹಿಸಿದರು. ಇದರಿಂದಾಗಿ ಯಾದವಾರ್ಯರಂಥ ಮಹಾನ್ ಟಿಪ್ಪಣಿಕಾರರನ್ನು ನಾವು ಪಡೆಯುವಂತಾಯಿತು. ಅಲ್ಲದೇ ಶ್ರೀ ಮಾಧವತೀರ್ಥರ ಸನ್ನಿಧಾನದಲ್ಲಿಯೇ ಅವರು ತಮ್ಮ ಪಾರ್ಥಿವ ದೇಹವನ್ನು ತ್ಯಜಿಸಿದರು. ಆದುದರಿಂದ ಶ್ರೀ ಮಾದವತೀರ್ಥರ ವೃಂದಾವನದ ಪಕ್ಕದಲ್ಲಿಯೇ ವೇದೇಶತೀರ್ಥರ ವೃಂದಾನವಿದ್ದು ಪ್ರತಿ ವರುಷವೂ ಬಹು ವಿಜೃಂಭಣೆಯಿಂದ ಆರಾಧನೆಗಳು ನಡೆಯುತ್ತಾ ಬಂದಿರುವದು ಸಮಾಧಾನದ ವಿಷಯವಾಗಿರುವದು.

ಶ್ರೀ ರಘೋತ್ತಮ ತೀರ್ಥರು ತಮ್ಮ ಪ್ರಾಚೀನರಿಂದ ರಚಿತವಾದ ಗ್ರಂಥಗಳಿಗೆಲ್ಲ ಟೀಕೆಯನ್ನು ರಚಿಸಿದ್ದಾರೆ. ಅವುಗಳಲ್ಲಿ (೧) ತತ್ವಪ್ರಕಾಶಿಕಾ ಭಾವಬೋಧ, (೨) ಗೀತಾ ಭಾಷ್ಯ ಪ್ರಮೇಯ (ದೀಪಿಕಾ) ಭಾವ ಬೋಧ, (೩) ಬ್ರಹದಾರಣ್ಯ ಭಾವಬೋಧ, (೪) ವಿಷ್ಣುತತ್ವ ನಿರ್ಣಯ ಭಾವಬೋಧ ಮತ್ತು (೫) ನ್ಯಾಯವಿವರಣ ಭಾವಭೋದ. ಇವೇ ಮೊದಲಾದ ಅಭೂತ ಪೂರ್ವ ಟಿಪ್ಪಣಿಗಳನ್ನು ಮಾಧ್ವ ಲೋಕಕ್ಕೆ ಅನುಗ್ರಹಿಸಿದ್ದಾರೆ. ಗ್ರಂಥರಚನಾಕಾರ್ಯದಲ್ಲಿ "ಸ್ವ ಶಕ್ತ್ಯಾ" ಎಂಬ ಪದ

ಪ್ರಯೋಗವನ್ನು ಮಾಡಿದ್ದಾರೆ ಪ್ರಾಚೀನರ ಹೃದ್ಗತವನ್ನು ತೆರೆದಿಡುವದಷ್ಟೇ ನನ್ನ ಕೆಲಸವೆಂದು ಹೇಳಿಕೊಂಡಿದ್ದಾರೆ. ಇದರಿಂದಾಗಿಯೇ ಈ ಮಹಾನುಭಾವರನ್ನು ಸಂಸ್ಕೃತ ಲೋಕವು ಭಾವ ಬೋಧಕರರೆಂದೇ ಗುರುತಿಸಿದೆ. ಇವರ ಶೈಲಿ ಬಹು ಬೋಧಪ್ರದವಾದುದು, ಅರ್ಥಗರ್ಭಿತವಾದುದು. ದ್ವೈತ ವೇದಾಂತಾಭ್ಯಾಸಿಗಳಿಗೆಲ್ಲಾ ಇವರ ಗ್ರಂಥಗಳು ದಾರಿ ದೀಪವಾಗಿ ಪರಿಣಮಿಸುವಂತಹವುಗಳಾಗಿವೆ. ಈ ಮಹಾನುಭಾವರ ಗ್ರಂಥದ ಸಾರ ಸರ್ವಸ್ವವೆಲ್ಲಾ ಸರಿಯಾದ ರೀತಿಯಲ್ಲಿ ನಮಗೆ ಮನದಟ್ಟಾಗುವಂತೆ ಮಾಡುವ ಗುರುಗಳನ್ನು ಸುದೈವದಿಂದ ಇಂದು ನಾವು ಪಡೆದುಕೊಂಡಿದ್ದೇವೆ. ಭಾವ ಬೋಧಕಾರರ ಭಾವವನ್ನು ಜೀರ್ಣಿಸಿಕೊಂಡ ಮಹಾನುಭಾವರು ಇಂದು ಕಾಣಸಿಗುತ್ತಾರೆ.

ಶ್ರೀ ರಘೋತ್ತಮರ ಕಾಲದಲ್ಲಿ ಇನ್ನೊಂದು ಅತ್ಯಂತ ಮಹತ್ವದ ಘಟನೆಯು ನಡೆದು ಹೋಗಿದೆ. ಹಿಂದೆ ಶ್ರೀಪಾದರಾಜರನ್ನು ಭೇಟಿಯಾಗಲು ಬಂಗಾಲದಿಂದ ಪಕ್ಷಧರ ಮಿಶ್ರ ಎಂಬ ಪಂಡಿತರು ಶಿಷ್ಯ ಸಮೇತರಾಗಿ ಮುಳುಬಾಗಿಲದವರೆಗೆ ಬಂದು ಹೋದರೆಂಬ ಐತಿಹ್ಯವಿದೆ. (ಈ ಲೇಖಕನಿಗೆ ಕೇಂದ್ರ ಸಾಹಿತ್ಯ ಅಕಾಡಮಿಯ ಅನುದಾನವು ಲಭಿಸಿದಾಗ ಮಿಥಿಲಾ ನಗರದವರೆಗೂ ಹೋಗಿ ಬಂದಿದ್ದಾನೆ). ಈ ಮಿಶ್ರಾ ಕುಟುಂಬವು ಕರ್ನಾಟಕದಿಂದ ಆ ಭಾಗಕ್ಕೆ ವಲಸೆ ಹೋದ ಕುಟುಂಬದ ಆಶ್ರಿತನೆಂದೆನಿಸಿಕೊಳ್ಳುತ್ತಾನೆ. ಚಾಲುಕ್ಯರು ೨೦೦ ವರುಷ ಮಿಥಿಲಾ ರಾಜ್ಯವನ್ನಾಳಿದ್ದಾರೆ. ಆ ಕುಟುಂಬದ ತಾಮ್ರ ಶಾಸನವು ದೊರೆತಿದೆ ಅದನ್ನು ಕರ್ಮವೀರ ದೀಪಾವಳಿ ಸಂಚಿಕೆಯಲ್ಲಿ ಮುದ್ರಿಸಲಾಗಿದೆ). ಮುಂದೆ ರಘೋತ್ತಮರ ಕಾಲದಲ್ಲಿ ಮಧುಸೂದನ ಸರಸ್ವತಿಗಳೆಂಬ ವಿದ್ವಾಂಸರು ವ್ಯಾಸರಾಜರಿಂದ ರಚಿತವಾದ ನ್ಯಾಯಾಮೃತವೆಂಬ ಗ್ರಂಥವನ್ನು ಖಂಡನೆ ಮಾಡಿ "ಅದ್ವೈತ ಸಿದ್ಧಿ" ಎಂಬ ಗ್ರಂಥವನ್ನು ರಚಿಸಿದ ಸಮಾಚಾರವು ತಿಳಿಯಿತು, ಆಗ ತಕ್ಷಣವೇ ಶ್ರೀ ರಘೋತ್ತಮರು ತಮ್ಮ ನೆಚ್ಚಿನ ಶಿಷ್ಯರಾಗಿದ್ದ ತ್ರ್ಯಂಬಕೇಶ್ವರ ನಿವಾಸಿಗಳಾದ ವ್ಯಾಸ ರಾಮಾಚಾರ್ಯರನ್ನು ಏಕಾಂತದಲ್ಲಿ ಕೂಡಿಸಿಕೊಂಡು ನವದ್ವೀಪದವರೆಗೂ ಹೋಗಿ ಮಧುಸೂದನ ಸರಸ್ವತಿಗಳಲ್ಲಿ ಶಿಷ್ಯರಂತೆ

ನಡೆದುಕೊಂಡು ಅವರು ಹೇಳುವ ದೋಷಗಳನ್ನೆಲ್ಲ ಚೆನ್ನಾಗಿ ಅಭ್ಯಾಸ ಮಾಡಿ ಅವರ ಅದ್ವೈತ ಸಿದ್ಧಿ ಗ್ರಂಥಕ್ಕೆ ೨೧೦ ಮಂಡನಾ ರೂಪದಲ್ಲಿ ಗ್ರಂಥ ರಚಿಸಬೇಕೆಂಬುದಾಗಿ ವಚನ ತೆಗೆದುಕೊಂಡು ತುಂಬಿದ ಹೃದಯದಿಂದ ಆಶೀರ್ವಾದ ಮಾಡಿ ನವ ದ್ವೀಪಕ್ಕೆ ಕಳುಹಿಸಿಕೊಟ್ಟರು. ಗುರುಗಳ ಅಜ್ಞಾನುಸಾರವಾಗಿ ವ್ಯಾಸರಾಮಾಚಾರ್ಯರು ಮಧುಸೂದನ ಸರಸ್ವತಿಗಳ ಬಳಿ ಇದ್ದು ಅವರಿಂದ ಅದ್ವೈತ ತತ್ವ ಪ್ರತಿಪಾದನೆಯ ಅನೇಕ ಘಟ್ಟಗಳನ್ನು ತಿಳಿದು ಅವಕ್ಕೆಲ್ಲ ಉತ್ತರ ರೂಪವಾಗಿ "ನ್ಯಾಯಮ್ರಾತ ತರಂಗಿಣಿ" ಎಂಬ ಗ್ರಂಥವನ್ನು ಮಂಡನ ರೂಪವಾಗಿ ರಚಿಸಿದರು. ಈ ಗ್ರಂಥವು ದ್ವೈತಾದ್ವೈತಗಳನ್ನು ಕುರಿತು ವಿಮರ್ಶೆ ಮಾಡುವವರಿಗೆಲ್ಲಾ ಬಹು ಮಹತ್ವಪೂರಿತವಾದ ಮೇರು ಕೃತಿ ಎಂದೆನಿಸಿ ಕೊಂಡಿರುವುದು. ವ್ಯಾಸರಾಮಾಚಾರ್ಯರು ಗುರುಗಳಿಗಿತ್ತ ವಚನದಂತೆ ನಡೆದುಕೊಂಡರು ತಾವು ಪುನೀತರಾವರದಲ್ಲದೇ ಮುಂದಿನ ಅಭ್ಯಾಸಿಗರಿಗೆಲ್ಲಾ ತಮ್ಮ ಗ್ರಂಥವು ದಾರಿದೀಪವಾಗುವಂತೆ ನೋಡಿಕೊಂಡರು.

ಶ್ರೀ ರಘೋತ್ತಮ ತೀರ್ಥರ ಕಾಲದಲ್ಲಿ ದಕ್ಷಿಣಾ ಪಥದಲ್ಲಿ ಅನ್ಯಮತೀಯರ ಪ್ರಭಾವವು ಹೆಚ್ಚಾಗಿ ಪ್ರವರ್ಧಮಾನಕ್ಕೆ ಬರುವಂತಾಗಿತ್ತು. ವಿಜಯನಗರವು ಸಂಪೂರ್ಣ ಪತನಾವಸ್ಥೆಯಲ್ಲಿತ್ತು. ಬಹಮನಿ ರಾಜ್ಯವು ಐದು ಭಾಗವಾಗಿ ವಿಜಾಪುರದ ಆದಿಲ್ ಶಾಹೀ ಗೋವಳಿಕೊಂಡದ ಕುತುಬ್ ಶಾಹೀ ರಾಜ್ಯಗಳು ದಕ್ಷಿಣಾ ಪಥವನ್ನೆಲ್ಲ ತಮ್ಮ ಸ್ವಾಧೀನ ಪಡೆಸಿಕೊಳ್ಳುವ ಸನ್ನಾಹದಲ್ಲಿದ್ದವು. ಇಂಥ ವಿಕ್ಷಿಪ್ತ ಪರಿಸ್ಥಿತಿಯಲ್ಲಿ ಶ್ರೀ ರಘೋತ್ತಮರು ಶ್ರೀಮದುತ್ತರಾದಿ ಮಠವನ್ನು ಮಹಾ ಸಂಸ್ಥಾನವನ್ನಾಗಿ ಪರಿವರ್ತನಗೊಳಿಸಿದರು. ಒಂದು ಸಾಮ್ರಾಜ್ಯಕ್ಕೆ ಅಗತ್ಯವಾಗಿ ಬೇಕಾದ ಅಧಿಕಾರಿ ವರ್ಗದವರನ್ನೆಲ್ಲ ನಿಯಮಿಸಿದರು. ಶ್ರೀಮಠದಲ್ಲಿ ದಿವಾನರು, ಪಾರುಪತ್ಯಗಾರರು, ಆನೆ, ಒಂಟೆ, ಕುದುರೆ, ಪಲ್ಲಕ್ಕಿ, ಪತಾಕೆಗಳು ವಿಜಯ ದುದುಂಭಿಗಳು ಇವೇ ಮೊದಲಾದ ವೈಭವಗಳಿಂದ ಶ್ರೀಮಠದ ಸಂಪತ್ತನ್ನು ಸರಿಯಾದ ರೀತಿಯಲ್ಲಿ ಪ್ರವರ್ಧಮಾನಕ್ಕೆ ಬರುವಂತೆ ಮಾಡಿದರು. ಶಿಷ್ಯ ಸಮೇತರಾಗಿ ಪ್ರತಿದಿನ ಪಾಠ ಪ್ರವಚನಾದಿ

ಕಾರ್ಯಗಳನ್ನು ಮಾಡುತ್ತಾ ಶ್ರೀ ರಾಮಚಂದ್ರ ದೇವರ ದರ್ಶನ ತಪ್ತ ಮುದ್ರಾಧಾರಣಾದಿಗಳಿಂದ ಶಿಷ್ಯರನ್ನು ಉದ್ಧರಿಸುತ್ತ ಭೀಮರಥೀ ತೀರದಿಂದ ಆರಂಭವಾದ ಅವರ ಜೀವನ ಯಾತ್ರೆಯು ತಿರುಕೋಯಿಲೂರಿನ ತ್ರಿವಿಕ್ರಮನ ಸನ್ನಿಧಾನದವರೆಗೆ ವಿಜೃಂಭಣೆಯಿಂದ ಸಾಗಿ ಬರುವಂತಾಯಿತು. ಈ ಮಹಾನುಭಾವರು ಮಾರ್ಗಶಿರ್ಷ ಶುದ್ಧ ಏಕಾದಶಿಯ ದಿನ (೧೫೧೭ರಲ್ಲಿ) ಸಶರೀರವಾಗಿ ವೃಂದಾವನಸ್ಥರಾದರು. ಶ್ರೀಗಳವರ ಮಹಿಮೆ ಅಗಾಧವಾದುದು ಇಂದಿಗೂ ಆ ಭಾಗದ ಪ್ರತಿಯೊಬ್ಬರೂ ಬಹು ಶ್ರದ್ಧಾಭಕ್ತಿಗಳಿಂದ ಅವರ ವೃಂದಾವನದ ಸೇವೆಯನ್ನು ಮಾಡಿ ಅನುಗ್ರಹವನ್ನು ಪಡೆದ ಅನೇಕ ಘಟನೆಗಳುಂಟು. ಈ ಮಹಾನುಭಾವರ ಸ್ಮರಣ ಮಾತ್ರದಿಂದ ಸಕಲ ದುರಿತಾಪಹಾರಗಳ ನಿವಾರಣೆಯಾಗುವದರಲ್ಲಿ ಯಾವ ಸಂದೇಹವೂ ಇಲ್ಲ.



# ಮಿಥಿಲಾನಗರವನ್ನಾಳಿದ ಕನ್ನಡಿಗರು

---

ಬಂಗಾಲ, ಬಿಹಾರ ಈ ಎರಡೂ ಪ್ರಾಂತಗಳ ಸಂಸ್ಕೃತಿ ಬಹು ಪ್ರಾಚೀನ ಕಾಲದಿಂದ ಒಂದಕ್ಕೊಂದು ಹೊಂದಿಕೊಂಡು ಪೂರಕವಾದ ರೀತಿಯಲ್ಲಿ ಬೆಳೆದು ಬಂದಿದೆ. ಲೋಕಪೂಜ್ಯನಾದ ಶ್ರೀರಾಮಚಂದ್ರನ ಪತ್ನಿ ಸೀತಾಮಾತೆಯ ಜನ್ಮ ಸ್ಥಳವೆನಿಸಿದ ಮಿಥಿಲಾ ನಗರದವರೆಗೂ ಹೋಗಿ ಕನ್ನಡಿಗನಾದ ನಾನ್ಯದೇವನು ತನ್ನ ಶೌರ್ಯ ಪ್ರತಾಪಗಳಿಂದ ತನ್ನದೇ ಆದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ. ಆತನೊಂದಿಗೆ ಹೋದ ಬ್ರಾಹ್ಮಣ ಕುಟುಂಬಗಳಲ್ಲಿ ವಿದ್ಯಾಧರನು ಮೈಥಿಲೀ ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿಸಿದ ಕೃತಿಗಳಿಂದಾಗಿ ಶತಮಾನಗಳು ಕಳೆದುಹೋದರೂ ಸಹ ಕನ್ನಡಿಗರ ಕೀರ್ತಿಧ್ವಜವನ್ನು ನೇಪಾಳದವರೆಗೂ ನಾವು ಕಾಣುವಂತಾದುದು ನಮ್ಮ ರಾಜ್ಯದ ಭಾಗ್ಯವೆಂದೇ ಹೇಳಬಹುದು.

ಬಿಹಾರದಲ್ಲಿ ಹರಿಯುವ ದೇವನದಿಯು ಈ ಪ್ರಾಂತವನ್ನು ಎರಡು ಹೋಳಾಗಿ ಕಾಣುವಂತೆ ಮಾಡಿದ್ದಾಳೆ. ಗಂಗೆಯ ದಕ್ಷಿಣಭಾಗದಲ್ಲಿ ಪುರಾಣೇತಿಹಾಸಗಳ ಉಲ್ಲೇಖವನ್ನು ನಾವು ಕಾಣಬಹುದು. ಗಯಾ, ಪಾಟಲೀಪುತ್ರ, ನಾಲಂದಾ ಮೊದಲಾದವು ಈ ಗಂಗೆಯ ದಕ್ಷಿಣಭಾಗದಲ್ಲಿವೆ. ಅದೇ ರೀತಿ ದರ್ಭಾಂಗಾ, ಚಂಪಾರಣ್ಯ, ಮುಜಫರನಗರ, ಸಾರಾನ ಇವುಗಳೆಲ್ಲ ಪುರಾಣಕಾಲದಲ್ಲಿ ಮಿಥಿಲಾ ರಾಜ್ಯಕ್ಕೆ ಸೇರಿದ್ದ ಭಾಗಗಳಾಗಿ ಗುರುತಿಸಲ್ಪಟ್ಟಿವೆ. ಈ ರಾಜ್ಯದ

ಪಶ್ಚಿಮಭಾಗದಲ್ಲಿ ಗಂಡಕೀ ನದಿಯು ಹರಿಯುತ್ತಿದ್ದರೆ ಪೂರ್ವಭಾಗದಲ್ಲಿ ಕೋಶೀ ನದಿಯೂ, ದಕ್ಷಿಣದಲ್ಲಿ ಗಂಗಾನದಿಯೂ ಹರಿಯುತ್ತಿವೆ, ಉತ್ತರಭಾಗದಲ್ಲಿ ನೇಪಾಳ ರಾಜ್ಯವಿದೆ. ಬಿಹಾರ ಸೀಮೆಯಿಂದ ಕೇವಲ ಇಪ್ಪತ್ತು ಮೈಲಿ ದೂರದಲ್ಲಿರುವ ಜನಕಪುರಿ ಇಂದು ನೇಪಾಳ ರಾಜ್ಯದಲ್ಲಿದೆ. ಭೂಮಿಯನ್ನು ಉಳುವಾಗ ಜನಕರಾಜನಿಗೆ ಸೀತಾ ಮಾತೆ ದೊರೆತಳೆಂದು ಹೇಳುವ ಭೂಮಿಯು ಇಂದು ಮುಜಫರಪುರ ಜಿಲ್ಲೆಗೆ ಸೇರಿಕೊಂಡಿದೆ. ಅದನ್ನು ಸೀತಾಮಡಿ ಎಂದು ಗುರುತಿಸುವ ಸಂಪ್ರದಾಯವಿದೆ. ಈ ಭಾಗದ ಪ್ರಜೆಗಳು ಮೈಥಿಲೀ ಭಾಷೆಯನ್ನೇ ಬಳಸುತ್ತಾರೆ.

ಬಿಹಾರ ಪ್ರಾಂತದ ಸಂಪೂರ್ಣ ಮಾಹಿತಿಯನ್ನೊದಗಿಸುವ ಕೃತಿಯ ಹೆಸರು 'ಬಿಹಾರ ದರ್ಪಣ'. ಈ ಗ್ರಂಥದಲ್ಲಿ ಕ್ರಿ.ಶ. ೧೨೧೧ರಿಂದ ೧೨೨೬ರವರೆಗೆ ತುರ್ಕಿ ರಾಜನಾದ ಗಯಾಸುದ್ದೀನನು ಉತ್ತರ ಬಿಹಾರದ ಮೇಲೆ ಆಕ್ರಮಣ ಮಾಡಿದ ಇತಿಹಾಸವು ಕಾಣಸಿಗುತ್ತದೆ. ಮುಂದೆ ಇದೇ ಸುಮಾರಿನಲ್ಲಿ ಸಿಮರಾವ್ ಎಂಬ ಸಣ್ಣ ಗ್ರಾಮದಲ್ಲಿ ಹೊಸ ರಾಜಮನೆತನದ ಉದಯವಾಯಿತು. ಹನ್ನೆರಡನೇ ಶತಮಾನದ ಕೊನೆಯ ಭಾಗದಲ್ಲಿ ತುರ್ಕರು ಬಂಗಾಲದ ದಕ್ಷಿಣಭಾಗದೊಂದಿಗೆ ಬಿಹಾರ ಪ್ರದೇಶಗಳ ಮೇಲೂ ತಮ್ಮ ಹಕ್ಕನ್ನು ಸ್ಥಾಪಿಸಿದರು. ೧೨೨೦ರಲ್ಲಿ ಮಿಥಿಲಾ ನಗರದ ಮೇಲೆ ಅವರಿಂದ ಆಕ್ರಮಣಗಳಾದವು, ಸಂಪೂರ್ಣ ಮಿಥಿಲಾ ಪ್ರದೇಶವೆಲ್ಲ ಅವರ ಸ್ವಾಧೀನವಾಯಿತು. ಹೀಗೆ ಆ ಭಾಗವೆಲ್ಲ ತುರ್ಕಮಯವಾದಾಗ ನಮ್ಮ ಪೂರ್ವಜರ ಪುಣ್ಯವೆಂಬಂತೆ ಪರಾಕ್ರಮಿ ರಾಜನೊಬ್ಬನು ಹುಟ್ಟಿಕೊಂಡನು. ಮಿಥಿಲಾ ಪ್ರಾಂತದ ಮೇಲೆ ತನ್ನದೇ ಅಧಿಪತ್ಯವನ್ನು ಸ್ಥಾಪಿಸಿದನು. ಮುಂದೆ ಇನ್ನೂರು ವರ್ಷಗಳವರೆಗೆ ಆ ರಾಜ್ಯವು ಅಸ್ತಿತ್ವದಲ್ಲಿರುವಂತಾಯಿತು.

**ನಾನ್ಯದೇವ:** ನಾನ್ಯದೇವನೆಂಬ ವೀರನು ಕರ್ನಾಟಕದಿಂದ ವಲಸೆಹೋಗಿ ತನ್ನ ಸ್ವಂತದ ಭುಜಬಲದಿಂದ ಉತ್ತರ ಬಿಹಾರ,

ತಿರಪೂನ್, ನೇಪಾಳ ಈ ಪ್ರದೇಶಗಳನ್ನೆಲ್ಲ ಸ್ವಾಧೀನ ಪಡಿಸಿಕೊಂಡ. ಕಾಲಾನಂತರ ಈತನ ಇಬ್ಬರು ಮಕ್ಕಳಲ್ಲಿ ಒಬ್ಬನು ನೇಪಾಳ ರಾಜ್ಯದ ಅಧಿಪತಿಯಾದರೆ ಇನ್ನೊಬ್ಬನು ಮಿಥಿಲಾ ನಗರದ ಅರಸನೆಂದೆನಿಸಿಕೊಂಡ. ಕನ್ನಡ ನಾಡಿನಿಂದ ವಲಸೆಹೋದ ಈ ಯೋಧರನ್ನು ಕುರಿತು ಅಭ್ಯಾಸ ಮಾಡಿದಾಗ ದಕ್ಷಿಣದಲ್ಲಿ ನಡೆದುಹೋದ ಕಲ್ಯಾಣದ ಚಾಲುಕ್ಯರ ರಾಜ್ಯಕ್ರಾಂತಿಯಿಂದ ಹೇಗೋ ಪಾರಾಗಿ ಹೋದ ಮಾಂಡಲಿಕ ಮನೆತನವೇ ನಾನ್ಯದೇವನ ಮೂಲ ಎಂದು ತಿಳಿದು ಬರುತ್ತದೆ. ಕನ್ನಡ ನಾಡಿನಿಂದ ಹೊರಟಾಗ ಈತನೊಂದಿಗೆ ಈತನ ಪ್ರಧಾನ ಮಂತ್ರಿಯಾಗಿದ್ದ ಶ್ರೀಧರ ಠಾಕೂರ ಹಾಗೂ ಇನ್ನೂ ಅನೇಕ ಬ್ರಾಹ್ಮಣ ಕುಟುಂಬಗಳೂ ಆತನೊಂದಿಗೆ ಮಿಥಿಲಾ ಪ್ರದೇಶದಲ್ಲಿರುವ ಸಿಮರಾವ್ ಗ್ರಾಮಕ್ಕೆ ಬಂದಿಳಿದವು. ಕಾಲಾನಂತರ ನಾನ್ಯದೇವನು ಈ ಭಾಗದಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡು ಸ್ವತಂತ್ರ ರಾಜ್ಯದ ಸ್ಥಾಪನೆಗೆ ಕಾರಣನಾದ. ೧೩೨೩ರವರೆಗೂ ಆತನ ರಾಜ್ಯವು ವೈಭವದಿಂದ ಮುಂದುವರಿಯಿತು. ಮಿಥಿಲಾ ರಾಜ್ಯದಲ್ಲಿ ಕನ್ನಡಿಗರು ರಾಜ್ಯವಾಳಿದ ರಾಜವಂಶಾವಳಿಯು ಈ ರೀತಿಯಾಗಿರುವುದು:

ನಾನ್ಯದೇವ ಠಾಕೂರ
ಗಂಗದೇವ ಠಾಕೂರ
ನರಸಿಂಹದೇವ ಠಾಕೂರ
ರಾಮಸಿಂಹದೇವ ಠಾಕೂರ
ಶಕ್ತಿಸಿಂಹ ಠಾಕೂರ
ಹರಸಿಂಹದೇವ ಠಾಕೂರ

ಈ ಠಾಕೂರ ಮನೆತನದಲ್ಲಿಯೇ ಸುಪ್ರಸಿದ್ಧ ಕವಿ ವಿದ್ಯಾಪತಿಯ ಜನನವಾದದ್ದು ಕನ್ನಡ ನಾಡಿನಿಂದ ಬಂದ ಕುಟುಂಬವಿದು. ಸಿಮರಾವದ ಕೊನೆಯ ಅರಸು ಹರಸಿಂಹದೇವ ಠಾಕೂರ. ಈತನ ಕಾಲ ಕ್ರಿ.ಶ. ೧೩೨೩. ಈ ಠಾಕೂರರ ಮನೆತನದಂತೆ ನಾನ್ಯದೇವನ ವಂಶವೃಕ್ಷವು ಇಂದೂ ಉಪಲಬ್ಧವಿದೆ.

೧೨೨೦ರಿಂದ ೧೩೨೬ರವರೆಗೆ ಈ ಮನೆತನದವರು ಮಿಥಿಲಾ ಪ್ರದೇಶವನ್ನೆಲ್ಲ ಬಿಗಿಯಾಗಿ ಆಳಿದರು. ಹಿಂದೂ ಸಂಸ್ಕೃತಿಯನ್ನು ಸಮರ್ಥ ರೀತಿಯಲ್ಲಿ ರಕ್ಷಿಸಿಕೊಂಡು ಬಂದರು. ನಾನ್ಯದೇವನ ಮೊಮ್ಮಗ ರಾಮಸಿಂಹ ಠಾಕೂರನಂತೂ ಮಹಾಪ್ರತಾಪಿ ಎನಿಸಿಕೊಂಡ. ಈತನ ನಂತರ ಅನುಕ್ರಮವಾಗಿ ಶಕ್ತಿಸಿಂಹ ಠಾಕೂರ ಹಾಗೂ ಹರಸಿಂಹ ಠಾಕೂರ ಈ ಭಾಗವನ್ನಾಳಿದರು.

ನಾನ್ಯದೇವನೊಂದಿಗೇ ವಲಸೆ ಬಂದ ಶ್ರೀಧರ ಠಾಕೂರನೆಂಬ ಬ್ರಾಹ್ಮಣನ ಕುಟುಂಬವು ರಾಜಗುರುವಂಶವೆಂದು ಗುರುತಿಸುವಂತಾಯಿತು. ಈ ಮನೆತನದವರು ಸಮಗ್ರ ಮಿಥಿಲಾ ಪ್ರದೇಶದ ಮೇಲೆ ತಮ್ಮ ವರ್ಚಸ್ಸನ್ನು ಬೆಳೆಸಿಕೊಂಡಿದ್ದರು. ಇವರಲ್ಲಿ ಶ್ರೋತ್ರಿಯ, ಯೋಗಿ, ಜೈವಾರ ಎಂಬ ಹೆಸರಿನ ಮೂರು ಗುಂಪುಗಳಾದವು. ಈ ಮೂರೂ ಗುಂಪಿನವರಿಗೂ ಎಲ್ಲ ರೀತಿಯ ಸೌಕರ್ಯವನ್ನು ಮಾಡಿಕೊಡಲಾಯಿತು. ಇದರಿಂದಾಗಿ ಮಿಥಿಲಾ ರಾಜ್ಯದಲ್ಲಿ ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾದಿ ಗ್ರಂಥಗಳು ರಚನೆಯಾಗುವಂತಾದವು. ರಾಜರು ವಿದ್ಯಾ ವ್ಯಾಸಂಗಕ್ಕೆ ಎಲ್ಲ ಸೌಕರ್ಯಗಳನ್ನೊದಗಿಸಿದರು. ಕೇವಲ ಧರ್ಮಗ್ರಂಥಗಳ ರಚನೆಗಳಿಂದ ತೃಪ್ತರಾಗದೆ ಪ್ರಜೆಗಳ ಧರ್ಮಾಚರಣೆಯೂ ಸಹ ಬೆಳೆದುಬರುವಂತೆ ನೋಡಿಕೊಂಡರು. ಇಷ್ಟಾದರೂ ಸಹ ಪರಕೀಯ ದಾಳಿಗಳಿಂದ ನಾಡನ್ನು ರಕ್ಷಿಸುವುದು ಕಠಿಣವೇ ಆಗಿತ್ತು. ದಿಲ್ಲಿಯ ತುಘಲಖ್ ಮನೆತನದ ಗಯಾಸುದ್ದೀನನ ದಾಳಿಯಿಂದಾಗಿ ೧೩೨೬ರಲ್ಲಿ ಇವರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡರು. ಬಹದ್ದೂರ್‌ಶಹನ ಬಂಡಾಯವನ್ನಡಗಿಸಿ ಮರಳಿ ದಿಲ್ಲಿಗೆ ಹೋಗುವಾಗ ತುಘಲಖನು ಹರಸಿಂಹನ ಮಗನಾಗಿದ್ದ ಕಾಮೇಶ್ವರ ಠಾಕೂರರನನ್ನೇ ತನ್ನ ಮಾಂಡಲಿಕನನ್ನಾಗಿ ಮಾಡಿ ಪ್ರತಿ ವರ್ಷ ಕಪ್ಪಕಾಣಿಕೆ ಕಳುಹಿಸುವಂತೆ ಏರ್ಪಾಟು ಮಾಡಿದನು. ಆದುದರಿಂದ ಮುಂದೆ ಈ ಮನೆತನದವರು ತುರ್ಕರಿಗೆ ಮಾಂಡಲಿಕರಾಗಿ ರಾಜ್ಯಭಾರ ನಡೆಸುವಂತಾಯಿತು.

**ವಿದ್ಯಾಪತಿ:** ಕಾಮೇಶ್ವರ ಠಾಕೂರನ ಎರಡನೆಯ ಮಗನಾದ ಭೋಗೇಶ್ವರ ಠಾಕೂರನ ದರ್ಬಾರಿನಲ್ಲಿ ವಿದ್ಯಾಪತಿಯ ತಂದೆ ಆಸ್ಥಾನ

ವಿದ್ವಾಂಸನೆಂದು ಗೌರವಿತನಾಗಿದ್ದ. ಅನಂತರ ಭೋಗೇಶ್ವರ ಟಾಕೂರನ ಮೂರನೇ ಮಗನಾದ ಕೀರ್ತಿಸಿಂಹ ಠಾಕೂರನು ಕವಿ ವಿದ್ಯಾಪತಿಗೆ ಆಶ್ರಯದಾತನಾಗಿದ್ದ. ವಿದ್ಯಾಪತಿಯ ಪೂರ್ವಜರೆಲ್ಲ ಶೈವಸಂಪ್ರದಾಯದವರಾದರೂ ಸಹ ಸ್ವತಃ ವಿದ್ಯಾಪತಿಯು ಮಾತ್ರ ಶ್ರೀಕೃಷ್ಣಭಕ್ತನಾಗಿದ್ದ. ಆತನು ಶಿವಸಿಂಹ ಹಾಗೂ ಆತನ ಪತ್ನಿ ಮಹಾರಾಣಿ ಲಕಮಾದೇವಿ (ಲಕ್ಷ್ಮೀದೇವಿ)ಯನ್ನು ತನ್ನ ಕಾವ್ಯದಲ್ಲಿ ಬಹು ಸೊಗಸಾಗಿ ವರ್ಣಿಸಿದ್ದಾನೆ. ಮಿಥಿಲಾ ಸಿಂಹಾಸನದ ಮೇಲೆ ಶಿವಸಿಂಹ ಠಾಕೂರನು ವಿರಾಜಮಾನನಾದಾಗ ಆತನಿಗೆ ಸುಮಾರು ಐವತ್ತು ವರ್ಷಗಳಾಗಿರಬಹುದು. ಆತನು ತುಂಬಿದ ದರ್ಬಾರಿನಲ್ಲಿ ವಿದ್ಯಾಪತಿಗೆ 'ಅಭಿನವ ಜಯದೇವ ಕವಿ' ಎಂಬ ಬಿರುದನ್ನಿತ್ತು, ಬಿಪಸಿ ಎಂಬ ಹೆಸರಿನ ಗ್ರಾಮವನ್ನು ದತ್ತಿಯಾಗಿ ಕವಿಗೆ ಸಮರ್ಪಿಸಿದ. ಇತ್ತೀಚೆಗೆ ಈ ದಾನಪತ್ರದ ತಾಮ್ರಪಟವೂ ಸಹ ದೊರೆತಿದೆ. ವಿದ್ಯಾಪತಿಯ 'ಪದಾವಲಿ' ಎಂಬ ಗ್ರಂಥವನ್ನು ರಾಮಕೃಷ್ಣ ವೇಣಿಪುರಿ ಎಂಬ ವಿದ್ವಾಂಸರು ಸಂಪಾದಿಸಿ ಬಿಹಾರದಲ್ಲಿ ಮುದ್ರಣಗೊಳಿಸಿದ್ದಾರೆ.

ವಿದ್ಯಾಪತಿಯ ಜನ್ಮವು ಉತ್ತರ ಬಿಹಾರದ ದರ್ಭಾಂಗಾ ಜಿಲ್ಲೆಯ ಬೇಣೀಪಟ್ಟಿ ಎಂಬ ಠಾಣೆ (ತಾಲೂಕು)ಯಲ್ಲಿರುವ ಬಿಸಪಿ ಗ್ರಾಮದಲ್ಲಾಯಿತು. ಮುಂದೆ ಅದೇ ಗ್ರಾಮವನ್ನೇ ರಾಜಾ ಶಿವಸಿಂಹನು ಆತನಿಗೆ ದಾನವಾಗಿ ಕೊಟ್ಟಿದ್ದು ಕಾಲಾನಂತರ ವಿದ್ಯಾಪತಿನಗರವೆಂಬ ಹೆಸರಿನಲ್ಲಿ ಅದು ಪ್ರಸಿದ್ಧಿಗೆ ಬರುವಂತಾಯಿತು. ರಾಜಾ ಶಿವಸಿಂಹನು ದಿಲ್ಲೀಶ್ವರನ ಅಧಿಕಾರವನ್ನು ಲೆಕ್ಕಿಸದೆ ಸ್ವತಂತ್ರನಾಗಿರಲು ಪ್ರಯತ್ನಿಸಿದ. ಆದರೆ ಮೂರು ವರ್ಷಗಳಲ್ಲಿಯೇ ಪುನಃ ಮಹಮ್ಮದೀಯರು ಮಿಥಿಲಾ ಪ್ರದೇಶದ ಮೇಲೆ ದಾಳಿಯನ್ನಾರಂಭಿಸಿದರು. ಆಗ ತಾನು ಸೋಲುವೆನೆಂಬುದನ್ನರಿತ ಶಿವಸಿಂಹನು ಮೊದಲು ತನ್ನ ಪಟ್ಟಮಹಿಷಿಯಾದ ಲಕ್ಷ್ಮೀದೇವಿ ಹಾಗೂ ಕವಿ ವಿದ್ಯಾಪತಿಯೊಂದಿಗೆ ಅನೇಕ ಆಶ್ರಿತರನ್ನು ನೇಪಾಳದ ಸರಹದ್ದಿನಲ್ಲಿರುವ ಪುರಾದಿತ್ಯನ ಆಶ್ರಯಕ್ಕೆ ಕಳುಹಿಸಿಕೊಟ್ಟ. ಆತನು ಶಿವಸಿಂಹನ ಮಿತ್ರನಾಗಿದ್ದ. ಆತನ ರಾಜಧಾನಿಯಾದ ರಜಾ ಬಸೌದಿಯು ದರ್ಭಾಂಗಾದಿಂದ ಕೇವಲ ಮೂವತ್ತು ಮೈಲಿನ

ಅಂತರದಲ್ಲಿತ್ತು. ಅಲ್ಲದೆ ಜನಕಪುರಿಗೆ ಅದು ತೀರಾ ಹತ್ತಿರದ ಸ್ಥಳವಾಗಿತ್ತು. ಪುರಾದಿತ್ಯನು ಮಹಾ ಪ್ರತಾಪಿ. ಪರಿಸರದಲ್ಲಿದ್ದ ಸಪ್ತರಿ ಪ್ರದೇಶಗಳೆಲ್ಲ ಆತನ ಸ್ವಾಧೀನದಲ್ಲಿದ್ದವು. ತಮಗೆ ಆಶ್ರಯವನ್ನಿತ್ತ ಪುರಾದಿತ್ಯನನ್ನು ವಿದ್ಯಾಪತಿಯು ತನ್ನ ಒಂದು ಕೃತಿಯಲ್ಲಿ ಬಾಯ್ತುಂಬ ಹೊಗಳಿದ್ದಾನೆ. ಇದೇ ಸಮಯದಲ್ಲಿ ಕವಿಯು ಸಟೀಕ ಭಾಗವತ ಗ್ರಂಥವನ್ನೂ ರಚಿಸಿದನೆಂದು ತಿಳಿದುಬರುತ್ತದೆ.

ರಾಜಾ ಶಿವಸಿಂಹ ಸಂಸ್ಕೃತ ವಿದ್ವಾಂಸನೂ ವಿದ್ವಜ್ಜನರಿಗೆ ಆಶ್ರಯದಾತನೂ ಆಗಿದ್ದ, ಧರ್ಮಪರಾಯಣನೆಂದೆನಿಸಿ ಕೊಂಡಿದ್ದ. ಆತನ ಆಸ್ಥಾನದಲ್ಲಿ ಅನೇಕ ಸಂಸ್ಕೃತ ವಿದ್ವಾಂಸರಿಗೆ ಆಶ್ರಯವು ಲಭಿಸುವಂತಾಗಿತ್ತು. ಶಿವಸಿಂಹಪುರ ಎಂಬ ಹೆಸರಿನ ಊರನ್ನು ಲಹೇರಿಯಾ ಎಂಬ ಸ್ಥಳದ ಸಮೀಪದಲ್ಲಿ ನಿರ್ಮಿಸಿದ್ದ ರಾಜ್ಯದಲ್ಲಿ ಅನೇಕ ಕೆರೆ ಕಾಲುವೆಗಳನ್ನು ನಿರ್ಮಿಸಿ ಪ್ರಜೆಗಳಿಗೆ ಅನುಕೂಲವನ್ನು ಮಾಡಿಕೊಟ್ಟಿದ್ದ, ಇದರಿಂದಾಗಿ ಆತನನ್ನು ಕುರಿತು ಅನೇಕ ಜಾನಪದ ಗೀತೆಗಳು ರಚನೆಯಾದವು. ಇಂದಿಗೂ ಜನಸಾಮಾನ್ಯರ ಮುಖದಿಂದ ಅಂಥ ಪದಪದ್ಯಗಳನ್ನು ನಾವು ಕೇಳ ಬಹುದಾಗಿದೆ. ವಿದ್ಯಾಪತಿಯಿಂದ ರಚಿತವಾದ 'ಶೈವ ಸರ್ವಸ್ವಸಾರ' ಎಂಬ ಗ್ರಂಥದಲ್ಲಿ ಈ ಠಾಕೂರರ ಮನೆತನದ ಬಗೆಗೆ ಭವಸಿಂಹ ಠಾಕೂರನಿಂದಾರಂಭಿಸಿ ರಾಣೀ ವಿಶ್ವಾಸದೇವಿಯವರೆಗೆ ನಡೆದ ಅನೇಕ ಮಹತ್ವದ ಘಟನೆಗಳ ಉಲ್ಲೇಖವನ್ನು ನಾವು ಕಾಣಬಹುದಾಗಿದೆ. ಗ್ರಂಥದ ಕೊನೆಯ ಭಾಗದಲ್ಲಿ ಆತನು ಶಿವಪೂಜಾ ವಿಧಿವಿಧಾನಗಳನ್ನು ತಿಳಿಸಿದ್ದಾನೆ. 'ಗಂಗಾವಾಕ್ಯಾವಲಿ' ಎಂಬ ಇನ್ನೊಂದು ಕೃತಿಯಲ್ಲಿ ಹರಿದ್ವಾರದಿಂದಾರಂಭಿಸಿ ಗಂಗಾಸಾಗರದವರೆಗಿನ ಅನೇಕ ಪವಿತ್ರ ಸ್ಥಳಗಳನ್ನು ವರ್ಣನೆ ಮಾಡಿದ್ದಾನೆ. ಸಂಶೋಧಕರಿಗೆ ಇದು ಅತ್ಯಂತ ಮಹತ್ವದ ಕೃತಿಯೆನಿಸಿದೆ. ನರಸಿಂಹ ಠಾಕೂರನ ಪತ್ನಿ ಧೀರಮತಿಯ ಆಜ್ಞಾನುಸಾರ 'ದಾನ್ ವಾಕ್ಯಾವಲಿ' ಎಂಬ ವಿಲಕ್ಷಣ ಗ್ರಂಥವನ್ನು ರಚಿಸಿದ್ದಾನೆ. ಈ ಗ್ರಂಥದ ವಿಚಾರವನ್ನು ಕುರಿತು ಪ್ರಾಚಾರ್ಯ ಭಾರತ ಭೂಷಣ ಸರೋಜ ಎಂಬವರು 'ವಿದ್ಯಾಪತೀ ಕೀ ಕವಿತಾ' ಎಂಬ ಹೆಸರಿನ ಪ್ರಬಂಧವನ್ನು

ರಚಿಸಿದ್ದಾರೆ. ಭೈರವಸಿಂಹ ಠಾಕೂರನ ಅಪೇಕ್ಷೆಯ ಮೇರೆಗೆ 'ದುರ್ಗಾಭಕ್ತಿ ತರಂಗಿಣಿ' ಎಂಬ ಗ್ರಂಥವನ್ನೂ ರಚಿಸಿರುವುದಾಗಿ ತಿಳಿದು ಬರುತ್ತದೆ. ಮಿಥಿಲಾ ರಾಜ್ಯದಲ್ಲಿ ದುರ್ಗಾ ಪೂಜೆಗೆ ಅತ್ಯಂತ ಮಹತ್ವ ಕೊಡಲಾಗುತ್ತದೆ. ಇದರಿಂದಾಗಿ ಈ ಕೃತಿಯು ಅತ್ಯಂತ ಜನಪ್ರಿಯವಾಗಿದೆ.

ಕಪಿಲೇಶ್ವರನ ವರಪ್ರಸಾದದಿಂದ ಈ ಕವಿಯ ಜನನವಾಯಿತೆಂದು ಆತನ ತಂದೆ ಗಣಪತಿಠಾಕೂರ, ತಾಯಿ ಹಂಸಿನೀದೇವಿಯ ಅಭಿಪ್ರಾಯ. ಶಾರದೆಯ ಆರಾಧಕರಾದ ಈ ವಂಶದಲ್ಲಿಯೇ ಪಕ್ಷಧರಮಿಶ್ರನು ಹುಟ್ಟಿದುದಾಗಿ ತಿಳಿದುಬರುತ್ತದೆ. ಈತನು ವ್ಯಾಸರಾಯರ ಕಾಲದಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲಿನವರೆಗೆ ಬಂದು ಹೋದನೆಂಬ ವಿವರವು ವ್ಯಾಸರಾಯರ ಜೀವನಚರಿತ್ರೆಯಲ್ಲಿ ದೊರೆಯುತ್ತದೆ.

ವಿದ್ಯಾಪತಿಯ ಕೃಷ್ಣಭಕ್ತಿಯುತ ಕಾವ್ಯವಂತೂ ಅಸಾಮಾನ್ಯ ಕೃತಿ ಎಂದೆನಿಸಿ ಕೊಂಡಿದೆ. ಜಯದೇವ ಕವಿಯ ಗೀತಗೋವಿಂದದಂತೆ ವಿದ್ಯಾಪತಿಯ ಕಾವ್ಯವೂ ಆ ಭಾಗದ ಜನರಿಂದ ಬಹು ಭಕ್ತಿಯಿಂದ ಇಂದಿಗೂ ಪಠಿಸಲ್ಪಡುತ್ತದೆ. ಈ ಕವಿಯ ಕಾಲವು ೧೩೫೦ರಿಂದ ೧೪೪೯ ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ವಿದ್ಯಾಪತಿಯ ಸಾಹಿತ್ಯವನ್ನು ಕುರಿತು ಈವರೆಗೆ ಅನೇಕ ವಿದ್ವಾಂಸರು ಪ್ರಬಂಧಗಳನ್ನು ರಚಿಸಿದ್ದಾರೆ.

ಕನ್ನಡ ನಾಡಿನಿಂದ ವಲಸೆಹೋದ ಒಂದು ಕುಟುಂಬದವರಿಂದ ಎಂಥ ಅಗಾಧ ಕೆಲಸವಾಗಿದೆ ಎಂಬುದನ್ನು ಅರಿಯಬೇಕಾಗಿದ್ದಲ್ಲಿ ಇತಿಹಾಸದ ಪುಟಗಳನ್ನು ತಿರುವಿಹಾಕಬೇಕು. ಕನ್ನಡಿಗರು ಮಿಥಿಲಾ ರಾಜ್ಯವನ್ನಾಳಿದರು, ಭಾರತೀಯ ಸಂಸ್ಕೃತಿ ಹಾಗೂ ಸಂಸ್ಕೃತ ಸಾಹಿತ್ಯದೊಂದಿಗೆ ಮೈಥಿಲೀ ಭಾಷೆಯನ್ನೂ ಮೈಗೂಡಿಸಿಕೊಂಡು ಅದರಲ್ಲಿಯೂ ಸಹ ಅನೇಕ ಕೃತಿಗಳನ್ನು ರಚಿಸಿದರು, ನೇಪಾಳದ ಮೇಲೂ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು - ಎಂಬುದನ್ನೋದಿದಾಗ ಯಾವ ಕನ್ನಡಿಗನ ಮೈಮನಗಳು ಹೆಮ್ಮೆಯಿಂದ ಉಬ್ಬಿಬರಲಿಕ್ಕಿಲ್ಲ?

(ದಿ|| ಡಾ|| ವಿ.ಕೆ. ಗೋಕಾಕ್ ಹಾಗೂ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದ ಶ್ರೀ ಜಯತೀರ್ಥ ರಾಜಪುರೋಹಿತರು ಮತ್ತು ಡಾ|| ಹಾ.ಮಾ. ನಾಯಕರು, ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದಾಗ ಈ ಲೇಖಕನಿಗೆ ಉತ್ತರಭಾರತದ ಪ್ರವಾಸಕ್ಕೆ ಸಹಾಯವನ್ನೊದಗಿಸಿದ್ದರು. ಅವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುವೆ).



# ರಘುನಾಥ ಹನುಮಂತೆ ಹಾಗೂ 'ರಾಜಕೋಶ'

ತಂಜಾವೂರಿನ ಸರಸ್ವತಿ ಮಹಲ್ ಗ್ರಂಥಾಲಯವು ರಾಷ್ಟ್ರದ ಅಮೂಲ್ಯ ಪುಸ್ತಕ ಸಂಪತ್ತನ್ನೊಳಗೊಂಡ ಪ್ರಥಮ ದರ್ಜೆಯ ಗ್ರಂಥಾಲಯವೆನಿಸಿದೆ. ಪ್ರಾಚೀನ ಗ್ರಂಥಗಳ ಸೂಚಿ ಪತ್ರಗಳನ್ನು ಅವಲೋಕಿಸಿದಂತೆಲ್ಲ ಅಭ್ಯಾಸುಗಳಿಗೆ ಮಹದಾನಂದವನ್ನುಂಟು ಮಾಡುವಂತಹ ಪ್ರಕರಣಗಳು ಕಣ್ಮುಂದೆ ನಿಲ್ಲುತ್ತವೆ. ಈ ಗ್ರಂಥಾಲಯದಲ್ಲಿರುವ ಕೋಶಗಳ ಸಂಖ್ಯೆ ಅಗಾಧವಾದುದು. ಅವುಗಳ ಪೈಕಿ 'ನಿಘಂಟು' ಎಂದು ನಮೂದಿಸಲಾದ ಪ್ರತಿಗಳೇ ಹೆಚ್ಚಿನವು. ಹಾಗೆಯೇ 'ಕೋಶ' ಎಂದು ಸಂಬೋಧಿಸಲಾದ ಕೃತಿಗಳನ್ನೂ ನಾವಿಲ್ಲಿ ಕಾಣಬಹುದು. (ಇಲ್ಲಿ 'ಕೋಶ' ಹಾಗೂ 'ನಿಘಂಟು'ಗಳೆರಡೂ ಒಂದೇ ಅರ್ಥವನ್ನು ಸೂಚಿಸುವ ಶಬ್ದಗಳು ಎಂಬುದು ಗಮನಾರ್ಹ ವಿಷಯ). ಇವುಗಳಲ್ಲಿ "ರಾಜ ಕೋಶ"ವೂ ಒಂದು.

ದಕ್ಷಿಣ ಭಾರತದಲ್ಲಿ ಮುನ್ನೂರು ವರುಷಗಳ ಕಾಲ ಒಂದಿಲ್ಲೊಂದು ಭಾಗದಲ್ಲಿ ಮಹಮ್ಮದೀಯ ಅರಸರು ರಾಜ್ಯವನ್ನಾಳಿದರು. ಉತ್ತರ ಭಾರತದಲ್ಲಿಯಂತೂ ಐನೂರು ವರುಷಗಳ ಕಾಲ ಅವರ ಆಡಳಿತವಿತ್ತು. ಇದರಿಂದಾಗಿ ಫಾರ್ಶಿ ಹಾಗೂ ಅನಂತರ ಉರ್ದು

ಭಾಷೆಗೆ ಹೆಚ್ಚಿನ ಪ್ರಾಮುಖ್ಯ ಲಭಿಸುವಂತಾಯಿತು. ಆಗ ರಾಜ್ಯ ವ್ಯವಹಾರ ಹಾಗೂ ಲೋಕ ವ್ಯವಹಾರಗಳಿಗೆಲ್ಲ ಈ ಭಾಷೆಯೇ ಮಾಧ್ಯಮ. ದಕ್ಷಿಣದವರು ಈ ಭಾಷೆಯನ್ನು "ಯವನೀ ಭಾಷೆ'' ಎಂದರು. ಶತಶತಮಾನಗಳ ಈ ಪರಭಾಷೆಯ ಪ್ರಭಾವದಿಂದಾಗಿ ನಮ್ಮ ನಿತ್ಯ ಬಳಕೆಯಲ್ಲಿ ಇಂದಿಗೂ ಆ ಶಬ್ದಗಳು ಅಬಾಧಿತವಾಗಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. (ಮಾಲ್, ಮಸಾಲಾ, ಇಮಾರತ್, ಗುಲಾಮ್, ಫಜೀತಿ, ಅವಲಾದ್, ಮಜೂರಿ, ಮಕಾದಮ್, ಮೆಹನತ್ತು, ಕಾರಕೂನ, ಜಬರ ದಸ್ತ್, ಬಾಗಾಯತ, ಆಫತ್, ಗುನಹಾ, ಬಕ್ಷೀಸ್ ಮುಂತಾದ ಒಂದಲ್ಲ ಎರಡಲ್ಲ ನೂರಾರು ಶಬ್ದಗಳ ಮಾಲೆಯನ್ನೇ ಸಿದ್ಧಪಡಿಸಬಹುದು). ಈ ಶಬ್ದಗಳ ಚಮತ್ಕಾರವನ್ನು ಅಭ್ಯಾಸ ಮಾಡಬೇಕಾದಲ್ಲಿ ಐವತ್ತು ವರುಷಗಳಷ್ಟು ಹಿಂದಿನ ಶ್ಯಾನುಭೋಗರ ಕಡತಗಳನ್ನು ಮುಗುಚಿ ಹಾಕಿದರೆ ಸಾಕು. ಇಂಥ ಸಾವಿರಾರು ಪದಗಳು ಸಿಗುವವು. ಸೇನಾ ವಿಭಾಗದಲ್ಲಿ ಸರ್‌ಹವಾಲದಾರ್, ಹವಾಲದಾರ್, ಮುಜುಮದಾರ್, ಜವಾಹರಖಾನಾ, ಪೋಷಾಕ ಖಾನಾ, ತೋಫ್‌ಖಾನಾ, ಗೋಳಾ, ಬಂದೂಕ್ ಹೀಗೆಲ್ಲ ಶಬ್ದಗಳನ್ನು ನೋಡಬಹುದು. ಅದೇ ರೀತಿ ಕಂದಾಯ ಭಾಗದಲ್ಲಿ ಕಬಜೆ, ಮಹಸೂಲ್, ಕುಲಬಾಬ್, ಮಹಜರ್ ಈ ಶಬ್ದಗಳು ಇಂದಿಗೂ ಬಳಕೆಯಲ್ಲಿವೆ.

ದಕ್ಷಿಣದ ದಿಗ್ವಿಜಯವನ್ನು ಮುಗಿಸಿಕೊಂಡು ಬಂದ ಮೇಲೆ ಛತ್ರಪತಿ ಶಿವಾಜಿಗೆ ಮಹಾರಾಷ್ಟ್ರದ ಅಂದಿನ ಆರು ಜಿಲ್ಲೆಗಳು, ಕರ್ನಾಟಕದ ನಾಲ್ಕು ಜಿಲ್ಲೆಗಳು, ತಮಿಳುನಾಡಿನ ಎರಡು ಜಿಲ್ಲೆಗಳಲ್ಲಿಯ ಜನತೆಗೆ ಅಂದಿನ ಫಾರ್ಶಿ ಶಬ್ದಗಳ ಬದಲಾಗಿ ಬೇಗನೆ ಅರ್ಥವಾಗುವಂಥ ನಮ್ಮವೇ ಪದಗಳ ಒಂದು 'ಸ್ವದೇಶಿ ಕೋಶ' ಇರುವುದು ಒಳತೆಂಬ ವಿಚಾರ ಮೂಡಿತು. ತತ್ಪರಿಣಾಮವೇ ಈ 'ರಾಜಕೋಶ'.

'ರಾಜಕೋಶ'ವನ್ನು ಸಂಪೂರ್ಣವಾಗಿ ಅಭ್ಯಾಸ ಮಾಡಿದಾಗ ಇದು ಮೊಟ್ಟಮೊದಲನೆಯ ಫಾರ್ಶಿ-ಸಂಸ್ಕೃತ ಕೋಶವೆಂದೆನಿಸುವದಾದರೂ

ಅದು ತಪ್ಪು ಕಲ್ಪನೆ. ಏಕೆಂದರೆ ಉತ್ತರದಂತೆಯೆ ದಕ್ಷಿಣದಲ್ಲಿ ಕೂಡ ಫಾರ್ಶಿ ಭಾಷೆಯು ರಾಜ್ಯವ್ಯವಹಾರದ ಭಾಷೆಯಾಗಿದ್ದರೂ ಉರ್ದುವೇ ಜನಸಾಮಾನ್ಯರ ಭಾಷೆ ಎಂದೆನಿಸಿಕೊಳ್ಳುತ್ತಿತ್ತು. ಅದ್ದರಿಂದ 'ರಾಜಕೋಶ'ವನ್ನು ಉರ್ದು ಹಾಗೂ ಸಂಸ್ಕೃತ ಭಾಷೆಗಳ ಪ್ರಥಮ ಕೋಶವೆಂದು ಕರೆಯಬೇಕಾಗುವದು. ಈ ದಖನಿ ಉರ್ದುವಿನ ಬಳಕೆಯು ಅಂದಿನ ಕಾಲದ ಸಂತಸಾಹಿತ್ಯದ ಮೇಲೂ ಪ್ರಭಾವ ಬೀರಿದೆ ಎಂಬುದನ್ನು ಗಾಣಗಾಪುರದ ಮಹಾತ್ಮ್ಯವನ್ನು ತಿಳಿಸುವ 'ಗುರುಚರಿತ್ರೆ' ಹಾಗೂ ರಾಮದಾಸರ ಜೀವನ ಚರಿತ್ರೆಯನ್ನು ತಿಳಿಸುವ 'ದಾಸವಿಶ್ರಾಮಧಾಮ' (ಈ ಎರಡೂ ಗ್ರಂಥಗಳು ಗುಲ್ಬರ್ಗಾದಲ್ಲಿಯೇ ರಚಿತವಾದವುಗಳು)ಗಳನ್ನು ಗಮನಿಸಿದಾಗ ಗೋಚರಿಸುವದು.

೧೬೭೪ರ ಸುಮಾರಿನಲ್ಲಿ ರಚಿತವಾದ 'ರಾಜಕೋಶ'ದ ಸಂಪೂರ್ಣ ನಿರ್ಮಾಣದ ಹೊಣೆ ಹೊತ್ತವರು ರಘುನಾಥ ಹನುಮಂತೆಯವರು. ಅವರ ಪೂರ್ವಜರು ಒಂದು ಕಾಲದಲ್ಲಿ ಯಜ್ಞಯಾಗಾದಿ ಕರ್ಮನಿರತರಾಗಿದ್ದರಿಂದ ಈ ಮನೆತನಕ್ಕೆ ಮೊದಲು ದೀಕ್ಷಿತರೆಂದೂ ಅಡ್ಡ ಹೆಸರಿದ್ದಿತು. ಇವರ ತಂದೆ ನಾರೋಪಂತ ಅಥವಾ ನಾರಾಯಣ ಪಂಡಿತರು ತಾತ ತಿರುಮಲ ಪಂಡಿತ ಅಥವಾ ತ್ರಿಮಲ ಪಂಡಿತ ಎಂದು ತಿಳಿದು ಬರುತ್ತದೆ. ಈ ತಿರುಮಲ ಪಂಡಿತರು ಖಡ್ಗಧಾರಿಯಾಗಿ ರಣರಂಗದಲ್ಲಿ ಹನುಮಂತನಂತೆ ವೀರಾಗ್ರಣಿಯಾಗಿ ಹೋರಾಡುತ್ತಿದ್ದ ರಂತೆ. ಆದುದರಿಂದಲೇ ತಿರುಮಲ ಪಂಡಿತರಿಂದ ಈ ಮನೆತನಕ್ಕೆ 'ಹನುಮಂತೆ' ಎಂಬ ಅಡ್ಡ ಹೆಸರೂ ರೂಢಿಯಲ್ಲಿ ಬಂದಿರುವದಾಗಿ ಗ್ರಂಥಕಾರರು ಹೇಳುತ್ತಾರೆ. ಮೌದ್ಗಲ್ಯಗೋತ್ರದ ತಾವು ದೋದಾವರೀ ತೀರದ ನಿವಾಸಿಗಳಾದ ದೇಶಸ್ಥ ಬ್ರಾಹ್ಮಣ ವರ್ಗಕ್ಕೆ ಸೇರಿದವರೆಂದು, ಉತ್ತರಾದಿ ಮಠದ ಶಿಷ್ಯರೆಂದೂ ರಘುನಾಥರು ಹೇಳಿಕೊಂಡಿದ್ದಾರೆ.

ಶಹಾಜಿ ರಾಜನಿಗೆ ಜೀಜಾಬಾಯಿಯನ್ನು ಕೊಟ್ಟು ವಿವಾಹ ಮಾಡಿದ ಸಂದರ್ಭದಲ್ಲಿ ನಾರೋಪಂತ ಅಥವಾ ನಾರಾಯಣ ಹನುಮಂತೆಯವರು ಲಖೋಜಿ ಜಾಧವರ ಆಶ್ರಯದಲ್ಲಿದ್ದರು. ಶಹಾಜಿ

ಇವರನ್ನು ತನ್ನ ದಕ್ಷಿಣಭಾಗದ ಜಹಗೀರಿಯ ಮೇಲ್ವಿಚಾರಕನೆಂದು ಮುಂಜುಂದಾರಿಕೆಯ ಅಧಿಕಾರವನ್ನಿತ್ತು ಬೆಂಗಳೂರಿನಲ್ಲಿರುವಂತೆ ಏರ್ಪಾಟು ಮಾಡಿದ. ಈ ನಾರಾಯಣ ಹನುಮಂತೆಯವರಿಗೆ ರಘುನಾಥ ಪಂತ ಹಾಗೂ ಜನಾರ್ದನ ಪಂತ ಎಂಬಿಬ್ಬರು ಗಂಡು ಮಕ್ಕಳು. ಜನಾರ್ದನ ಪಂತ ಬಹು ಗಟ್ಟಿಮುಟ್ಟಾದ ಆಳು. ಗಂಭೀರ ಸ್ವಭಾವದವ ಈತನ ಕಾಲದಲ್ಲಿ ದಕ್ಷಿಣ ಭಾಗದಲ್ಲಿ ಕಾಣಿಸಿಕೊಂಡಿದ್ದ ಶೈವ-ವೈಷ್ಣವ ಎಂಬ ಭೇದಭಾವಗಳನ್ನು ಹೋಗಲಾಡಿಸಿ ಭಾಗವತ ಪಂಥಕ್ಕೆ ವಿಶೇಷ ಮಾನ್ಯತೆ ಲಭಿಸುವಂತಾಯಿತು.

ರಘುನಾಥ ಪಂತ ಅತ್ಯಂತ ಚಾಣಾಕ್ಷ. 'ಮಹಾ ಧೂರ್ತ'ರೆಂದು ಖ್ಯಾತಿ ಗಳಿಸಿದ್ದರು. ಮುಜುಂದಾರಿಕೆಯಲ್ಲಿ ಅಪ್ಪನಿಗೆ ನೆರವಾಗುತ್ತ ಬಹು ಚೊಕ್ಕಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಸಂದರ್ಭಾನುವರ್ತಿತನ ಇವರ ಹುಟ್ಟು ಗುಣವಾಗಿತ್ತು. ನಾರಾಯಣ ಹನುಮಂತೆಯವರ ಮರಣಾನಂತರ ಸೋದರರಿಬ್ಬರಿಗೂ ಶಹಾಜಿಯ ಆಶ್ರಯ ದೊರೆಯಿತು. ೧೬೬೪ರಲ್ಲಿ ಶಹಾಜಿಯು "ಹೊದಗೇರಿ" (ಚೆನ್ನಗಿರಿ ತಾಲ್ಲೂಕು ಕರ್ನಾಟಕ ರಾಜ್ಯ)ದಲ್ಲಿ ಮೃತನಾದ ಮೇಲೆ ಇವರಿಬ್ಬರೂ ಶಹಾಜಿ ರಾಜನ ಇನ್ನೊಬ್ಬ ಮಗನಾದ ವೆಂಕೋಜಿಯ ಆಶ್ರಯಕ್ಕೆ ಬಂದರು. ಆದರೆ ಕಾಲಾಂತರದಲ್ಲಿ ವೆಂಕೋಜಿಗೂ ಹನುಮಂತೆ ಬಂಧುಗಳಿಗೂ ಪರಸ್ಪರ ಭಿನ್ನಾಭಿಪ್ರಾಯಗಳುಂಟಾದುವು. ಛತ್ರಪತಿ ಶಿವಾಜಿ ಮಹಾರಾಜನು ೧೬೭೬ ಫೆಬ್ರುವರಿ ಸುಮಾರಿನಲ್ಲಿ ಸಾತಾರಾ ಕೋಟೆಯಲ್ಲಿ ವಿಪರೀತ ಖಾಯಿಲೆಯಿಂದ ಬಳಲುತ್ತಿರುವಾಗ ಬೆಂಗಳೂರಿನಿಂದ ಈ ಬಂಧುಗಳು ಸಾತಾರೆಯವರೆಗೆ ಬಂದು ಆತನ ದರ್ಶನ ಪಡೆದುಕೊಂಡರು. ಇದೇ ಸಂದರ್ಭದಲ್ಲಿ ಪಂತರಿಗೆ ಸಮರ್ಥ ರಾಮದಾಸರ ದರ್ಶನವೂ ಲಭಿಸಿತು. ಸಮರ್ಥರ ಅಪೇಕ್ಷೆಯ ಮೇರೆಗೆ ಹನುಮಂತೆಯವರು ತಂಜಾವೂರಿನಿಂದ ಕಳಿಸಿಕೊಟ್ಟರೆಂದು ಹೇಳಲಾಗುವ ಸೀತಾ-ರಾಮಚಂದ್ರರ ವಿಗ್ರಹಗಳು ಇಂದಿಗೂ ಸಜ್ಜನಗಡದಲ್ಲಿ ಪೂಜೆಗೊಳ್ಳುತ್ತಿರುವದನ್ನು ಕಾಣಬಹುದು.

ಛತ್ರಪತಿ ಶಿವಾಜಿ ಗೋವಳಕೊಂಡದವರ ಮನವೊಲಿಸಿಕೊಂಡು ದಕ್ಷಿಣದಲ್ಲಿ ಭದ್ರಕೋಟೆಗಳೆನಿಸಿದ ವೆಲ್ಲೂರು ಹಾಗೂ ಜಿಂಜೀ ಕೋಟೆಗಳನ್ನು ಕೈವಶ ಮಾಡಿಕೊಳ್ಳುವ ಕಾರ್ಯದಲ್ಲಿ ರಘುನಾಥ ಹನುಮಂತೆಯವರ ಪಾತ್ರ ವಿಶೇಷವಾಗಿತ್ತೆಂಬ ಸಂಗತಿ ಇತಿಹಾಸದ ಪುಟಗಳಲ್ಲಿದೆ. ತಾನು ಗೆದ್ದುಕೊಂಡ ದಕ್ಷಿಣದ ಈ ಭೂಪ್ರದೇಶಗಳ ಮುಜುಂದಾರರೆಂದು ರಘುನಾಥ ಹನುಮಂತೆಯವರನ್ನೇ ಛತ್ರಪತಿ ನಿಯಮಿಸಿದ. ಇದೇ ಸಂದರ್ಭದಲ್ಲಿ ತಿರುವಣ್ಣಾಮಲೈಯಲ್ಲಿ ಮಹಮ್ಮದೀಯರ ದಾಳಿಗೆ ತುತ್ತಾಗಿದ್ದ ಶಿವ ಮಂದಿರದ ಜೀರ್ಣೋದ್ಧಾರಗೈದು ಆ ದೇವಾಲಯಕ್ಕೆ "ಸಾಮೋ ತಿರುಮಲ" ದೇವಾಲಯವೆಂದು ಕರೆಯುವಂತೆ ಮಾಡಲಾಯಿತು. ಅದೇ ರೀತಿ ಬಹುಕಾಲದಿಂದ ಶ್ರೀಮುಷ್ಣದ ವೈಷ್ಣವ ಮತಾವಲಂಬಿಗಳಲ್ಲಿ ಪರಸ್ಪರವಾಗಿ ಬೆಳೆದು ಬಂದ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿದ ಶ್ರೇಯಸ್ಸು ಕೂಡ ರಘುನಾಥ ಹನುಮಂತೆಯವರಿಗೆ ಸಲ್ಲುವದು. ಮುಂದೆ ೧೬೭೮ರಲ್ಲಿ ಅವರು ಫ್ರೆಂಚರೊಂದಿಗೂ ಡಚ್ಚರೊಂದಿಗೂ ಸಂಧಾನ ಮಾಡಿಕೊಂಡು ರಾಜ್ಯ ವ್ಯವಹಾರಗಳನ್ನು ನಡೆಸಿದುದಾಗಿಯೂ ತಿಳಿದು ಬರುವದು.

ಈ 'ರಾಜಕೋಶ'ದ ಕಾರ್ಯದಲ್ಲಿ ಜಯರಾಮ ಪಿಂಡೆ ಎಂಬ ವಿದ್ವಾಂಸನೂ ಸಾಕಷ್ಟು ಪರಿಶ್ರಮ ವಹಿಸಿದ ಬಗ್ಗೆ ಗೊತ್ತಾಗುತ್ತದೆ. ಕೋಶ ಸಿದ್ಧತೆಯ ಕೇಂದ್ರ ಸ್ಥಾನವು ಬೆಂಗಳೂರೇ ಆಗಿದ್ದುದೊಂದು ವಿಶೇಷ. ಈ ಕೋಶವನ್ನು ಈಗಾಗಲೇ ಅನೇಕ ಮಹನೀಯರು ತಮತಮಗೆ ತಿಳಿದಂತೆ ವಿವರಗಳನ್ನಿತ್ತು ಪ್ರಕಟಿಸಿರುವುದುಂಟು.

೧೮೬೦ರಲ್ಲಿ ಮುಂಬಯಿ ನಿವಾಸಿಗಳಾಗಿದ್ದ ಗಣಪತಿ ಕೃಷ್ಣಾಜಿ ಎಂಬುವವರಿಂದ ಹತ್ತು ವರ್ಗಗಳವರೆಗೆ ಈ ಗ್ರಂಥ ಪ್ರಕಟಗೊಂಡಿತು. ಅದಕ್ಕೆ ಮೊದಲು ಅಂದರೆ ೧೮೩೦ರಲ್ಲಿ ಕಾಶೀನಾಥ ಸಾನೆ ಎಂಬುವವರೂ ಈ ಗ್ರಂಥವನ್ನು ಪ್ರಕಟಿಸಿದ್ದರು. ೧೮೮೦ರಲ್ಲಿ ಕಾಶೀನಾಥ ನಾರಾಯಣ ಪುಣೆ ಇವರು ಈ ಕೋಶದ ಕುರಿತು

ಕೃತಿಯೊಂದನ್ನು ರಚಿಸಿದರು. ೧೯೨೫ರಲ್ಲಿ ಸ.ಮ. ದಿವೆ ಎಂಬ ವಿದ್ವಾಂಸರಿಂದಲೂ ಈ ಕೋಶದ ಕೆಲಸವಾಯಿತು. ಅಷ್ಟೇ ಅಲ್ಲ ೧೯೫೬ರಲ್ಲಿ ಗೋಗಟೆಯವರೂ, ೧೯೭೦ರಲ್ಲಿ ಚಿದಂಬರ ಕುಲಕರ್ಣಿಯವರೂ ಈ ಕೋಶವನ್ನು ಪರಿಷ್ಕರಿಸಿ ಹೊರತಂದರು.

ಈ ಕೋಶದಲ್ಲಿ ೧) ರಾಜ ವರ್ಗ, ೨) ಕಾರ್ಯಸ್ಥಾನ ವರ್ಗ, ೩) ಭೋಗ್ಯ ವರ್ಗ, ೪) ಶಸ್ತ್ರ ವರ್ಗ, ೫) ಚತುರಂಗ ವರ್ಗ, ೬) ಸಾಮಂತ ವರ್ಗ, ೭) ದುರ್ಗ ವರ್ಗ, ೮) ಲೇಖನ ವರ್ಗ, ೯) ಜನಪದ ವರ್ಗ, ೧೦) ಪಣ್ಯ ವರ್ಗ -ಎಂದು ಹತ್ತು ವರ್ಗಗಳನ್ನು ಮಾಡಲಾಗಿದೆ. ಈ ಎಲ್ಲ ವರ್ಗಗಳ ಕುರಿತು ಸದ್ಯ ಇಲ್ಲಿ ವಿವರಿಸುವುದು ಅಸಾಧ್ಯದ ಮಾತು.

ನಮ್ಮ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಬಹು ಕಾಲದಿಂದ ನಿಘಂಟುಗಳನ್ನೂ ಕೋಶಗಳನ್ನೂ ಹೊರತರುವ ಕಾರ್ಯದಲ್ಲಿ ನಿರತವಾಗಿದೆ. ಆದರೆ ಇಂಥದೊಂದು ಕಾರ್ಯವು ಮೂರುನೂರು ವರ್ಷಗಳ ಹಿಂದೆ ಇದೇ ಬೆಂಗಳೂರಿನಲ್ಲಿ ಯಾವ ರೀತಿಯಲ್ಲಿ ನಡೆಯಿತು? ಈಗಿನ ಸ್ಥಿತಿಗೆ ಹೋಲಿಸಿದರೆ ಆಗ ಇದ್ದ ಅನುಕೂಲಗಳು ಎಷ್ಟು? ಅದರ ಮಹತ್ವ ಏನು? ಎಂಬ ವಿಷಯವನ್ನು ಅರಿತುಕೊಳ್ಳುವದು ಅತಿ ಮುಖ್ಯ. ಇತಿಹಾಸದ ಗರ್ಭದಲ್ಲಿ ಇಂಥ ಅನೇಕ ಮಹತ್ವದ ಕಾರ್ಯಗಳ ಸುಳಿವು ನೋಡುವ ಕಣ್ಣುಗಳಿಗೆ, ಅರಿಯುವ ಹೃದಯಗಳಿಗೆ ಸಿಕ್ಕೇಸಿಕ್ಕುತ್ತದೆ.



# ದಾಸ ವಿಶ್ರಾಮಧಾಮ

ಮಹಾನುಭಾವರಾದ ಶ್ರೀ ಸಮರ್ಥ ರಾಮದಾಸರು ಛತ್ರಪತಿ ಶಿವಾಜಿ ಮಹಾ ರಾಜರ ಕಾಲದಲ್ಲಿ ಆತನಿಗೆ ಮಾರ್ಗದರ್ಶನ ಮಾಡಲು ಸಮಗ್ರ ಭಾರತವನ್ನು ಸಂಚಾರ ಮಾಡಿ ಜನಮಾನಸದಲ್ಲಿ ಧರ್ಮದ ಜಾಗೃತಿಯನ್ನುಂಟು ಮಾಡಲು ಕೀರ್ತನ ಪರಂಪರೆಯನ್ನು ಬೆಳೆಸಿದರು. ಧರ್ಮದ ಜಾಗೃತಿಯೊಂದಿಗೆ ಪುನರುತ್ಥಾನದ ಕಾರ್ಯವನ್ನೂ ಸಹ ತಮ್ಮ ಹರಿಕಥಾ ಮಾಧ್ಯಮದಿಂದ ಅವರು ಸಾಧಿಸಿ ತೋರಿಸಿದರು. ಈ ಮಹನೀಯರು ೧೬೮೮ರಲ್ಲಿ ಸಜ್ಜನಗಡದಲ್ಲಿ ತಮ್ಮ ದೇಹ ತ್ಯಾಗವನ್ನು ಮಾಡಿದರು.

ಅಂದು ಸಮರ್ಥರು ಪ್ರಾರಂಭಿಸಿದ ಪರಂಪರೆಯನ್ನು ಅವರ ಶಿಷ್ಯರು ಮುಂದುವರೆಸಿಕೊಂಡು ಬಂದರು, ಶ್ರೀರಾಮದಾಸರ ಶಿಷ್ಯ ಪರಂಪರೆಯಲ್ಲಿ ಕಲ್ಯಾಣಜಿ ಮಹಾರಾಜ ಎಂಬುವವರು ಪ್ರಸಿದ್ಧರು, ಇವರು ಡೋಮಗಾಂ ಎಂಬಲ್ಲಿ ತಮ್ಮ ಮಠವನ್ನು ಆರಂಭಿಸಿದರು. ಈ ಸ್ಥಳವು ಕುರಡವಾಡಿಯಿಂದ ಹದಿನೈದು ಮೈಲಿನ ಮೇಲಿದ್ದು ಬಾರ್ಶಿಯಿಂದ ಇಪ್ಪತ್ತೈದು ಮೈಲಿನ ಅಂತರದಲ್ಲಿದೆ. ಕಲ್ಯಾಣ ಸ್ವಾಮಿಗಳು ೧೭೧೪ರಲ್ಲಿ ಕಾಲವಾದರು.

ಈ ಕಲ್ಯಾಣ ಸ್ವಾಮಿ ಶಿಷ್ಯರು ಶಿವರಾಮ ಬುವಾ ಎಂಬುವವರು. ಇವರು ಕರ್ನಾಟಕ ರಾಜ್ಯದ ಕಲಬುರ್ಗಿ ಜಿಲ್ಲೆಯಲ್ಲಿರುವ ಮಹಗಾಂ

ಎಂಬ ಸ್ಥಳದಿಂದ ಹದಿನೈದು ಮೈಲಿನ ಅಂತರದಲ್ಲಿರುವ ಆಪಚಂದ ಎಂಬ ಊರಿನಲ್ಲಿ ತಮ್ಮ ಮಠವನ್ನಾರಂಭಿಸಿದರು. ಇವರು ೧೭೨೬ರಲ್ಲಿ ಕಾಲವಾದರು.

ಕಲಬುರ್ಗಿಯ ಜಿಲ್ಲೆಯಲ್ಲಿ ಪ್ರಾರಂಭಿಸಲ್ಪಟ್ಟ ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದವರು, ರಟಕಲ್ ಕುಲಕರ್ಣಿ ಮನೆತನದ ರಾಮಚಂದ್ರ ಬುವಾ ಎಂಬುವರು (ಕಾಲ ೧೭೭೮) ಈ ರಾಮಚಂದ್ರ ಬುವಾರವರ ಶಿಷ್ಯರೇ ಆತ್ಮಾರಾಮಬುವಾ ಎಂಬುವವರು. ಮೂಲತಃ ಇವರು ಕಲಬುರ್ಗಿ ಜಿಲ್ಲೆಯ ಇತಿಹಾಸ ಪ್ರಸಿದ್ಧ ಸ್ಥಳವೆನಿಸಿಕೊಳ್ಳುವ ಮಳಖೇಡದ ಸಮೀಪದಲ್ಲಿರುವ "ನಾಗದ" ಎಂಬ ಗ್ರಾಮದವರು. ಇವರ ಪೂರ್ವಾಶ್ರಮದ ಹೆಸರು ತಿಪ್ಪಣ್ಣ ಎಂದು ಗೊತ್ತಾಗುವುದು.

ಆತ್ಮಾರಾಮಬುವಾ ಇವರು ತಮ್ಮ ಜೀವಿತಾವಧಿಯಲ್ಲಿ, ಶ್ರೀ ಸಮರ್ಥರಾಮ ದಾಸರು ತಮ್ಮ ಕಾಲದಲ್ಲಿ ಭಾರತವನ್ನೆಲ್ಲಾ ಸಂಚಾರ ಮಾಡಿದಾಗ ಅವರು ತೋರಿದ ಮಹಿಮಾತಿಯಶಗಳು, ಅವರಿಂದ ನಡೆಸಲ್ಪಟ್ಟ ಕೀರ್ತನೆಗಳು ಹಾಗೂ ಕಥಾಭಾಗಗಳ ವಿವರ, ಸ್ಥಳ ಪರಿಚಯಗಳ ವಿವರ, ಇವೇ ಮೊದಲಾದ ವಿಷಯಗಳಿಂದ ಕೂಡಿದ ಒಂದು ಗ್ರಂಥವನ್ನು ರಚಿಸಿ ಆ ಗ್ರಂಥಕ್ಕೆ "ದಾಸವಿಶ್ರಾಮಧಾಮ" ಎಂಬ ಹೆಸರಿಟ್ಟರು.

ಆತ್ಮಾರಾಮಬುವಾ ಇವರು ಅಪ್ಪಟ ಕನ್ನಡಿಗರು. ಮಾತೃಭಾಷೆ ಕನ್ನಡ. ಆದರೆ ಅವರಿಗೆ ಮರಾಠಿ ಭಾಷೆ ಚೆನ್ನಾಗಿ ಬರುತ್ತಿತ್ತು. ಅವರಿಂದ ರಚಿತವಾದ "ದಾಸವಿ ಶ್ರಾಮಧಾಮ" ಎಂಬ ಗ್ರಂಥವನ್ನೋದುತ್ತಿದ್ದಂತೆ ನಮಗೆ ಈ ಮಾತಿನ ಸ್ಪಷ್ಟವಾದ ಅಭಿಪ್ರಾಯವು ಮೂಡುತ್ತದೆ. ಅವರು ಮರಾಠಿಯಲ್ಲಿ ಕೃತಿರಚನೆ ಮಾಡಿದ್ದರೂ ಸಹ ಆ ಗ್ರಂಥದಲ್ಲಿ ಕನ್ನಡ ಶಬ್ದಗಳು ನಿರಾಯಾಸವಾಗಿ ವಕ್ಕೂಡಿಕೊಂಡು ಬಂದಿವೆ. ಈ ಮಹನೀಯರು ಕೆಲವು ಕಾಲದ ನಂತರ ಬೀದರ ಜಿಲ್ಲೆಗೆ ಹೋಗಿ ಎಕ್ಕೀಹಳ್ಳಿ ಎಂಬ ಗ್ರಾಮದಲ್ಲಿ ತಮ್ಮ ಮಠವನ್ನಾರಂಭಿಸಿದರು. ಈಗ ಈ ಗ್ರಾಮವು ತೆಲಂಗಾಣದಲ್ಲಿಯ ಜಹೀರಾಬಾದಕ್ಕೆ ಸೇರಿದೆ.

"ದಾಸವಿಶ್ರಾಮಧಾಮ" ಈ ಗ್ರಂಥವು ಬಹುದಿನಗಳವರೆಗೆ ಬೆಳಕನ್ನು ಕಾಣದೆ ಮಠದಲ್ಲಿ ಪ್ರತಿದಿನ ಪೂಜೆಗೊಳ್ಳುತ್ತಿತ್ತು. ನಾಡಿನ ಸುದೈವದಿಂದ ಸಮರ್ಥ ಸಂಶೋಧನಾ ಮಂಡಳವೆಂಬ ಸಂಸ್ಥೆಯು ಹುಟ್ಟಿಕೊಂಡಿತು. ಈ ಸಂಸ್ಥೆಯವರು ರಾಮದಾಸರ ಜೀವನಕ್ಕೆ ಸಂಬಂಧಿಸಿದ ಪ್ರತಿಯೊಂದು ಘಟನೆಯನ್ನು ಸಂಗ್ರಹಿಸಲು ಅವರು ಸಂಚರಿಸಿದ ಸ್ಥಳಗಳಿಗೆಲ್ಲ ಭೇಟಿ ಕೊಡಲಾರಂಭಿಸಿದರು. ಈ ಸಂಸ್ಥೆಯ ಸಂಚಾಲಕರಾದ ಶಂಕರರಾವ್ ಕೃಷ್ಣರಾವ್ ದೇವ ಎಂಬ ಮಹನೀಯರಿಗೆ ದಾಸವಿಶ್ರಾಮಧಾಮ ಗ್ರಂಥವು ಕಣ್ಣಿಗೆ ಬಿದ್ದಿತು. ಇವರು ಒಳ್ಳೇ ನ್ಯಾಯವಾದಿಗಳೆಂದೂ, ಇತಿಹಾಸ ಪ್ರಿಯರೆಂದೂ ಖ್ಯಾತರಾಗಿದ್ದರು. ಇವರ ಪರಿಶ್ರಮದಿಂದಾಗಿ ೧೯೨೦ರಲ್ಲಿ ಮೊಟ್ಟಮೊದಲ ಬಾರಿ ದಾಸವಿಶ್ರಮಧಾಮ ಎಂಬ ಗ್ರಂಥವು ಅಚ್ಚಾಗಿ ಹೊರಬಂದಿತು. ಇದು ಕ್ರೌನ್ ೧/೪ ಆಕಾರದಲ್ಲಿದ್ದು ೯೭೪ ಪುಟಗಳಿಂದ ಕೂಡಿದುದಾಗಿದೆ. ಈ ಎಪ್ಪತ್ತು ವರುಷಗಳ ಕಾಲಾವಧಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಣಗೊಂಡು ಮಹಾರಾಷ್ಟ್ರದ ಪ್ರತಿಯೊಬ್ಬ ಸಂತ ಸಾಹಿತ್ಯ ಪ್ರೇಮಿಯ ಮನವನ್ನು ಆಕರ್ಷಿಸಿಕೊಂಡು ಪ್ರತಿದಿನವೂ ಪೂಜೆ ಚಿಂತನ ಹಾಗೂ ಜೀವನ ಮಂಥನವನ್ನು ನಡೆಸಿರುವುದು ಕಂಡು ಬರುವುದು. ಮಹಾರಾಷ್ಟ್ರದ ರಾಮದಾಸ ಭಕ್ತರು ಬಹು ಶ್ರದ್ಧೆಯಿಂದ ಈ ಗ್ರಂಥವನ್ನು ಓದುತ್ತಾರೆ. ರಾಮಾಯಣ ಮಹಾಭಾರತಗಳಂತೆ ಸಮಗ್ರ ಮಹಾರಾಷ್ಟ್ರದಲ್ಲಿ ದಾಸವಿಶ್ರಾಮಧಾಮವು ಜನಮನದಲ್ಲಿ ತನ್ನದೇ ಆದ ಸ್ಥಾನಮಾನವನ್ನು ಗಳಿಸಿಕೊಂಡಿದೆ.

ಗ್ರಂಥದ ಮೂಲ ಲೇಖಕರಾದ ಆತ್ಮಾರಾಮಬುವಾ ಇವರು ದಾಸವಿಶ್ರಾ ಮಧಾಮದ ನಾಲ್ಕನೆಯ ಖಂಡದಲ್ಲಿ ತಮ್ಮ ಮಾತೃಸ್ಥಳವಾದ ಕಲಬುರ್ಗಿಯ ಜಿಲ್ಲೆಯ ಅಂದಿನ ಸ್ಥಿತಿಗತಿಗಳನ್ನು ಕುರಿತು ಚೆನ್ನಾಗಿ ವರ್ಣನೆ ಮಾಡಿದ್ದಾರೆ, ಒಂದು ರೀತಿಯಲ್ಲಿ ಆ ಭಾಗವು ಜಿಲ್ಲೆಯ ಅಂದಿನ ದಿನದ ಕೈಪಿಡಿಯಂತೆ ನಮಗೆ ತೋರಿಬರುತ್ತದೆ.

ಒಂದು ದಿನ ಇವರು ತಮ್ಮ ಜನ್ಮಸ್ಥಳಕ್ಕೆ ಸಮೀಪವಾದ ಮಳಖೇಡದಲ್ಲಿರುವ ಜಯತೀರ್ಥರ ವೃಂದಾವನದ ದರ್ಶನಾಪೇಕ್ಷಿಗಳಾಗಿ

ಅಲ್ಲಿಗೆ ಹೋಗಿದ್ದರಂತೆ, ಆಗ ಅವರಿಗೆ ಆ ವೃಂದಾವನವನದ ಮೇಲೆ ಘಟಸರ್ಪದ ದರ್ಶನವು ತಮಗಾಯಿತೆಂದೂ ಕಾಗಿಣೆತೀರದಲ್ಲಿರುವ ಈ ಸ್ಥಳವು ಪರಮ ಪವಿತ್ರವಾದುದೆಂದೂ ಅವರು ಜಯತೀರ್ಥರನ್ನು ಕುರಿತು ಹೇಳಿಕೊಂಡಿದ್ದಾರೆ.

ಇಂದು ತಮಗೆ ತಿಳಿದೋ ಅಥವಾ ತಿಳಿಯದೇಯೋ ಜಯತೀರ್ಥರ ವೃಂದಾವನವು ಮಳಖೇಡದಲ್ಲಿಲ್ಲ ಎಂದು ಗುಲ್ಲನ್ನೆಬ್ಬಿಸಿದ್ದಾರೆ. ಅಂಥವರು ಒಂದು ಸಲ ದಾಸವಿಶ್ರಾಮಧಾಮವನ್ನು ಚೆನ್ನಾಗಿ ಓದಿನೋಡುವದು ವಿಹಿತ. ಸುಮಾರು ನೂರಾ ಎಪ್ಪತ್ತು ವರುಷಗಳ ಹಿಂದೆ ರಚಿತವಾದ ಈ ಗ್ರಂಥದಲ್ಲಿ ಕಲಬುರ್ಗಿ ಹಾಗೂ ಮಳಖೇಡಗಳು ಹೇಗಿದ್ದವು ಎಂಬುದರ ಅರಿವಾಗುತ್ತದೆ.

ಹುಟ್ಟು ಕನ್ನಡಿಗರಾಗಿದ್ದು ಮಹಾಮಹಿಮರಾದ ಶ್ರೀ ಸಮರ್ಥ ರಾಮದಾಸರ ಪರಂಪರೆಯನ್ನು ಕರ್ನಾಟಕದಲ್ಲಿ ಉಳಿಸಿಕೊಂಡು ಬಂದವರಲ್ಲದೆ ಅವರ ಜೀವನದ ಮೇಲೆ ಎಂದೂ ನಶಿಸದಿದ್ದಂತಹ ಹೊಸ ಬೆಳಕನ್ನು ಬೆಳಗುವಂತೆ ಮಾಡಿದ ಕೀರ್ತಿಯ ಕನ್ನಡಿಗರಾದ "ಆತ್ಮರಾಮಬುವಾ" ಅವರದಾಗಿದೆ. ಸಂತ ಸಮಾಜಕ್ಕೆ ಅವರು ಅತ್ಯದ್ಭುತವಾದ ನಂದಾದೀವಿಗೆಯನ್ನು ಇಟ್ಟಿದ್ದಾರೆ, ಇಂದು ಮಹಾರಾಷ್ಟ್ರದಲ್ಲಿಯ ಪ್ರತಿಯೊಬ್ಬ ಸಂತರ ಮನದಲ್ಲಿ ಹಾಗೂ ರಾಮದಾಸರ ಪ್ರೇಮಿಗಳ ಮನದಲ್ಲಿ ನಾವು ಈ ದಿವ್ಯಜ್ಯೋತಿಯನ್ನು ಕಾಣುವಂತೆ ಮಾಡಿದ್ದಾರೆ. ಇಂಥ ಮಹನೀಯರಿಗೆ ಜನ್ಮವಿತ್ತ ಕನ್ನಡನಾಡು ನಮಗೆ ವಿಠ್ಠಲನಷ್ಟೇ ಪೂಜ್ಯವಾದುದು. ರಾಮದಾಸ ಭಕ್ತರು ಹೃದಯ ತುಂಬಿ ಹೇಳುವುದನ್ನು ಕೇಳಿದಾಗ ಕನ್ನಡಿಗರ ಹೃದಯವು ಕೃತಾರ್ಥ ಭಾವನೆಯನ್ನು ತಾಳುತ್ತದೆ.



# ಆಧ್ಯಾತ್ಮಕ್ಕೆ ಆಚಾರ್ಯ ಮಧ್ವರ ಕೊಡುಗೆ

---

ನಮ್ಮ ರಾಷ್ಟ್ರದ ದರ್ಶನಾಚಾರ್ಯರಲ್ಲಿ ಶ್ರೀ ಶಂಕರಾಚಾರ್ಯರು ಕೇರಳದಲ್ಲಿ ಜನಿಸಿದರು. ರಾಮಾನುಜಾಚಾರ್ಯರು ತಮಿಳುನಾಡಿನವರು. ಮೂರನೇಯವರಾದ ಆಚಾರ್ಯ ಮಧ್ವರು ಮಾತ್ರ ಅಪ್ಪಟ ಕನ್ನಡನಾಡಿನಲ್ಲಿ ಜನಿಸಿ ವಿಶ್ವಕ್ಕೆ ದ್ವೈತದರ್ಶನವನ್ನು ಬೋಧಿಸಿದ ಮಹಾಪುರುಷರೆನಿಸಿಕೊಂಡರು. ದಾರ್ಶನಿಕರು ಎಂದರೆ ದರ್ಶನಶಾಸ್ತ್ರ ಪ್ರತಿಪಾದಕರು ಎಂದರ್ಥ. ಇದೇ ಮಾತನ್ನು ನ್ಯಾಯಕೋಶಕಾರರು "ತತ್ವಜ್ಞಾನ ಸಾಧನಂ ಶಾಸ್ತ್ರಂ" ಎಂದು ವಿವರಿಸಿರುವದುಂಟು.

ಉಡುಪಿ-ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶದಲ್ಲಿಯ ಪುಣ್ಯಕ್ಷೇತ್ರ. ಉಡು ಎಂದರೆ ಸರ್ಪ, ದಕ್ಷಿಣ ಕನ್ನಡದಲ್ಲಿ ನಾಗಮಂಡಲ ಪೂಜೆ, ನಾಗಾರಾಧನೆ ಇವುಗಳಿಗೆ ಇಂದಿಗೂ ವಿಶೇಷ ಮಹತ್ವವಿದೆ. ಈ ನಾಡನ್ನು ಒಂದು ಕಾಲದಲ್ಲಿ ರಾಮಭೋಜನೆಂಬ ದೊರೆ ರಾಜ್ಯವನ್ನಾಳುತ್ತಿದ್ದನೆಂದು ಇತಿಹಾಸದ ಅಭ್ಯಾಸದಿಂದ ತಿಳಿದುಬರುತ್ತದೆ.

ಮಧ್ವಾಚಾರ್ಯರು ಉಡುಪಿಯ ಸಮೀಪವರ್ತಿ ಸ್ಥಳವಾದ ಪಾಜಕ ಗ್ರಾಮದಲ್ಲಿ ಜನ್ಮತಾಳಿದರು. ಈ ಮಹಾನುಭಾವರ

ಜೀವನಚರಿತ್ರೆಯನ್ನು ಅರಿತುಕೊಳ್ಳಲು ಸುಮಧ್ವ ವಿಜಯವೆಂಬ ಸಂಸ್ಕೃತ ಕಾವ್ಯ ಗ್ರಂಥವೇ ಮೂಲಾಧಾರ. ಈ ಗ್ರಂಥವನ್ನು ರಚಿಸಿದವರು ಕವಿಕುಲ ತಿಲಕರೆನಿಸಿದ ತ್ರಿವಿಕ್ರಮ ಪಂಡಿತಾಚಾರ್ಯರ ಮಕ್ಕಳಾದ ನಾರಾಯಣ ಪಂಡಿತಾಚಾರ್ಯರು. ಆಚಾರ್ಯರನ್ನು ಹನುಮ, ಭೀಮ, ಮಧ್ವ ಎಂದು ಅವತಾರತ್ರಯಗಳಲ್ಲಿ ಅವರನ್ನು ವರ್ಣಿಸಿದುದು ವಿಶೇಷವೆನಿಸುವುದು.

ಶ್ರೀಮನ್ಮಧ್ವಾಚಾರ್ಯರು ಕ್ರಿ.ಶ. ೧೨೩೮ರಲ್ಲಿ ಜನ್ಮಿಸಿದರೆಂದೂ ಭಾರತದಾದ್ಯಂತ ಜೀವೇಶ್ವರ ಬೇಧವಾದವೆಂದೆನಿಸಿದ ದ್ವೈತಮತವನ್ನು ಪ್ರಚಾರ ಮಾಡುತ್ತಾ ಕ್ರಿ.ಶ. ೧೩೩೮ರಲ್ಲಿ ಅದೃಶ್ಯರಾದರೆಂದೂ ಕೆಲವು ವಿದ್ವಾಂಸರ ಅಭಿಪ್ರಾಯವಿರುವದು.

**ಕೃತಿ ರತ್ನಗಳು:** ಆಚಾರ್ಯ ಮಧ್ವರು ತಮ್ಮ ಜೀವಿತಾವಧಿಯಲ್ಲಿ ಮೂವತ್ತೇಳು ಕೃತಿರತ್ನಗಳನ್ನು ವೇದಾಂತ ಸಾಹಿತ್ಯಕ್ಕೆ ಒದಗಿಸಿದರು. ಈ ಮಾತನ್ನು ವ್ಯಾಸರಾಯರು ಕೃತಿರತ್ನಮಾಲಿಕಾ ಎಂಬ ಕೃತಿಯಲ್ಲಿ ವರ್ಣಿಸಿರುವುದುಂಟು. ಮಧ್ವಾಚಾರ್ಯರಿಗೆ ಪೂರ್ಣಪ್ರಜ್ಞರೆಂದೂ, ಆನಂದತೀರ್ಥರೆಂದೂ, ಸರ್ವಜ್ಞಾಚಾರ್ಯ ರೆಂದೂ ಕರೆದಿರುವುದನ್ನು ಅವರ ಶಿಷ್ಯರಿಂದ ರಚಿತವಾದ ಅನೇಕ ಗ್ರಂಥಗಳಲ್ಲಿ ಕಾಣಬಹುದು. ಆಚಾರ್ಯರ ಗ್ರಂಥರಚನಾ ಶೈಲಿಯು ಅತ್ಯಂತ ಸುಲಭವೂ, ಗಾಂಭೀರ್ಯಯುಕ್ತವೂ, ವ್ಯವಹಾರ ಯೋಗ್ಯವೂ ಆದ ಸತ್ವದ ಸಂದೇಶವಾಗಿದೆ ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸತ್ವಪೂರಿತ ಸಂದೇಶವನ್ನಿತ್ತ ಮಹಾ ವಿಭೂತಿಪುರುಷರೆಂದು ಮುಂದಿನ ಟೀಕಾಕಾರರೆಲ್ಲಾ ಇವರನ್ನು ಗೌರವದಿಂದ ಹೊಗಳಿರುವುದನ್ನು ನಾವು ಸಾಹಿತ್ಯಾಭ್ಯಾಸದಿಂದ ಅರಿತುಕೊಳ್ಳಬಹುದು.

ಜಗತ್ತು ಮಾತ್ರ ಸತ್ಯ, ಆತ್ಮ ಹಾಗೂ ಪರಮಾತ್ಮ ಎಂಬುದೆಲ್ಲ ಅತೀಂದ್ರಿಯ ಪ್ರಪಂಚ ಅದು ಕಲ್ಪನಾಜಾಲ ಎಂಬುದು ಭೌತಿಕವಾದವೆನಿಸಿದೆ. ಆತ್ಮವೊಂದೇ ಸತ್ಯ, ದೃಶ್ಯ ಪ್ರಪಂಚವು ಬರೀ ಭ್ರಮೆ ಎಂದು ವಾದಿಸುವ ಸಿದ್ದಾಂತ ವಾದಿಗಳೂ ಇದ್ದಾರೆ.

ಇಂಥವರನ್ನು ನಿರ್ಗುಣ ಬ್ರಹ್ಮೋಪಾಸಕರೆಂದು ಗುರುತಿಸುವುದುಂಟು ಆದರೆ ಇಂಥ ವಿಚಾರಗಳೆಲ್ಲ ಅಪೂರ್ಣತೆಯಿಂದ ಕೂಡಿದವುಗಳಾಗಿವೆ. ಕರ್ತವ್ಯ ಎಂದರೆ ಕೇವಲ ಆರಾಧನೆ, ಪೂಜೆ, ಜಪ, ತಪ, ವ್ರತ ನಿಯಮಾದಿಗಳು ಅಥವಾ ಅವುಗಳ ಅನುಷ್ಠಾನಗಳಿಗೆ ಸೀಮಿತ ಎಂದು ಭಾವಿಸಬಾರದು. ದೀನದಲಿತರ ಸೇವೆಯಲ್ಲಿ ತನ್ನನ್ನು ಸಮರ್ಪಿಸಿ ಕೊಳ್ಳುವುದು ಅಷ್ಟೇ ಮಹತ್ವದ ಕಾರ್ಯವೆನಿಸುವುದು. ಕಡ್ಡಾಯವಾಗಿ ಈ ಕೆಲಸವನ್ನು ಮಾಡಿಯೇ ತೀರಬೇಕು. ಈ ಮಾತನ್ನು ಸ್ಪಷ್ಟವಾಗಿ ಸಾರಿದವರು ಮಧ್ವಾಚಾರ್ಯರು. ಆದುದರಿಂದಲೇ ಅವರ ಈ ಸಂದೇಶವನ್ನು ವಿಶ್ವಸಂದೇಶವೆಂದು ಗುರುತಿಸಲಾಗುವುದು. ಅಧ್ಯಾತ್ಮ ಹಾಗೂ ವಿಜ್ಞಾನದ ಜಡವಾದ ಮತ್ತು ಈಶ್ವರ ದೈವ ಪೌರುಷಗಳ ಸಮನ್ವಯ ಭಾವವನ್ನು ಎತ್ತಿತೋರಿಸಿದವರು ಆನಂದತೀರ್ಥರು. ಪಂಚಭೇದ ತಾರತಮ್ಯಯುತವಾದ ವಾದವನ್ನು ಬಹು ಸ್ಪಷ್ಟ ರೀತಿಯಲ್ಲಿ ಅವರು ಬಿಡಿಸಿ ತೋರಿಸಿದ್ದಾರೆ. ಎಂಟುನೂರಾನಲ್ವತ್ತು ವರುಷಗಳ ಹಿಂದೆ ಮಂಡಿಸಲಾದ ಈ ಸಿದ್ಧಾಂತವನ್ನು ಜೀವೇಶ್ವರಭೇದವಾದ ಸಿದ್ಧಾಂತವೆಂದೇ ಗುರುತಿಸಲಾಗುತ್ತಿದೆ. ಈಶ ಎಂದರೆ ಸೃಷ್ಟಿಕರ್ತನಾದ ಭಗವಂತ. ಇನ್ನು ದಾಸನೆಂದರೆ ಜೀವ. ಈ ಭೇದವಾದ ತತ್ವವನ್ನು ಆಚಾರ್ಯರ ನಂತರ ಬಂದ ಹರಿದಾಸರು ಜನಮನಕ್ಕೆ ಸುಲಭವಾಗಿ ಸ್ಪಂದನವಾಗುವಂತೆ ತಮ್ಮ ಕೃತಿಗಳಲ್ಲಿ ಗೀತರೂಪಕಗಳಲ್ಲಿ ರಚಿಸಿ ತೋರಿಸಿದ್ದಾರೆ. ಆಚಾರ್ಯರ ಮತವು ಭಕ್ತಿಪ್ರಧಾನವಾದ ಮತವೆಂದೆನಿಸಿ ಕೊಂಡಿದೆ.

ವಿಜಯದಶಮಿಯ ಶುಭದಿನದಂದು ಕ್ಷೇತ್ರಪಾಲ ಉಡುಪಿಯ ಅನಂತೇಶ್ವರನ ದರ್ಶನ ಪಡೆದು ಮದ್ಯಗೇಹಭಟ್ಟರು ಪಾಜಕಕ್ಕೆ ಬಂದಾಗ ಶುಭವಾರ್ತೆಯನ್ನು ಕೇಳಿದರು. ವಂಶೋದ್ಧಾರಕನ ಜನನವು ಹರ್ಷವನ್ನುಂಟು ಮಾಡಿತು. ಕಡುಬಡತನದಲ್ಲಿದ್ದ ಈ ಕುಟುಂಬದ ಪರಿಸ್ಥಿತಿಯನ್ನು ಕಂಡು ಪಕ್ಕದ ಮನೆಯವರು ಮಗುವಿಗಾಗಿ ಹಸುವನ್ನು ತಂದು ಕಟ್ಟಿದರು. ಒಂದು ಸುಮುಹೂರ್ತದಲ್ಲಿ ಭಟ್ಟರು ಮಗನಿಗೆ "ವಾಸುದೇವ" ಎಂದು ನಾಮಕರಣ ಮಾಡಿದರು.

ಪುಟ್ಟ ಬಾಲಕನ ಆಟಪಾಟಗಲನ್ನು ನೋಡುವುದರಲ್ಲಿ ದಂಪತಿಗಳು ಸ್ವರ್ಗಸುಖವನ್ನು ಅನುಭವಿಸತೊಡಗಿದರು. ದಿನಗಳೆದಂತೆಲ್ಲಾ ಅಂಬೆಗಾಲಿಡುವುದನ್ನು ಹಿಂದೆ ತಳ್ಳಿ ಈಗ ಪುಟ್ಟ ಪುಟ್ಟ ಹೆಜ್ಜೆಗಳನ್ನಿಡತೊಡಗಿದನು. ಮನೆತುಂಬಾ ಚಲಿಸುತ್ತಿದ್ದ ವಾಸುದೇವ ಇದ್ದಕ್ಕಿದ್ದಂತೆ ಕಾಣೆಯಾದನು. ಆಗ ದಂಪತಿಗಳಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಪರಿಸರವನ್ನೆಲ್ಲ ಶೋಧಿಸಿದರು. ಹತಾಶರಾಗಿ ದೇವನಲ್ಲಿ ಮೊರೆ ಹೋದರು. ಸಾಯಂಕಾಲ ಗೋಧೂಲಿ ಸಮಯದಲ್ಲಿ ಹಸುವಿನ ಬಾಲ ಹಿಡಿದುಕೊಂಡು ವಾಸುದೇವ ಕಾಡಿನಿಂದ ಮರಳಿ ಬರುತ್ತಿರುವುದನ್ನು ಕಂಡಾಗ ಹೋದ ಪ್ರಾಣವೇ ಮರಳಿ ಬಂತಂತೆನಿಸಿತು. ತಾಯಿ ಭರದಿಂದ ಮುಂದೆ ಬಂದು ಮಗುವನ್ನೆತ್ತಿ ಮುದ್ದಾಡಿದಳು.

ಬಾಲಕನಾದ ವಾಸುದೇವನು ಬಹು ಕುಶಾಗ್ರಮತಿಯಾಗಿದ್ದನು. ಆತನಿಗೆ ಒಂದು ಸಲ ಹೇಳಿದುದನ್ನು ಪುನಃ ಹೇಳಿಸಿಕೊಳ್ಳುವುದು ಸರಿಬರುತ್ತಿರಲಿಲ್ಲ. ಈ ವಿಲಕ್ಷಣವಾದ ಬುದ್ಧಿಯು ಅನೇಕ ಸಲ ತಂದೆಯನ್ನು ಅಚ್ಚರಿಯನ್ನುಂಟು ಮಾಡುತ್ತಿತ್ತು. ಮಗನು ಬೆಳೆದು ದೊಡ್ಡವನಾದಂತೆಲ್ಲಾ ಮಾತಾಪಿತೃಗಳಿಗೆ ಆತನನ್ನು ಉಪನೀತನನ್ನಾಗಿ ಮಾಡಿ ಬಾಲವಟುವಿನ ರೂಪದಲ್ಲಿ ಕಂಡು ಆನಂದಪಡುವ ಹಂಬಲ ಬೆಳೆಯತೊಡಗಿತು. ಅದಕ್ಕಾಗಿ ಒಳ್ಳೆಯ ಮುಹೂರ್ತವನ್ನು ನಿಗದಿ ಪಡಿಸಿಕೊಂಡರು. ದ್ವಿಜತ್ವ ಸ್ವೀಕಾರ ಮಾಡಿದ ಮಗು (ವಟು) ಮಾತೆ ವೇದವತಿಯ ಮುಂದೆ ಬಂದು ನಿಂತು "ಭವತೀ ಭಿಕ್ಷಾಂ ದೇಹಿ" ಎಂದಾಗ ಆನಂದದಿಂದ ಅವಳ ಕಣ್ಣಾಲಿ ತುಂಬಿ ಬಂದವು. ತನ್ನ ತಾಯಿತನ ಸಾರ್ಥಕವಾಯಿತೆಂದು ಕೃತಾರ್ಥಭಾವ ತಾಳಿದಳು. ಭಟ್ಟರು ವಟುವನ್ನು ತೋಟಂತಿಲ್ಲಾಯರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಕಳಿಸತೊಡಗಿದರು.

ದಿನಗಳೆದಂತೆಲ್ಲಾ ವಾಸುದೇವನು ಅಂತಮುರ್ಖಿಯಾಗತೊಡಗಿದ. ಸಂಸಾರಿಗಳಿಗಿಂತ ಸರ್ವಸಂಗ ಪರಿತ್ಯಾಗವೇ ಯೋಗ್ಯ ಎಂಬ ವಿಚಾರವು ಅಂತರಂಗದಲ್ಲಿ ಮಂಥನಗೊಳ್ಳತೊಡಗಿತು. ತನ್ನ ಈ ವಿಚಾರವನ್ನು

ಮಾತಾಪಿತೃಗಳಿಗೆ ತಿಳಿಸಿದಾಗ ಅವರು ಗಾಬರಿಗೊಂಡರು. ಇದ್ದೊಬ್ಬ ಮಗನು ಸನ್ಯಾಸಿಯಾದರೆ ಮುಂದೆ ತಮ್ಮ ಗತಿ ಏನು ಎಂದು ಚಿಂತಿಸತೊಡಗಿದರು. ಆಗ ತನಗೊಬ್ಬ ತಮ್ಮನು ಹುಟ್ಟಿದ ಮೇಲಾದರೂ ಸನ್ಯಾಸದೀಕ್ಷೆಗೆ ಅಪ್ಪಣೆ ಕೊಡಿರಿ ಎಂದು ವಾಸುದೇವನು ಅವರನ್ನು ಸಮಾಧಾನಪಡಿಸಿದನು.

ಅಂತರಂಗದಲ್ಲಿ ಸದಾಕಾಲವೂ ಚಿಂತಿಸುತ್ತಿದ್ದ ಮನೋಬಯಕೆಯು ಸಿದ್ಧಿಸುವಂತಹ ಯೋಗವು ಸನ್ನಿಹಿತವಾಯಿತು. ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ಯತಿಗಳ ಬಿಡಾರವಾಗಿದೆ ಎಂದು ತಿಳಿದೊಡನೆ ತಕ್ಷಣವೇ ಆತನು ಉಡುಪಿಗೆ ಹೊರಟುಬಿಟ್ಟನು. ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಸನ್ಯಾಸದೀಕ್ಷೆಯನ್ನಿತ್ತು ಅನುಗ್ರಹಿಸಬೇಕೆಂದು ಅನನ್ಯವಾಗಿ ಪ್ರಾರ್ಥನೆ ಮಾಡತೊಡಗಿದನು. ಬಾಲಕನ ಮನೋನಿರ್ಧಾರವನ್ನು ಕಂಡು ಅಚ್ಯುತಪ್ರೇಕ್ಷರಿಗೆ ಅಚ್ಚರಿಯೆನಿಸಿತು. ಆತನ ಮುಖಲಕ್ಷಣಗಳನ್ನು ಅವಲೋಕಿಸಿದಾಗ ಈತ ಅಸಾಮಾನ್ಯ ಬಾಲಕನೆಂಬ ಭಾವನೆ ಮೂಡಿತು. ಸುಪ್ರೀತರಾದ ಅಚ್ಯುತಪ್ರೇಕ್ಷರು ನೇತ್ರಾವತಿ ನದಿಯ ದಂಡೆಯ ಮೇಲಿರುವ ಕಾತ್ಯಾಡಿಮಠದಲ್ಲಿ ಶಾಸ್ತ್ರೋಕ್ತವಾದ ಪದ್ಧತಿಯಂತೆ ವಾಸುದೇವನಿಗೆ ಸನ್ಯಾಸದೀಕ್ಷೆಯನ್ನಿತ್ತು "ಪೂರ್ಣಪ್ರಜ್ಞ" ಎಂದು ನಾಮಕರಣ ಮಾಡಿದರು.

ಆಶ್ರಮಾನಂತರ ಗುರುಗಳೊಂದಿಗೆ ಕೆಲವು ಕಾಲ ಕಳೆದ ನಂತರ ಪೂರ್ಣಪ್ರಜ್ಞರು ಯಾತ್ಯಾಶ್ರಮ ಧರ್ಮದಂತೆ ಪರ್ಯಟನಾ ಕಾರ್ಯದಲ್ಲಿ ನಿರತರಾದರು. ಗುರುಗಳ ಅಪ್ಪಣೆ ಪಡೆದು ಮೊದಲು ವಿಷ್ಣುಮಂಗಲ, ಗ್ರಾಮಕ್ಕೆ ಬಂದರು. ಅನಂತರ ತಿರುವನಂತಪುರಕ್ಕೆ ಹೋಗಿ ಅನಂತ ಪದ್ಮನಾಭನ ದರ್ಶನ ಪಡೆದು ಮುಂದೆ ರಾಮೇಶ್ವರ, ಕನ್ಯಾಕುಮಾರಿ ಮೊದಲಾದ ದಕ್ಷಿಣ ದೇಶದ ತೀರ್ಥಸ್ಥಳಗಳಲ್ಲಿ ಸಂಚಾರ ಮಾಡಿ ಮರಳಿದರು.

ಪೂರ್ಣಪ್ರಜ್ಞರ ಜೀವನದಲ್ಲಿ ಮಹತ್ವಪೂರಿತವಾದ ಒಂದು ಘಟನೆಯು ನಡೆಯಿತು. ಕುಂಬಳೆ ಪ್ರಾಂತದ ಕಾವು ಎಂಬಲ್ಲಿರುವ

ದೇವಸ್ಥಾನದಲ್ಲಿ ಕವಿಕುಲತಿಲಕ, ಚತುಃಶಾಸ್ತ್ರಕೋವಿದ ಅದ್ವೈತದರ್ಶನ ಸಾಗರ ಎಂದು ಖ್ಯಾತರಾಗಿದ್ದ ತ್ರಿವಿಕ್ರಮ ಪಂಡಿತಾಚಾರ್ಯರೆಂಬ ಘನವಿದ್ವಾಂಸರೊಡನೆ ಹದಿನೈದು ದಿನಗಳ ಕಾಲ ಏಕಪ್ರಕಾರವಾಗಿ ವ್ಯಾಕ್ಯಾರ್ಥವು ನಡೆಯಿತು. ಪಂಡಿತರು ಮಂಡಿಸಿದ ಪೂರ್ವಪಕ್ಷಗಳಿಗೆಲ್ಲ ಆಚಾರ್ಯ ಮಧ್ವರು ಸಮಾಧಾನಕಾರಕ ಉತ್ತರವನ್ನಿತ್ತು ಅವರ ವಾದವನ್ನು ಖಂಡಿಸಿ ನಿರುತ್ತರರನ್ನಾಗಿ ಮಾಡಿದರು. ಪೂರ್ಣಪ್ರಜ್ಞರ ಸಿದ್ಧಾಂತವೇ ಸರಿಯಾದ ಸಿದ್ಧಾಂತ ಎಂಬುದನ್ನು ಮನದಟ್ಟು ಮಾಡಿಕೊಂಡ ತ್ರಿವಿಕ್ರಮ ಪಂಡಿತಾಚಾರ್ಯರು ತಮ್ಮ ಮಗನಾದ ನಾರಾಯಣ ಪಂಡಿತ ಹಾಗೂ ಶಿಷ್ಯ ಪರಿವಾರದೊಂದಿಗೆ ಆನಂದತೀರ್ಥರಿಗೆ ಶರಣಾಗತರಾಗಿ ದ್ವೈತದೀಕ್ಷೆಯನ್ನು ಪಡೆದುಕೊಂಡರು. ಮುಂದೆ ಪಂಡಿತಾಚಾರ್ಯರ ಮಕ್ಕಳಾದ ನಾರಾಯಣಪಂಡಿತರಿಂದಲೇ ಗುರುಗಳ ಮಹತಿಯನ್ನು ಸಾರುವ ಸಮಧ್ವವಿಜಯ ಎಂಬ ಕಾವ್ಯ ಹೊರಹೊಮ್ಮಿ ಬರುವಂತಾಯಿತು. ಆಚಾರ್ಯ ಮಧ್ವರ ಜೀವನ ಚರಿತ್ರೆಗೆ ಈ ಗ್ರಂಥದ ವಿನಃ ಬೇರಾವ ಗ್ರಂಥವೂ ಇಲ್ಲ. ಅಭ್ಯಾಸಿಗರು ಇದನ್ನು ಗಮನಿಸಬೇಕಾದುದು ಅಗತ್ಯ.

ಶ್ರೀಮದಾನಂದತೀರ್ಥರು ತಮ್ಮ ಸಿದ್ಧಾಂತದ ಸಾರವನ್ನು ಈ ರೀತಿಯಲ್ಲಿ ವರ್ಣಿಸಿರುವದುಂಟು.

ಶೃಣುತಾಮಲ ಸತ್ಯವಚಃ ಪರಮಮ್<br>
ಶಫತೇರಿತ ಮುಚ್ಛ್ರಿತ ಬಾಹುಯುಗಂ।<br>
ನಹರೇಃ ಪರಮೋ ನಹರೇಸದೃಶಃ<br>
ಪರಮಃಸ್ತತು ಸರ್ವಚಿದಾತ್ಮಗಣಾತ್॥

ಎರಡೂ ಕೈಗಳನ್ನು ಮೇಲೆತ್ತಿ ಶಪಥಪೂರ್ವಕವಾಗಿ ಹರಿಯೇ ಪರಮ ದೈವ, ಆತ ಸರ್ವೋತ್ತಮನಾಗಿದ್ದಾನೆ ಎಂದು ಹೇಳುವೆ. ಪೂರ್ಣಪ್ರಜ್ಞರು ತಮ್ಮ ಮೂವತ್ತೇಳು ಗ್ರಂಥಗಳಲ್ಲಿ ಸಾರಿದ ದ್ವೈತತತ್ವದ ಸಾರವನ್ನು ವ್ಯಾಸರಾಯರು ಒಂದು ಶ್ಲೋಕದಲ್ಲಿ ಸಂಗ್ರಹರೂಪವಾಗಿ ಹೀಗೆ ಹೇಳಿರುವುದುಂಟು.

ಶ್ರೀ ಮನ್ಮಧ್ವಮತೇ ಹರಿಃ ಪರತರಃ
ಸತ್ಯಂ ಜಗತ್ ತತ್ವತೋಭೇದೋ
ಜೀವಗಣಾಃ ಹರೇರನುಚರಾಃ
ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ
ಭಕ್ತಿಶ್ಚ ತತ್ಸಾಧನಂ ಹ್ಯಕ್ಷಾದಿ
ತ್ರಿತಯಂ ಪ್ರಮಾಣ ಮಖಿಲಾ
ಮ್ನಾಯೈಕವೇದ್ಯೋ ಹರಿಃ

ಈ ಶ್ಲೋಕದಿಂದ ಒಂಬತ್ತು ಪ್ರಮೇಯಗಳನ್ನು ವಿವರವಾಗಿ ಬಿಡಿಬಿಡಿಸಿ ತೋರಿಸಲಾಗಿದೆ.

ಆಚಾರ್ಯರು ಒಂದು ದಿನ ಸಮುದ್ರ ಸ್ನಾನಕ್ಕೆಂದು ಹೋದಾಗ ಒಂದು ಹಡಗು ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿರುವುದನ್ನು ಕಂಡರು. ಆಗ ತಮ್ಮ ಯೋಗಬಲದಿಂದ ಆ ನೌಕೆಯು ಸುರಕ್ಷಿತವಾಗಿ ದಡವನ್ನು ತಲಪುವಂತೆ ನೋಡಿಕೊಂಡರು. ವಿಪತ್ತಿನಿಂದ ಪಾರಾದ ನೌಕೆಯ ಒಡೆಯನು ಆಚಾರ್ಯರ ಸೇವೆಗೆಂದು ಮುಂದೆ ಬಂದು ನಿಂತಾಗ ಆ ನೌಕೆಯಲ್ಲಿರುವ ಎರಡು ಗೋಪೀಚಂದನ ಉಂಡೆಗಳನ್ನು ಮಾತ್ರ ಬೇಡಿದರು. ಅವುಗಳಲ್ಲಿದ್ದ ಮುದ್ದಾದ ಸಾಲಿಗ್ರಾಮ ಶಿಲೆಯ ವಿಗ್ರಹಗಳಲ್ಲಿ ಒಂದನ್ನು ವಡಭಾಂಡೇಶ್ವರದಲ್ಲಿಯೂ, ಇನ್ನೊಂದನ್ನು ಉಡುಪಿಯಲ್ಲಿಯೂ ಪ್ರತಿಷ್ಠಾಪನೆ ಮಾಡಿದರು.

ಆ ಸುಂದರ ವಿಗ್ರಹವೇ ಉಡುಪಿಯ ಶ್ರೀಕೃಷ್ಣ ದೇವಾಲಯದಲ್ಲಿ ಕಡಗೋಲು ಕೃಷ್ಣನಾಗಿ ಅಷ್ಟಮಠಾಧೀಶರಿಂದ ಇಂದಿಗೂ ಪೂಜೆಗೊಳ್ಳುತ್ತಿರುವನು. ಉಡುಪಿಯಲ್ಲಿರುವ ಅಷ್ಟಮಠಗಳಂತೆ ಘಟ್ಟದ ಮೇಲೆಯೂ ಸಹ ನಾಲ್ಕು ಮಠಗಳನ್ನು ಪ್ರತಿಷ್ಠಾಪನೆ ಮಾಡಿ ಭಾರತದ ಉದ್ದಗಲಕ್ಕೂ ಸಂಚರಿಸಿ ಆ ಮಠಾಧೀಶರು ದ್ವೈತಮತವನ್ನು ಪ್ರಚಾರ ಮಾಡುವಂತೆ ನೋಡಿಕೊಂಡರು.

ಪೂರ್ಣಪ್ರಜ್ಞರು ತಾವು ಕೃತಿಗಳನ್ನು ರಚಿಸಿದಾಗಲೆಲ್ಲ ಬದರಿಗೆ ಹೋಗಿ ಶ್ರೀಮನ್ನಾರಣನಿಗೆ ಗ್ರಂಥಗಳನ್ನು ಸಮರ್ಪಿಸಿ ಬರುತ್ತಿದ್ದರು. ಹೀಗೆ ಮರಳಿ ಬಂದು ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ಪಾಠನಿರತರಾದಾಗ ಅವರ ಮೇಲೆ ಹೂವಿನ ಮಳೆ ಸುರಿಯತೊಡಗಿತು. ಶಿಷ್ಯರು ನೋಡನೋಡುತ್ತಿದ್ದಂತೆ ಪುನಃ ಅವರು ಬದರಿಗೆ ಪ್ರಯಾಣ ಮಾಡಿದರೆಂದು ಇಂದಿಗೂ ಅದೃಶ್ಯರಾದ ಆ ಸ್ಥಳವನ್ನು ಅನಂತೇಶ್ವರ ದೇವಾಲಯದಲ್ಲಿ ತೋರಿಸುವುದುಂಟು.

ರಜತಪೀಠ ಅಥವಾ ಉಡುಪಿಯಲ್ಲಿ ಅದೃಶ್ಯರಾದರೂ ಸಹ ಬದರೀ ಕ್ಷೇತ್ರದಲ್ಲಿ ದ್ವೈತದೀಕ್ಷಾಧ್ಯಕ್ಷರಾದ ಭಕ್ತರಿಗೆ ಸದಾ ಕಾಲವೂ ದರ್ಶನವನ್ನೀಯಲು ವಾಸವಾಗಿರುತ್ತೇನೆ ಎಂದು ಆಚಾರ್ಯರೇ ಹೇಳಿರುವುದಾಗಿ ತಿಳಿದುಬರುವದು.



# ಯೋಗಿ ಕೃಷ್ಣಪ್ರೇಮ

---

ಕಾಶ್ಮೀರದ ಯುವರಾಜರು ಹಾಗೂ ರಾಜ್ಯಪಾಲರು ಮತ್ತೂ ಕೇಂದ್ರಸರ್ಕಾರದ ಮಂತ್ರಿಗಳೂ ಆಗಿದ್ದ ಡಾ॥ ಕರಣಸಿಂಗರು ೧೯೮೭ರಲ್ಲಿ ತಮ್ಮ ಆತ್ಮ ಚರಿತ್ರೆಯನ್ನು ಬರೆದು ಪ್ರಸಿದ್ಧಗೊಳಿಸಿದ್ದಾರೆ. ಶ್ರೀಯುತರು ಈ ಗ್ರಂಥದ ಮೊದಲನೆಯ ಭಾಗಕ್ಕೆ "ಯುವರಾಜ" ಎಂಬ ಹೆಸರನ್ನಿಟ್ಟಿದ್ದರೆ ಎರಡನೆಯ ಭಾಗಕ್ಕೆ "ರಾಜಪ್ರಮುಖ" ಎಂಬ ಹೆಸರನ್ನಿಟ್ಟಿದ್ದಾರೆ. ಗ್ರಂಥದ ೧೪೨ನೇ ಪುಟದಲ್ಲಿ ೧೯೨೭ರಲ್ಲಿ ಬನಾರಸ ಹಿಂದೂ ವಿಶ್ವವಿದ್ಯಾಲಯ ಹಾಗೂ ಲಖನೌ ವಿದ್ಯಾಪೀಠದಲ್ಲಿ ಆಧ್ಯಾಪಕರಾಗಿ ಸೇವೆ ಸಲ್ಲಿಸಿದ ರೋನಾಲ್ಡ ನಿಕ್ಸನ್‌ರನ್ನು ಕುರಿತು ಸಾದ್ಯಂತವಾಗಿ ವಿವರಗಳನ್ನೊದಗಿಸದ್ದಾರೆ.

ತಾವು ಈವರೆಗೆ ಅಭ್ಯಾಸಮಾಡಿದ ಗ್ರಂಥಗಳಲ್ಲಿ ೧೯೪೯-೫೦ರಲ್ಲಿ ಪ್ರಕಟವಾದ ದಿಲೀಪ ಕುಮಾರರಾಮ್ ಇವರಿಂದ ರಚಿತವಾದ ಅಮಾಂಗ ದಿ ಗ್ರೇಟ-ಗ್ರಂಥವು ಬಹು ಮಹತ್ವದ್ದಾಗಿತ್ತು ಹಾಗೂ ಬಟ್ರಾಂಡರಸಲ್, ರೋಮ್ ರೋಲಾರ್, ಮಹಾತ್ಮಾಗಾಂಧೀ, ರವೀಂದ್ರನಾಥ ಟಾಗೂರ್ ಮತ್ತು ಅರವಿಂದ ಘೋಷ ಇವರೆಲ್ಲರ ಗ್ರಂಥಗಳನ್ನು ಅವಲೋಕನ ಮಾಡಿದ್ದರೆಂದೂ, ಆದರೆ ಆಂಗ್ಲ ಗೃಹಸ್ಥರೊಬ್ಬರು ಭಾರತಕ್ಕೆ ಬಂದು ಸಂನ್ಯಾಸ ದೀಕ್ಷೆ ಸ್ವೀಕರಿಸಿ ಹಿಮಾಲಯದ ನಿಸರ್ಗ ನಿವಾಸಿಗಳಾಗಿ ತಪಗೈದ ಯೋಗಿಕೃಷ್ಣ ಪ್ರೇಮ

(ರೋನಾಲ್ಡ ನಿಕ್ಸನ್) ಇವರ ಸಾನಿಧ್ಯ ಹಾಗೂ ಸಹವಾಸ ದೊರೆತುದು ತಮ್ಮ ಜೀವನದ ಪೂರ್ವಸುಕೃತದ ಫಲ ಎಂದು ಹೇಳಿ ರೋನಾಲ್ಡರ ಪೂರ್ವಾಶ್ರಮದ ವಿವರಗಳನ್ನೊದಗಿಸಿರುವುದು ಮಹತ್ವದ ವಿಷಯವಾಗಿದೆ.

ವಿಶ್ವದ ಮೊದಲನೆಯ ಮಹಾಯುದ್ಧ ನಡೆದಾಗ ರೋನಾಲ್ಡರು ಬ್ರಿಟಿಷ ವಾಯು ಪಡೆಯಲ್ಲಿ ಅಧಿಕಾರಿಗಳಾಗಿದ್ದರು. ನಂತರ ಮಹಾಯುದ್ಧವು ಮುಗಿದಾಗ ಅವರು ಭಾರತಕ್ಕೆ ಬಂದು ಲಖನೌ ವಿದ್ಯಾಪೀಠದಲ್ಲಿ ಅಧ್ಯಾಪಕರಾಗಿ ಸೇವೆಯನ್ನಾರಂಭಿಸಿದರು. ಆ ಕಾಲದಲ್ಲಿ ವಿದ್ಯಾಪೀಠದ ಕುಲಗರುಗಳೆಂದು ಚಕ್ರವರ್ತಿಗಳೆಂಬುವವರು ಕೆಲಸ ಮಾಡುತ್ತಿದ್ದರು. ಅವರ ಧರ್ಮಪತ್ನಿ ಆಧ್ಯಾತ್ಮ ಭಾವದವರಾಗಿದ್ದರು. ಜನರು ಆ ತಾಯಿಯನ್ನು ಯಶೋದಾಮಾಯಿ ಎಂದು ಕರೆಯುತ್ತಿದ್ದರು. ಈ ತಾಯಿಯು ಸರ್ವಸಂಗ ಪರಿತ್ಯಾಗ ಮಾಡಿ ಹಿಮಾಲಯದ ತಪ್ಪಲು ಪ್ರದೇಶಕ್ಕೆ ಬಂದು ತಪವನ್ನಾಚರಿಸಿತೊಡಗಿದರು. ಮುಂದೆ ಎಷ್ಟೋ ವರುಷಗಳಾದ ಮೇಲೆ ನಿಕ್ಸನ್ನರು ಈ ತಾಯಿಯನ್ನು ಹುಡುಕಿಕೊಂಡು ಬಂದು ಅವರಿಂದ ಉಪದೇಶವನ್ನು ಪಡೆದು ಸಂನ್ಯಾಸ ಜೀವನನ್ನಾರಂಭಿಸಿದರು. "ಯೋಗಿ ಕೃಷ್ಣ ಪ್ರೇಮ" ಎಂಬ ಹೆಸರಿನಿಂದ ಅವರ ಸನ್ಯಾಸ ಜೀವನವು ಪ್ರಾರಂಭವಾಯಿತು. ಯಶೋದಾಮಾಯಿ ಆಲ್ಮೋರಾದಿಂದ ಸ್ವಲ್ಪ ದೂರದಲ್ಲಿದ್ದ 'ನೀರ್‌ತೊಲಾ' ಎಂಬ ಗ್ರಾಮದಲ್ಲಿ ಪುಟ್ಟದಾದ ಕೃಷ್ಣ ಮಂದಿರವನ್ನು ಕಟ್ಟಿಕೊಂಡು ವಾಸವಾಗಿದ್ದರು. ಕಾಲಾಂತರದಲ್ಲಿ ಇನ್ನೂ ಕೆಲವರು ಆಂಗ್ಲ ಶಿಷ್ಯರು ಆಶ್ರಮಕ್ಕೆ ಬಂದರು. ಅವರಲ್ಲಿ ಒಬ್ಬರಿಗೆ ಹರಿದಾಸ ಎಂದೂ ಇನ್ನೊಬ್ಬರಿಗೆ ಶ್ರೀ ಮಾಧವ ಆಶಿಷ ಎಂದೂ ನಾಮಕರಣ ಮಾಡಲಾಯಿತು. ಇವರಲ್ಲದೆ ಬೇರೆ ಕೆಲವು ಭಾರತೀಯ ಸಾಧಕರೂ ನೀರ್‌ತೊಲಾದ ಆಶ್ರಮದಲ್ಲಿದ್ದು ಕೊಂಡು ತಮ್ಮ ಸಾಧನೆಗಳಲ್ಲಿ ನಿರತರಾಗಿದ್ದರು.

ಕೃಷ್ಣಪ್ರೇಮರು ಆಧ್ಯಾತ್ಮದಲ್ಲಿ ವಿಶೇಷ ಸಾಧನೆ ಹೊಂದಿದವರಾಗಿದ್ದರು. ಒಳ್ಳೆ ಚಿಕಿತ್ಸಕ ಬುದ್ಧಿಯವರಾಗಿದ್ದರು. ಕೇಂಬ್ರಿಜ್ ವಿಶ್ವವಿದ್ಯಾಲಯದ ಪದವೀಧರರಾಗಿದ್ದರು. ಸಂಸ್ಕೃತ ಹಾಗೂ ಪಾಲಿ

ಮತ್ತೂ ಹಿಂದೀಭಾಷೆಗಳಲ್ಲಿ ಒಳ್ಳೆ ಪ್ರಭುತ್ವ ಪಡೆದವರಾಗಿದ್ದರು. ಇವರಿಂದ ಬರೆಯಲ್ಪಟ್ಟ ಲೇಖನಗಳು ಭಾರತದ ಸುಪ್ರಸಿದ್ಧ ದಿನ ಪತ್ರಿಕೆಗಳಲ್ಲಿ ಹಾಗೂ ವಾರಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದ್ದವು. 'ಇನಿಷಿಯೇಷನ್ ಇನ್ ಟು ಯೋಗ' ಅಥವಾ ಯೋಗದ ಪರಿಚಯ ಎಂಬ ಇವರ ಗ್ರಂಥವಂತೂ ವಿಶ್ವಖ್ಯಾತಿಯನ್ನು ಗಳಿಸಿತ್ತು. ಇದಲ್ಲದೆ ಭಗವದ್ಗೀತೆಯಲ್ಲಿ ಯೋಗ ಹಾಗೂ ಕಠೋಪನಿಷತ್ತಿನಲ್ಲಿ ಯೋಗ ಎಂಬ ಎರಡು ಗ್ರಂಥಗಳು ಪ್ರಕಟವಾಗಿದ್ದವು. ಶ್ರೀಯುತರು ತಮ್ಮ ಈ ಗ್ರಂಥಗಳಲ್ಲಿ ಯೋಗದ ಗುಹ್ಯವನ್ನು ಕುರಿತು ವಿಶೇಷವಾಗಿ ಚರ್ಚೆಮಾಡಿದ್ದರು. ಅಲ್ಲದೆ ಪಾಶ್ಚಾತ್ಯದಲ್ಲಿ ಯೋಗಾಭ್ಯಾಸದಲ್ಲಿ ನಿರತರಾದ ಅನೇಕರ ಅನುಭವಗಳನ್ನೊದಗಿಸಿದ್ದರು. ಆಧ್ಯಾತ್ಮವಾದವು ಕೇವಲ ಯಾವುದಾದರೊಂದು ಧರ್ಮಕ್ಕೆ ಅಂಟಿಕೊಳ್ಳದೆ ಅದು ವಿಶ್ವವ್ಯಾಪ್ತಿಯನ್ನೊಳಗೊಂಡ ವಿಷಯವಾಗಿದೆ ಎಂಬುದು ಅವರ ಸಿದ್ಧಾಂತವಾಗಿತ್ತು. ಅವರು ಶ್ರೀಕೃಷ್ಣನ ಅನನ್ಯ ಭಕ್ತರಾಗಿದ್ದರು, ಆ ಮಹಾನುಭಾವನನ್ನು ಕುರಿತು ಬರೆಯುವಾಗ ಠಾಕೂರ ಎಂಬ ಶಬ್ದ ಪ್ರಯೋಗವನ್ನು ಮಾಡುತ್ತಿದ್ದರು. ಈ ಮಹನೀಯರ ಸಾಧನೆ ಹಾಗೂ ಅವರು ಪ್ರತಿಪಾದಿಸಿದ ತತ್ವಗಳನ್ನಭ್ಯಾಸ ಮಾಡಿದ ಅರವಿಂದಘೋಷರೂ ಸಹ ತಮ್ಮ ಗ್ರಂಥಗಳಲ್ಲಿ ಧನ್ಯೋದ್ಗಾರಗಳನ್ನು ವ್ಯಕ್ತಪಡಿಸಿದುದುಂಟು.

ರಾಜ ಪ್ರಮುಖರಾದ ಕರಣಸಿಂಗರು ಈ ಮಹಾ ಮೇಧಾವಿಗಳೊಂದಿಗೆ ಕಳೆದ ದಿನಗಳು ಹಾಗೂ ಸಂದರ್ಶನದ ಅನುಭವವನ್ನು ಕುರಿತು ಈ ರೀತಿ ಹೇಳಿಕೊಂಡಿದ್ದಾರೆ.

ಕೃಷ್ಣಪ್ರೇಮರಿಗೆ ಪಾದಸ್ಪರ್ಶ ಮಾಡಲು ತಲೆಬಬಾಗಿದಾಗ ಆ ಪೂಜ್ಯರು ಬಹುವಾತ್ಸಲ್ಯದಿಂದ ನನಗೆ ಆಲಿಂಗವನ್ನಿತ್ತರು. ಆಗ ನಮ್ಮಿಬ್ಬರಲ್ಲಿ ಜನ್ಮ ಜನ್ಮಾಂತರಗಳ ಪರಿಚಯವಿದ್ದಂತಹ ಅನುಭವವಾಯಿತು. ಅವರಂತಹ ನೀಲವರ್ಣದ ನೇತ್ರಗಳನ್ನು ನಾನು ಬೇರೆಲ್ಲಿಯೂ ನೋಡಿರಲಿಲ್ಲ. ಆ ನೋಟ ಹಾಗೂ ದಿವ್ಯವಾದ ಆ ಸ್ಪರ್ಶಾ ನುಭವವನ್ನು ನಾನೆಂದಿಗೂ ಮರೆಯಲಾರೆ. ಕೃಷ್ಣ ಮಂದಿರದ

ಸಮೀಪದಲ್ಲಿ ಸಮಗಾಗಿ ಬಿಡಾರದ ವ್ಯವಸ್ಥೆ ಮಾಡಲಾಗಿತ್ತು. ದೇವ ಮಂದಿರವು ಮಾತಾ ಯಶೋದಾಮಾಯಿ ಹಾಗೂ ಅವರ ಮಗಳಾದ ಮೋತೀರಾಣಿ ಇವರಿಂದ ನಿರ್ಮಿತವಾಗಿತ್ತು. ದಿನಾಂಕ ೨-೧೨-೧೯೪೪ರಲ್ಲಿ ಮಾತಾ ಯಶೋದಾರವರು ತಮ್ಮ ಇಹಲೋಕಯಾತ್ರೆ ಮುಗಿಸಿದ್ದರು. ಪ್ರತಿದಿನ ಸಾಯಂಕಾಲದಲ್ಲಿ ಕೃಷ್ಣಪ್ರೇಮರು ಆ ದೇವ ಮಂದಿರದಲ್ಲಿ ಭಜನಾಕಾರ್ಯದಲ್ಲಿ ನಿರತರಾಗುತ್ತಿದ್ದರು. ನಿರರ್ಗಳವಾಗಿ ಹಿಂದಿಯಲ್ಲಿ ಉಪನ್ಯಾಸವನ್ನು ಮಾಡುತ್ತಿದ್ದರು. ಅವರು ಭಜನೆಯಲ್ಲಿ ತಲ್ಲೀನರಾದಾಗ ಶಿಷ್ಯರು ತಾಳ ಮೃದಂಗಗಳನ್ನು ಬಾರಿಸುತ್ತಿದ್ದರು. ರವೀಂದ್ರನಾಥ ಬ್ಯಾನರ್ಜಿ ಎಂಬ ಮಹನೀಯರೂ ಸಹ ಆ ಸತ್ಸಂಗದಲ್ಲಿ ಭಾಗಿಗಳಾಗುತ್ತಿದ್ದರು. ಭಕ್ತಿಯ ಉದ್ರೇಕದೊಂದಿಗೆ ಭಜನೆಯಲ್ಲಿ ನಿರತರಾದಾಗ ಯೋಗಿ ಕೃಷ್ಣಪ್ರೇಮರ ಮಧುರ ಕಂಠದಿಂದ ಹೊರ ಹೊಮ್ಮಿದ ಗೀತಗಳು ಹಿಮಾಲಯದ ಪರ್ವತಗಳಿಗೆ ತಾಗಿ ಮರುಧ್ವನಿಗೊಳ್ಳುತ್ತಿದ್ದವು. ನಾವುಗಳೆಲ್ಲ ಮಂತ್ರಮುಗ್ಧರಾಗಿ ಅಲೌಕಿಕವಾದ ಆನಂದ ಸಾಗರದಲ್ಲಿ ತೇಲುತ್ತಿರುವಂತೆ ಭಾಸವಾಗುತ್ತಿತ್ತು.

ಕೃಷ್ಣನ ದೇವ ಮಂದಿರವು ಬಹುಚಿಕ್ಕದಾದರೂ ಸುಂದರವಾಗಿತ್ತು. ಆ ಮಂದಿರದ ತೀರ ಸಮೀಪದಲ್ಲಿಯೆ ಒಂದು ಕುಟೀರದಲ್ಲಿ ಯೋಗಿ ಕೃಷ್ಣ ಪ್ರಭುಗಳು ವಾಸಿಸುತ್ತಿದ್ದರು. ಯಾವುದರೊಂದು ಚರ್ಚೆ ಹಾಗೂ ವಿಚಾರ ಮಂಥನವು ಪ್ರಾರಂಭ ವಾದೊಡನೆ ಕೃಷ್ಣಪ್ರಭುಗಳು ತುಂಬ ಗಂಭೀರರಾಗಿರದೆ ಆಗಾಗ ವಿನೋದ ರೂಪದಲ್ಲಿಯೇ ಸಮಸ್ಯೆಗಳಿಗೆ ಉತ್ತರವನ್ನೀಯುತ್ತಿದ್ದರು. ಒಂದು ದಿನ ಗಂಭೀರವಾದ ಚರ್ಚೆಯು ಪ್ರಾರಂಭವಾದಾಗ ಅವರು ಈ ರೀತಿಯಲ್ಲಿ ತಮ್ಮ ನಿರ್ಧಾರವನ್ನು ವ್ಯಕ್ತಪಡಿಸಿದರು.

"ಮಾನವನಿಗೆ ಹಾಸ್ಯ ಪ್ರವೃತ್ತಿ ಎಂಬುದು ದೇವದತ್ತವಾಗಿ ಕೊಡಲ್ಪಟ್ಟ ವರವಾಗಿರುವುದು. ಪಶುಗಳಲ್ಲಿ ಅಂಥ ಅನುಭವ ಭಾವವಿರುವುದಿಲ್ಲ. ಅದಕ್ಕೆ ಮೂಲ ಕಾರಣ ಪಶುಪಕ್ಷಿಗಳು ನಿಸರ್ಗದೊಂದಿಗೆ ಒಂದುಗೂಡಿಕೊಂಡೇ ಜೀವನ ನಡೆಸುತ್ತವೆ.

ಇದರಿಂದಾಗಿ ಅವುಗಳಲ್ಲಿ ಚೈತನ್ಯವು ನಿಸರ್ಗದಿಂದಲೇ ಲಭಿಸುತ್ತದೆ. ಮಾನವನಲ್ಲಿ ಅಹಂಭಾವದ ಅಂತರ್ಭಾವವಿರುತ್ತದೆ. ಆದರಿಂದ ದೂರಾಗಲು ಪರಮೇಶ್ವರನು ಆತನಿಗೆ ಆನಂದಾವಿರ್ಭಾವವನ್ನು ದಯಪಾಲಿಸಿದ್ದಾನೆ. ಯಾರಿಗೆ ಹಾಸ್ಯ ವಿನೋದಗಳ ಅರಿವಿಲ್ಲವೋ ಅವರ ಜೀವನವು ದುರಂತಮಯವೆಂದೆನಿಸುತ್ತದೆ. ಹೀಗಿದ್ದರೂ ಅಧ್ಯಾತ್ಮದ ಆಕರ್ಷಣೆಯು ಮಾತ್ರ ವಿನೋದದ ಸಾಧನವೆಂದೆನಿಸಲಾರದು.”

ಮೂರು ದಿನಗಳವರೆಗೆ ಕರ್ಣಸಿಂಗರು ಮಹಾಯೋಗಿ ಕೃಷ್ಣಪ್ರೇಮರೊಂದಿಗಿದ್ದು ಅವರಿಂದ ನಿರೂಪ ಪಡೆದು ಮರುಳುವಾಗ ಆ ಯೋಗಿಗಳು ತಮಗೇನು ಉಪದೇಶ ಮಾಡಿದರೆಂಬುದನ್ನು ಕುರಿತು ಈ ರೀತಿಯಲ್ಲಿ ಬರೆದಿದ್ದಾರೆ.

‘ನೀವು ಹೀಗೆ ಮಾಡಿರಿ, ಇದನ್ನೇ ಮಾಡಿರಿ ಎಂದು ನಾನು ಉಪದೇಶ ಮಾಡಲಾರೆ. ಆದರೂ ನಿಮ್ಮ ಪ್ರಜ್ಞಾಜ್ಯೋತಿಯನ್ನು ಎಂದೂ ಬತ್ತದಂತೆ ನೋಡಿಕೊಳ್ಳಿರಿ. ನಿಮ್ಮ ವಿದ್ವತ್ತು, ಕೀರ್ತಿ ಹಾಗೂ ಸಂಪತ್ತು ಇವೆಲ್ಲವುಗಳಿಗಿಂತ ಅಂತಃಪ್ರಜ್ಞಾಜ್ಯೋತಿಯು ಮಾತ್ರ ಬಹು ಬೆಲೆಯುಳ್ಳದ್ದು. ಆ ಜ್ಯೋತಿಯ ಬೆಳಕಿನಲ್ಲಿ ಮುನ್ನೆಡೆಯಿರಿ. ಪ್ರಕೃತಿ, ಪುರುಷ, ಶಿವ ಹಾಗೂ ಶಕ್ತಿ ಎಂಬ ವಿಚಾರಗಳ ತಿಳುವಳಿಕೆಯೊಂದಿಗೆ ಸಾಗುವುದೇ ಬಹು ಮಹತ್ವದ ವಿಚಾರವೆನಿಸುತ್ತದೆ. ಅವುಗಳಲ್ಲಿಯ ಅಸಮತೆಯು ಮಾತ್ರ ಅನರ್ಥಕಾರಿ. ಈ ದಾರಿಯು ಬಹು ಕಠಿಣವಾದುದು. ಕಠೋಪನಿಷತ್ತಿನಲ್ಲಿ ಇದು ಮುಳ್ಳಿನ ಮೇಲೆ ನಡೆದಂತೆ ಎಂದು ಹೇಳಲಾಗಿದೆ. ಇದನ್ನು ಸಾಧಿಸದೇ ಹೋದಲ್ಲಿ ಜೀವನವೇ ಅಪೂರ್ಣವೆಂದೆನಿಸುತ್ತದೆ.’

‘ಈ ಮಹಾಪುರುಷರೊಂದಿಗೆ ಕಳೆದ ಆ ದಿನಗಳನ್ನು ನಾನೆಂದೂ ಮರೆಯಲು ಸಾಧ್ಯವಿಲ್ಲ. ಬಾಹ್ಯ ಜಗತ್ತಿನೊಂದಿಗೆ ಆಂತರಿಕ ವಿಶ್ವಪ್ರಜ್ಞೆಯನ್ನು ಸಿದ್ಧಪಡಿಸಿಕೊಂಡಿರುವ ಯೋಗಿಗಳ ಜೀವನವು ಒಂದು ವರ್ತುಲದಲ್ಲಿ ಅನೇಕ ವರ್ತುಲಗಳನ್ನು ಕಾಣುವಂತಿದೆ. ಆ ವರ್ತುಲದ ಕೇಂದ್ರಬಿಂದು ಎಂಬುದೇ ಆತ್ಮವೆನಿಸುತ್ತದೆ. ಇದು

ಪ್ರತಿಯೊಂದು ಉಪನಿಷತ್ತಿನ ವಿದ್ಯೆ ಎಂದೆನಿಸುತ್ತದೆ. ಸಾಗರೋತ್ತರದಲ್ಲಿದ್ದ ವಿದೇಶಿಯರು ಈ ಪುಣ್ಯಭೂಮಿಯನ್ನರಸಿಕೊಂಡು ಬರುತ್ತಾರೆ. ಈ ನೆಲದಲ್ಲಿದ್ದು ಸಾಧನ ಮಾರ್ಗದಿಂದ ಆತ್ಮ ಸಾಕ್ಷಾತ್ಕಾರದ ಮಾರ್ಗವನ್ನು ಕಂಡುಕೊಳ್ಳುತ್ತಾರೆ. ಆ ಮಹಾನುಭಾವರೊಂದಿಗೆ ನಡೆಸಿದ ಚರ್ಚೆಗಳಿಂದ ಅಂತರಾತ್ಮದ್ದಲ್ಲಿ ವಿಶೇಷ ಜ್ಯೋತಿಯನ್ನು ಕಂಡುಕೊಂಡ ಅನುಭವವೇ ನನಗಾಯಿತು. ಅವರ ನೀಲನೇತ್ರಗಳಲ್ಲಿ ನಾನು ಅನಂತ ಪ್ರಕಾಶವನ್ನು ಕಂಡುಕೊಂಡೆ.'

ಕರಣಸಿಂಗರು ಮುಂದೆ ತಮಗೆ ಅಪೇಕ್ಷೆಯಾದಾಗಲೆಲ್ಲ ಕೃಷ್ಣಪ್ರೇಮರಲ್ಲಿ ಹೋಗಿಬರುತ್ತಿದ್ದರು. ಪ್ರತಿಸಲವೂ ಹೊಸ ಹೊಸ ಅನುಭವಗಳನ್ನನ್ನುಭವಿಸುತ್ತಿದ್ದರು. ಒಂದು ಸಂದರ್ಭದಲ್ಲಿ ಸ್ವಪ್ನ ಹಾಗೂ ಸ್ವಪ್ನದಲ್ಲಿಯ ಸಾಕ್ಷಾತ್ಕಾರ ಇವುಗಳ ವಿಚಾರದಲ್ಲಿ ಕೃಷ್ಣಪ್ರೇಮರು ಸ್ವಪ್ನದ ವಿಚಾರದಲ್ಲಿ ಯೋಗ್ಯವಾದ ಅರ್ಥವನ್ನು ತಿಳಿದು ಕೊಳ್ಳುವಂತಾದಲ್ಲಿ ವಿಶ್ವದ ವಿಶೇಷ ಪರಿಚಯವು ನಮಗಾಗುತ್ತದೆ ಎಂಬುದಾಗಿ ಹೇಳಿದರೆಂಬುದನ್ನು ವಿವರಿಸುತ್ತ ಮುಂದೆ ಅವರು ತಾವು ಅನುಭವಿಸಿದ ಸ್ವಪ್ನಗಳನ್ನೆಲ್ಲ ಬರೆದಿಡುವುದನ್ನಾರಂಭಿಸಿದರಂತೆ. ಅವರಿಗೆ ಅನೇಕ ಹಿಂದೂ ದೇವ ದೇವತೆಗಳು, ಸಾಧುಸಂತರನ್ನು ಕಂಡುದಾಗಿ ತಿಳಿಸಿದ್ದಾರೆ. ಒಂದು ಸ್ವಪ್ನದಲ್ಲಿ ತಮಗೆ ಅರವಿಂದ ಘೋಷರು ಹಾಗೂ ಮಾತಾ ಇವರಿಬ್ಬರಿಂದಲೂ ತಮಗೆ ದೀಕ್ಷೆಯನ್ನಿತ್ತ ಅನುಭವವಾಯಿತೆಂದು ಬರೆದುಕೊಂಡಿದ್ದಾರೆ. ಮತ್ತೊಮ್ಮೆ ರಮಣ ಮಹರ್ಷಿಗಳೊಂದಿಗೆ ಮಾತನಾಡಿದಂತಹ ಅನುಭವವಾಯಿತೆಂದು ತಿಳಿಸಿದ್ದಾರೆ. ಬೇರೊಂದು ದಿನ ತಮಗೆ ಶ್ರೀಕೃಷ್ಣನ ದರ್ಶನವಾಯಿತೆಂದೂ ಮೊದಲು ಬಾಲ ಗೋಪಾಲನಾಗಿ ಕಂಡನೆಂದೂ ಮುಂದೆ ಆತನ ತಾರುಣ್ಯದ ರೂಪವನ್ನು ಕಂಡ ದೃಷ್ಟಾಂತವನ್ನು ವಿವರಿಸುವಾಗ ಕರಣಸಿಂಗರು ಮಾನವನಿಗೆ ಈ ಸ್ವಪ್ನದ ಅನುಭವಗಳನ್ನು ಆತನ ಬಾಹ್ಯ ಜ್ಞಾನದ ಕೊರತೆಯನ್ನು ಪೂರ್ಣಗೊಳಿಸಲು ಸಹಕಾರಿಯಾಗುತ್ತವೆ ಎಂದಿದ್ದಾರೆ.

ಭಾವನೆಗಳು ಹಾಗೂ ಭಕ್ತಿ ಇವುಗಳ ವಿಚಾರವನ್ನು ಕುರಿತು ಚರ್ಚಿಸುವಾಗ ಸ್ವಾಮಿ ಕೃಷ್ಣಪ್ರೇಮರ ವಿಚಾರವನ್ನು ಪುನಃ

ಮಂಡಿಸುತ್ತಾರೆ. "ಪ್ರೇಮವೆಂಬುದು ದಿವ್ಯಭಾವನೆ ಎಂದೆನಿಸುವುದು. ಅದು ದೈವೀಕೃಪೆಯೂ ಆಹುದು. ಸ್ವರ್ಗದಲ್ಲಿ ಪ್ರೇಮವು ತ್ಯಾಜ್ಯವೆನಿಸಿದಲ್ಲಿ ಅಂಥ ಸ್ವರ್ಗದ ಅರ್ಥವಾದರೂ ಏನು? ಕೆಲವರಂತೂ ಪ್ರೇಮದಲ್ಲಿಯೂ ಎರಡು ಭಾಗಗಳನ್ನು ಮಾಡುತ್ತಾರೆ. ಮೊದಲನೆಯದನ್ನು ದಿವ್ಯವಾದ ದೈವೀ ಭಾವನೆಯಿಂದ ಕೂಡಿದುದಾದರೆ ಇನ್ನೊಂದನ್ನು ಐಹಿಕವಾದ ಪ್ರೇಮ ಎಂದು ವಿಂಗಡಿಸುತ್ತಾರೆ. ಆಧ್ಯಾತ್ಮವು ವಿಶ್ವದ ಹೊರತಾದುದೇನಲ್ಲ. ಆದುದರಿಂದ ಈಶ್ವರ ನಿರ್ಮಿತವಾದ ನಿರ್ಮಲ ಪ್ರೇಮ ಭಾವವು ಐಹಿಕ ಹಾಗೂ ಆಧ್ಯಾತ್ಮ ಎಂಬ ರೀತಿಯಲ್ಲಿ ವಿಭಾಗಿಸುವುದು ಯೋಗ್ಯವಲ್ಲ." ಇದು ಕೃಷ್ಣಪ್ರೇಮರ ಅಭಿಪ್ರಯ ಎಂಬುದಾಗಿ ತಿಳಿಸುತ್ತಾರೆ.

ಮಹಾರಾಜ ಕರಣಸಿಂಗರು ತಮ್ಮಜೀವನದಲ್ಲಿ ಯೋಗಿ ಕೃಷ್ಣಪ್ರೇಮರ ಸಹವಾಸ ದೊರೆತುದು ಅಂತಃಕರಣದ ಪರಿವರ್ತನೆಗೆ ಬಹು ದೊಡ್ಡ ಸಾಧನವಾಯಿತೆಂದು ಹೇಳಿಕೊಂಡಿದ್ದಾರೆ. ತಾವು ಜೀವನದಲ್ಲಿ ಅನೇಕ ಸುಖದುಃಖಗಳನ್ನು ಏರಿಳಿತಗಳನ್ನು ನಿರಾಶೆಯ ಪ್ರಸಂಗಗಳನ್ನು ಅನುಭವಿಸಿದುದಾಗಿ ತಿಳಿಸಿ ಆ ಎಲ್ಲ ಪ್ರಸಂಗಗಳಲ್ಲಿ ಶ್ರೀ ಕೃಷ್ಣಪ್ರೇಮರ ಸ್ಮರಣೆ ಹಾಗೂ ಸಹವಾಸದ ಸುಮಧುರವಾದ ಸುಗಾಢತೆಯ ಶಕ್ತಿ ತಮಗೆ ಮಾರ್ಗವನ್ನು ತೋರಿಸಿದಂತಾಗಿದೆ ಎಂದೆನ್ನುತ್ತಾರೆ. ತಾವು ದಿನಾಂಕ ೨-೧೨-೧೯೬೪ರಂದು ಮೀರತದಲ್ಲಿರುವ ಕೃಷ್ಣಪ್ರೇಮರ ಆಶ್ರಮದಲ್ಲಿದ್ದಾಗ ನಡೆದ ಒಂದು ಘಟನೆಯನ್ನು ಕುರಿತು ಹೀಗೆ ಹೇಳಿದ್ದಾರೆ.

"ಯೋಗಿ ಕೃಷ್ಣಪ್ರೇಮರನ್ನು ಆಶ್ರಮದ ನಿವಾಸಿಗಳು ಗೋಪಾಲದಾದಾ ಎಂದೇ ಸಂಬೋಧಿಸುತ್ತಿದ್ದರು. ಮಾತಾ ಯಶೋದಾಮಾಯಿಯ ಪುಣ್ಯದಿನವನ್ನು ಆಚರಿಸಲು ನಾನು ಅಲ್ಲಿಗೆ ಹೋಗಿದ್ದೆ. ಸಮೀಪದಲ್ಲಿರುವ ಬೆಟ್ಟಗಳ ತುದಿ ಅಂಚಿನಿಂದ ಸೂರ್ಯನಾರಾಯಣನು ಹೊರಬರುತ್ತಿರುವ ಮನೋಹರ ದೃಶ್ಯವು ಕಾಣಬರುತ್ತಿತ್ತು. ಮೂಕವಿಸ್ಮಿತನಾಗಿ ಆ ದೃಶ್ಯವನ್ನು ನೋಡುವುದರಲ್ಲಿ

ತಲ್ಲೀನನಾಗಿ ಹೋಗಿದ್ದೆ. ಸಮೀಪದಲ್ಲಿದ್ದ ಮರದಡಿಯಲ್ಲಿ ಕುಳಿತುಕೊಂಡು ಕಠೋಪನಿಷತ್ ಭಾಗಗಳನ್ನು ಪಠಿಸುತ್ತಲಿದ್ದ ಆ ದಿವ್ಯ ತೇಜೋರಾಶಿಯು ನಿಧಾನವಾಗಿ ಮೇಲೇಳ ತೊಡಗಿತ್ತು. ಆ ನೋಟವೇ ನನಗೆ ಬ್ರಹ್ಮವೆಂದೆನಿಸತೊಡಗಿತು. ಆ ವಿಚಾರದಲ್ಲಿ ಬಹು ಹೊತ್ತು ಮುಳುಗಿಹೋಗಿದ್ದೆ. ಎಷ್ಟೋ ಹೊತ್ತಿನ ಮೇಲೆ ಪುನಃ ಎಂದಿನಂತೆ ಆಶ್ರಮಕ್ಕೆ ಮರಳಿದೆ. ಅಂತರಂಗದಲ್ಲಿ ವಿಶಿಷ್ಟ ಶಕ್ತಿಯು ಅವಿರ್ಭಾವವಾದಂತಹ ಅನುಭವವಾಗುತ್ತಿತ್ತು. ಕತ್ತಲೆಯ ಆಚೆಗೆ ಇರುವ ದಿವ್ಯಜ್ಯೋತಿಯನ್ನು ಕಂಡ ಅನುಭವವನ್ನು ನಾನು ಅನುಭವಿಸಿದೆ.''

ಕೃಷ್ಣಪ್ರೇಮರ ನಿರೂಪ ಪಡೆದು ಹೊರಡಲು ಅವರಿಗೆ ನಮಿಸಲು ಬಾಗಿದೆ. ತೇಜಃಪುಂಜವಾಗಿ ಹೊಳೆವ ಆ ನೀಲವರ್ಣದ ನೇತ್ರಗಳಲ್ಲಿ ಆಧ್ಯಾತ್ಮ ಚಿಂತನೆಯ ಜ್ಯೋತಿಯನ್ನು ಕಂಡ ಅನಭವವಾಯಿತು. ಅವರು ಉಪನಿಷತ್ತಿನಲ್ಲಿಯ ಒಂದು ಭಾಗವನ್ನು ಹೇಳಿದರು. ಅದರ ಅಂತರಾರ್ಥವು ಈ ರೀತಿಯಾಗಿರುವುದು.

``ಕ್ರಿಯಾಶೀಲರಾದ ಮಹಾತ್ಮರು ಬ್ರಹ್ಮಜ್ಞಾನದ ಶ್ರೇಷ್ಠ ಪುರುಷರೆಂದೆನಿಸಿ ಕೊಳ್ಳುತ್ತಾರೆ.''

ನೈನಿತಾಲ್‌ದಿಂದ ದಿನಾಂಕ ೧೪-೧೧-೧೯೬೫ರಂದು ಕರಣಸಿಂಗರಿಗೆ ಒಂದು ತಂತಿಯ ಸಂದೇಶವು ತಲುಪಿತು, ನಿಸರ್ಗದಡಿಯಲ್ಲಿ ಕುಳಿತು ಅಧ್ಯಾತ್ಮದ ಸಾಧನೆಯಲ್ಲಿ ನಿರತರಾಗಿದ್ದ ಯೋಗಿ ಕೃಷ್ಣ ಪ್ರೇಮರು, ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದ್ದರು.

ಸುಪ್ರಸಿದ್ಧ ಇತಿಹಾಸ ಸಂಶೋಧಕರೆನಿಸಿದ ಡಾ|| ಸೇತುಮಾಧವರಾವ್ ಪಗಡಿ ಇವರಲ್ಲಿ ಯೋಗಿ ಕೃಷ್ಣಪ್ರೇಮರನ್ನು ಕುರಿತು ಮಾತನಾಡಿದಾಗ ಅವರು ತಾವು ಬನಾರಸ ವಿದ್ಯಾಲಯದಲ್ಲಿ ಶಿಕ್ಷಣ ಪಡೆಯುತ್ತಿದ್ದಾಗ ರೋನಾಲ್ಡ ನಿಕ್ಸನ್‌ರು ತಮಗೆ ಸಂಸ್ಕೃತ

ನಾಟಕವನ್ನಾಡಿಸಿದರೆಂದೂ ಅವರೊಬ್ಬ ಮಹಾಸಾಧಕರೆಂದೂ ಎಲ್ಲ ವಿದ್ಯಾರ್ಥಿಗಳು ಅವರನ್ನು ಆದರಿಸುತ್ತಿದ್ದುದಾಗಿಯೂ ತಿಳಿಸಿದರು.

ಡಾ|| ಕರಣಸಿಂಗರ ಆತ್ಮಚರಿತ್ರೆಯು ಆಧ್ಯಾತ್ಮ ಚಿಂತಕರಿಗೆ ಅತ್ಯಂತ ಬೋಧಪ್ರದ ಗ್ರಂಥವೆನಿಸುವುದಲ್ಲದೆ ಅದನ್ನು ಅಭ್ಯಾಸ ಮಾಡಿದಂತೆಲ್ಲ ಹಿಮಾಲಯದ ನಿಸರ್ಗದಲ್ಲಿ ವಾಚಕನು ಸಂಚಾರ ಮಾಡಿದಂತಹ ಅನುಭವವನ್ನು ಪಡೆಯುತ್ತಾನೆ.



# ವಿರಾಟರೂಪಿ ಕುರುಕ್ಷೇತ್ರ

ಭಾರತದ ತೀರ್ಥ ಕ್ಷೇತ್ರಗಳಲ್ಲಿ ಕುರುಕ್ಷೇತ್ರಕ್ಕೆ ವಿಶೇಷ ಸ್ಥಾನಮಾನ. ಅಲ್ಲಿರುವ ಬ್ರಹ್ಮ ಸರೋವರವನ್ನು ಋಗ್ವೇದದಲ್ಲಿ 'ಶರಣ್ಯಾಯಾವತ' ಎಂದು ವರ್ಣಿಸಲಾಗಿದೆ. ಇಂದ್ರ, ಸೋಮ, ದಧೀಚಿ, ಅಶ್ವಿನಿಕುಮಾರರ ಸಂಬಂಧ ಈ ಕ್ಷೇತ್ರಕ್ಕಿದೆ ಎಂದು ಹೇಳಿದೆ.

ಅಥರ್ವಣರ ಮಗ ದಧೀಚಿ ಮುನಿಯು ಅಸುರರ ಮೇಲೆ ಹಿಡಿತವನ್ನಿಟ್ಟು ಕೊಂಡಿದ್ದನೆಂದೂ, ಆತನ ಮರಣಾನಂತರ ಅಸುರರ ಪ್ರಾಬಲ್ಯ ಬಲವಾಯಿತೆಂದೂ, ಆಗ ಇಂದ್ರನು ಋಷಿಗಳ ಮೊರೆ ಹೊಕ್ಕಾಗ ಅವರು ಅಶ್ವಿನೀಕುಮಾರರಿಗೆ ದಧೀಚಿ ಕಲಿಸಿಹೋಗಿದ್ದ ಮಧುವಿದ್ಯೆಯನ್ನು ಶೋಧಿಸಲಾಗಿ ಅದು ಶರಣ್ಯಾಯಾವತ ಸರೋವರದ ತೀರದಲ್ಲಿ ದೊರೆಯಿತೆಂದೂ ಹೇಳಲಾಗಿದೆ. ಇಂದ್ರನು ವೃತ್ರಾಸುರನ ಸಂಹಾರವನ್ನು ಸರಸ್ವತಿ ನದಿ ಸಮೀಪ ಮಾಡಿದನೆಂದೂ, ಮುಂದೆ ಆ ಸ್ಥಳವನ್ನೇ ದಧೀಚಿ ತೀರ್ಥ ಎಂದು ಗುರುತಿಸುವಂತಾಯಿತೆಂದೂ, ಸುಪ್ರಸಿದ್ಧ ಭಾಷ್ಯಕಾರ ಸಾಯಣಾಚಾರ್ಯರು ವಿವರಣೆ ನೀಡಿದ್ದಾರೆ.

ಕುರುರಾಜನು ಅನೇಕ ವರುಷ ರಾಜ್ಯಭಾರ ಮಾಡಿದ ಮೇಲೆ ಮರಣಾನಂತರವೂ ತನ್ನ ಹೆಸರು ಅಜರಾಮರವಾಗಿರುವಂತೆ ಏನಾದರೂ ಕಾರ್ಯ ಮಾಡಬೇಕೆಂಬ ಹಂಬಲದಿಂದ, ದ್ವೈತವನಕ್ಕೆ ಆಗಮಿಸಿದನಂತೆ.

ಅಲ್ಲಿ ಸರಸ್ವತಿ ತೀರದಲ್ಲಿದ್ದ ಸರೋವರವನ್ನು ಕಂಡು ಅದರಲ್ಲಿ ಮಿಂದು ಬ್ರಹ್ಮದೇವನನ್ನು ಕುರಿತು ತಪವನ್ನಾಚರಿಸಿದನಂತೆ. ಆಮೇಲೆ ಶಮಂತ ಪಂಚಕ ಎಂಬ ಸ್ಥಳದ ಉತ್ತರ ಭಾಗಕ್ಕೆ ಬಂದು ಅಲ್ಲಿರುವ ನೆಲವನ್ನು ಬಂಗಾರದ ನೇಗಿಲಿನೊಂದಿಗೆ ಮಹಾದೇವನ ನಂದಿಯನ್ನೂ ಯಮಧರ್ಮರಾಜನ ಕೋಣವನ್ನೂ ಹೂಡಿ ಉತ್ತಲಾರಂಭಿಸಿದನಂತೆ. ಹದಿನಾಲ್ಕುಚೌರಸ ಮೈಲಿನಲ್ಲಿವ್ಯಾಪಿಸಿದ ಆ ನೆಲವನ್ನು ಉತ್ತುತ್ತಿರುವಾಗ ದೇವೇಂದ್ರನು ಬಂದು ರಾಜನ್ ಇದೇನು ಮಾಡುತ್ತಿರುವಿರಿ ಎಂದು ಕೇಳಿದ. ರಾಜನು 'ದೇವಪ್ರಭು, ತಪ, ಯಜ್ಞ, ದಯಾ, ಕ್ಷಮಾ, ಶೌಚ, ದಾನ, ಬ್ರಹ್ಮಚರ್ಯಾದಿ ಗುಣಗಳಿಗೆ ಯೋಗ್ಯವಾದ ಬೀಜವನ್ನು ಬಿತ್ತಲು ಕಾರ್ಯನಿರತವಾಗಿರುವೆ, ಎಂದು ಹೇಳಿದಾಗ ದೇವೇಂದ್ರನು ನಗುತ್ತ ಇದಕ್ಕೆಲ್ಲ ಬೀಜಗಳು ಬೇಕಲ್ಲ ಎಂದು ಹೇಳಿ ಹೊರಟು ಹೋದನಂತೆ. ಕೆಲವು ದಿನಗಳಾದ ಮೇಲೆ ಮಹಾವಿಷ್ಣು ಆ ಸ್ಥಳಕ್ಕೆ ಬಂದು ನೋಡಿದ. ರಾಜಾ ನಿನ್ನ ಕಾರ್ಯಕ್ಕೆ ಬೀಜೋತ್ಪತ್ತಿಯ ಅವಶ್ಯಕತೆ ಇಲ್ಲವೆ ಎಂದು ನುಡಿದ. ಪ್ರಭು ಆ ಬೀಜಗಳೆಲ್ಲ ನನ್ನ ದೇಹದಲ್ಲಿವೆ' ಎಂದು ರಾಜ ಉತ್ತರಿಸಿದ. ಆಗ ನಿನ್ನ ಬಲಗೈ ಮುಂದೆ ಮಾಡು ಎಂದು ವಿಷ್ಣು ಹೇಳಿದ. ದೇವನ ಅಪ್ಪಣೆಯ ಮೇರೆಗೆ ರಾಜನು ತನ್ನ ಕೈ ಮುಂದೊಡ್ಡಿದ. ತಕ್ಷಣ ಸುದರ್ಶನ ಚಕ್ರದಿಂದ ಆ ಕೈಯನ್ನು ತುಂಡರಿಸಿ ಚೆಲ್ಲಿದ. ಹೀಗೆ ಕುರುರಾಜನ ಅಂಗಾಂಗಗಳೆಲ್ಲ ಸಾವಿರಾರು ತುಂಡುಗಳಾಗಿ ಕತ್ತರಿಸಿ ಬಿದ್ದವು. ರಾಜನ ತಲೆ ಮಾತ್ರ ಉಳಿದುಕೊಂಡಿತು. ಕುರುರಾಜನ ತ್ಯಾಗ ಕಂಡು ಸುಪ್ರೀತನಾದ ಮಹಾವಿಷ್ಣು ರಾಜನ್, ನಿನ್ನ ತ್ಯಾಗ ಪರಿಶ್ರಮಗಳಿಗೆ ನಾನು ಸಂತುಷ್ಟನಾಗಿರುವೆ. ವರ ಕೇಳಿಕೋ ಎಂದು ನುಡಿದ. 'ಭಗವನ್, ಈ ಭೂಮಿಯನ್ನು ಹದ ಮಾಡಿದ್ದೇನೆ. ಆದುದರಿಂದ ಈ ನೆಲವು ಧರ್ಮಕ್ಷೇತ್ರವೆಂದೂ, ಕುರುಕ್ಷೇತ್ರವೆಂದೂ ಪ್ರಸಿದ್ಧವಾಗಲಿ' ಎಂದು ಕೇಳಿಕೊಂಡನಂತೆ.

ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಲು, ಆತ್ಮಶಾಂತಿಯನ್ನು ಪಡೆಯಲು ಈ ನೆಲವು ಸಾಧನ ಭೂಮಿಯಾಗಲಿ ಎಂದು

ಶ್ರೀಮನ್ನಾರಾಯಣನು ಕುರು ರಾಜನಿಗೆ ವರವನ್ನಿತ್ತನೆಂದು ಪ್ರಾಚೀನ ಸಾಹಿತ್ಯ ತೋರಿಸಿಕೊಡುತ್ತದೆ.

ಋಗ್ವೇದದಲ್ಲಿ ಪುರು, ಊರ್ವಶಿಯರ ಕಥೆಯೂ ಬರುತ್ತದೆ. ಶತಪಥ ಬ್ರಾಹ್ಮಣದಲ್ಲಿಯೂ ಈ ಪ್ರೇಮಿಗಳ ವರ್ಣನೆ ಇದೆ. ಪತ್ನಿಯ ವಿರಹದಿಂದ ದುಃಖಿತನಾಗಿ ಸಂಚರಿಸುತ್ತಿರುವಾಗ ದೇವಲೋಕದ ಆ ಸುಂದರಿಯು ಇದೇ ಕುರುಕ್ಷೇತ್ರದಲ್ಲಿ ಅತನಿಗೆ ಕಾಣಿಸಿಕೊಳ್ಳುತ್ತಾಳೆ. ಈ ಕಥಾಭಾಗವು ಮತ್ಸ್ಯ ಕೂರ್ಮ, ವಿಷ್ಣು, ವಾಯು, ಬ್ರಹ್ಮ ಭಾಗವತ, ಹರಿವಂಶಾದಿ ಪುರಾಣಗಳಲ್ಲಿಯೂ, ಕಥಾಸರಿತ್ಸಾಗರದಲ್ಲಿಯೂ ಕಾಣಸಿಗುತ್ತದೆ. ಮಹಾಕವಿ ಕಾಳಿದಾಸನಿಗೆ ಈ ಪ್ರೇಮಿಗಳ ಕಥೆ ಹಿಡಿಸಿತು. ಆತನಿಂದ ವಿಕ್ರಮೋರ್ವಶೀಯ ಎಂಬ ನಾಟಕವು ರಚಿಸುವಂತಾಯಿತು.

ವೇದ ಹಾಗೂ ಬ್ರಾಹ್ಮಣ ಕಾಲಗಳಲ್ಲಿ ಕುರುಕ್ಷೇತ್ರದಲ್ಲಿ ಅನೇಕ ಯಜ್ಞ- ಯಾಗಾದಿ ಕಾರ್ಯಗಳು ನಡೆದು ಹೋಗಿವೆ. ಅಗ್ನಿ, ವರಣ, ಮರುತ, ವಿಷ್ಣು, ವಿಶ್ವ ದೇವರೇ ಮೊದಲಾದವರು ಈ ಸ್ಥಳದಲ್ಲಿ ಯಜ್ಞ ಮಾಡಿದರೆಂದು ವೈದಿಕ ವಾಂಙ್ಮಯ ತಿಳಿಸುತ್ತದೆ. ಈ ಸ್ಥಳದಲ್ಲಿ ಹಿಮಾಲಯದಲ್ಲಿ ಜನ್ಮ ತಾಳಿದ ಸರಸ್ವತಿಯ ಪ್ರವಾಹವಿತ್ತು. ಮುಂದೆ ಕಾಲಾಂತರದಲ್ಲಿ ಹಿಮಾಲಯದಲ್ಲಿ ನಡೆದ ಭೂಕಂಪನದಿಂದಾಗಿ ಪ್ರವಾಹ ಕ್ಷೀಣವಾಗುತ್ತ ಮುಂದೆ ಮರಳಿನಲ್ಲಿ ಲೀನವಾಯಿತೆಂದು ಹೇಳುತ್ತಾರೆ. ಆ ಸರಸ್ವತಿಯ ಅನುಗ್ರಹವು ಎಲ್ಲರ ಮೇಲಿರಲಿ ಎಂದೇ ಪುರಾಣಗಳು 'ಪ್ರಾಚೀನ ಸರಸ್ವತಿ' ಎಂದು ಆ ದೇವಿಯನ್ನು ಹೊಗಳಿವೆ. ಆದುದರಿಂದಲೇ ಆ ದೇವತೆಯು ಜ್ಞಾನದಾಯಿನಿಯಾದ ವಿದ್ಯಾಧಿದೇವತೆ ಎಂದು ಪೂಜಿಸುವಂತಾದಳೆಂದು ಹೇಳುತ್ತಾರೆ. ಈ ಸರಸ್ವತಿ ನದಿಯೊಂದಿಗೆ ದೃಶದ್ವತಿ ನದಿಯೂ ಕುರುಕ್ಷೇತ್ರದ ಪೂರ್ವಭಾಗದಲ್ಲಿದೆ. ಈ ಪ್ರವಾಹದ ದಂಡೆಯ ಮೇಲೆಯೂ ಯಜ್ಞ ಯಾಗಾದಿಗಳು ನಡೆದಿವೆ. ಈ ಎರಡೂ ಪ್ರವಾಹಗಳ ಮಧ್ಯಭಾಗದಲ್ಲಿ 'ಅಪಯಾ' ಎಂಬ ಕಿರಿ ತೊರೆಯೂ ಇದೆ. ಋಗ್ವೇದದಲ್ಲಿ ಈ ತೊರೆಯ ಉಲ್ಲೇಖವಿದೆ.

ಕುರುಕ್ಷೇತ್ರದ ಅಭ್ಯಾಸ ಮಾಡಿದವರಲ್ಲಿ ಫಡಕೆಯವರಿಗೆ ಅಗ್ರಸ್ಥಾನವಿದೆ. ಅವರ ಶೋಧನೆ ಅಗಾಧ. ಕುರುಕ್ಷೇತ್ರದ ಪರಂಪರೆಗೆ ಹೊಂದಿಕೊಂಡ ಅವರ ಗ್ರಂಥವು ಭಾರತೀಯ ಸಾಹಿತ್ಯಕ್ಕೆ ಅಮೋಘ ಕಾಣಿಕೆ.

ಈ ನೆಲದಲ್ಲಿ ಸುದಾಸರಾಜನ ಪರಾಕ್ರಮ ಮೆರೆಯಿತು. ವೃತ್ರಾರನ ಸಂಹಾರವಾಯಿತು. ಕುರುವಂಶದ ಚಿತ್ರಾಂಗದ, ಗಂಧರ್ವ ಚಿತ್ರಾಂಗದರ ಯುದ್ಧ ನಡೆಯಿತು. ಕೌರವ ಚಿತ್ರಾಂಗದನು ಅಸುನೀಗಿದ ಸ್ಥಳವೂ ಇದೇ ನೆಲದಲ್ಲಿ. ಕೆಲವು ಕಾಲ ಈ ನೆಲವನ್ನು ಸುಂದೋಪಸುಂದರು ಆಳಿದರು. ಭಾರತದಲ್ಲಿ ಕ್ಷತ್ರಿಯರನ್ನು ಪರಾಭವಗೊಳಿಸಿದ ಭಾರ್ಗವ ರಾಮನು ಈ ನೆಲದಲ್ಲಿಯೇ ಐದು ಕುಂಡಗಳನ್ನು ರಚಿಸಿದ. ಮುಂದೆ ಅವುಗಳನ್ನೇ 'ಸಮಂತ ಪಂಚಕ'ವೆಂದು ಗುರುತಿಸತೊಡಗಿದರು. ಇಲ್ಲಿರುವ 'ರಾಮಹದ್' ಸರೋವರವನ್ನೂ ಪರಶುರಾಮರ ಕಾಲದ್ದೆಂದು ತೋರಿಸುವುದುಂಟು. ಕೌರವ-ಪಾಂಡವರ ಯುದ್ಧವಾದ ನೆಲವೂ ಇದೇ ಕುರುಕ್ಷೇತ್ರ.

ಫಡಕೆಯವರು ತಮ್ಮ ಗ್ರಂಥದ ಎರಡನೇ ಭಾಗದಲ್ಲಿ ಮಹಾಭಾರತ ಒಂದು ಕಾವ್ಯ. ಅದರಲ್ಲಿ ಇತಿಹಾಸದ ಅಂಶವಿಲ್ಲ ಎಂದು ಹೇಳುತ್ತಿರುವವರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ.

ಮಹಾಭಾರತದ ಕಥೆಯನ್ನಾರಂಭಿಸುವಾಗ ವ್ಯಾಸ ಮಹರ್ಷಿಗಳು ಅದನ್ನು 'ಜಯ' ಎಂಬ ಹೆಸರಿನಿಂದ ರಚಿಸಿ ಅದನ್ನು ಐತಿಹಾಸಿಕ ಕಾವ್ಯವೆಂದೇ ಹೇಳಿಕೊಂಡಿದ್ದಾರೆ, ಇನ್ನೊಂದು ಸಂದರ್ಭದಲ್ಲಿ ವ್ಯಾಸರ ಉಪಸ್ಥಿತಿಯಲ್ಲಿಯೇ ವೈಶಂಪಾಯನರು ಜನಮೇಜಯ ರಾಜನಿಗೆ ಈ ಭಾರತದ ಕಥೆಯನ್ನು ಹೇಳಲಾಗಿದೆ ಎಂದಿದ್ದಾರೆ. ಹೀಗಿರುವಾಗ ವ್ಯಾಸಪ್ರಣೀತ 'ಜಯ' ಗ್ರಂಥವು ಮಾತ್ರ ಈವರೆಗೆ ಕಾಣಸಿಗುವುದಿಲ್ಲ. ಆದರೂ ಒಂದು ಕಾಲದಲ್ಲಿ ಆ ಗ್ರಂಥವಿರಲು ಸಾಧ್ಯ ಎಂದು ಫಡಕೆ ಅಭಿಪ್ರಾಯಪಟ್ಟಿರುತ್ತಾರೆ.

ಗ್ರಂಥಾರಂಭದಲ್ಲಿ ಪುರು, ಕುರು, ಭರತರಿಂದಾರಂಭಗೊಂಡು ಮುಂದಿನ ಪೀಳಿಗೆಯಲ್ಲಿ ದುಷ್ಯಂತ, ಅಜಾಮಿಳ, ರಿಕ್ಷ, ಸಂವರಣ, ಪ್ರತೀಪ, ಬಾಹ್ಲೀಕ, ಪ್ರಾತಿತೀಯ, ಶಂತನು, ಧ್ರುತರಾಷ್ಟ್ರ, ವಿಚಿತ್ರವೀರ್ಯ ಮೊದಲಾದ ರಾಜರಿಂದ ಈ ವಂಶವೃಕ್ಷ ಬೆಳೆದು ಬಂದಿದೆ. ಫಡಕೆಯವರು ಸಾದ್ಯಂತವಾಗಿ ಈ ರಾಜರ ವಿವರ ಕೊಟ್ಟಿದ್ದಾರೆ. ಅದೇ ರೀತಿ ಮಹಾಭಾರತ ಯುದ್ಧದಲ್ಲಿ ಭಾಗಿಗಳಾದ ವೀರರ ಉಲ್ಲೇಖ ಮಾಡಿದ್ದಾರೆ. ಅವರಲ್ಲಿ ದೇವಕೀ ಪುತ್ರ ಕೃಷ್ಣ, ಶಿಖಂಡಿ ಬಗ್ಗೆಯೂ ಚರ್ಚಿಸಿದ್ದಾರೆ. ಸಾಂಖ್ಯಾಯನ, ಆಶ್ವಲಾಯನರಿಗೆ ಮಹಾಭಾರತ ಯುದ್ಧದ ಪೂರ್ಣ ಪರಿಚಯವಿತ್ತು ಎಂಬುದಕ್ಕೆ ಆಧಾರಗಳನ್ನಿತ್ತಿದ್ದಾರೆ. ಆಶ್ವಲಾಯನರು ವೇದವ್ಯಾಸರ ಶಿಷ್ಯರಾಗಿದ್ದು ವೈಶಂಪಾಯನರ ವಿಚಾರವನ್ನು ಹೇಳುವಾಗ ಅವರನ್ನು ಭರತಾಚಾರ್ಯರೆಂದು ವರ್ಣಿಸಿರುವುದಾಗಿ ತೋರಿಸಿದ್ದಾರೆ. ಪಾಣಿನಿಯ ಗ್ರಂಥದಲ್ಲಿಯೂ ವಾಸುದೇವ, ಅರ್ಜುನ, ಭೀಷ್ಮ, ಯುಧಿಷ್ಠಿರರ ಹೆಸರುಗಳಿವೆ. ಇದರಿಂದಾಗಿ ಪಾಣಿನಿಗೆ ವ್ಯಾಸ ಶಿಷ್ಯರೆನಿಸಿದ ಪೈಲ, ವೈಶಂಪಾಯನರ ವಿಶೇಷ ಪರಿಚಯವಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೇ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ದುರ್ಯೋಧನ ಹಾಗೂ ಪಾಂಡವರ ಉಲ್ಲೇಖವಿರುವುದಾಗಿ ತೋರಿಸಿದ್ದಾರೆ.

**ಜನಮಾನಸದಲ್ಲಿ ಜಾಗೃತ:** ಈ ಎಲ್ಲ ಕೃತಿಗಳನ್ನು ಅಭ್ಯಾಸ ಮಾಡಿದಲ್ಲಿ ಮಹಾಭಾರತ ಯುದ್ಧದ ಪರಿಣಾಮ ನೂರಾರು ವರುಷಗಳ ಕಾಲ ಜನಮಾನಸದಲ್ಲಿ ಜಾಗೃತವಾಗಿ ಉಳಿದುಕೊಂಡು ಬಂದಿರಬಹುದೆಂಬ ಊಹೆಗೆ ಅವಕಾಶವಿದೆ ಎಂದೆನ್ನುತ್ತಾರೆ. ಈ ಮಾತಿಗೆ ಪೂರಕವೆನಿಸುವಂತೆ ಹಸ್ತಿನಾಪುರ, ಬರ್ನವ (ವಾರಣಾವತ), ಬೈರಾಟ (ವಿರಾಟ), ಪಾನೀಪತ (ಪಾಣಿಪ್ರಸ್ಥ), ಸೋನಪಥ, ಇಂದ್ರಪಥ '(ಇಂದ್ರಪ್ರಸ್ಥ) ಬಾಗಪತ (ವೈಕ್‌ಪ್ರಸ್ಥ) ಮೊದಲಾದ ಸ್ಥಳಗಳಲ್ಲಿ ಪುರಾತತ್ವ ಇಲಾಖೆಯವರು ನಡೆಸಿದ ಉತ್ಖನನದಿಂದಾಗಿ ಆ ಸ್ಥಳಗಳಲ್ಲಿ ದೊರೆತಿರುವ ಸಾಮಗ್ರಿಗಳ ಅಭ್ಯಾಸವನ್ನು ಮಾಡಿದಾಗ ಕ್ರಿ.ಪೂ. ಹನ್ನೊಂದನೇ ಶತಮಾನದಲ್ಲಿ ಬಳಕೆಯಲ್ಲಿದ್ದ

ಪದಾರ್ಥಗಳಾಗಿರಬಹುದೆಂಬ ಅಭಿಪ್ರಾಯ ವ್ಯಕ್ತವಾಗುತ್ತದೆ. ಕುದುರೆಗಳ ಅಸ್ಥಿಪಂಜರಗಳು ಅಶ್ವಮೇಧ ಯಾಗದಲ್ಲಿ ಬಳಸಿದ ಪ್ರಾಣಿಗಳ ಅವಶೇಷಗಳಿರಬಹುದೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ವಿಶೇಷವೆಂದರೆ ನಿಚಕ್ಷು ರಾಜನ ಕಾಲದಲ್ಲಿ ಹಸ್ತಿನಾಪುರವು ಗಂಗಾ ಪ್ರವಾಹದಿಂದಾಗಿ ಸಂಪೂರ್ಣ ಕೊಚ್ಚಿ ಹೋಯಿತೆಂದು ತಿಳಿದುಬರುತ್ತದೆ. ತನ್ನಿಮಿತ್ತವಾಗಿಯೇ ಪಾಂಡವ ವಂಶಜರು ಮುಂದೆ ಹಸ್ತಿನಾಪುರ ತೊರೆದು ಕೌಶಾಂಬಿಗೆ ಬಂದು ರಾಜ್ಯಭಾರ ಮಾಡುವಂತಾಯಿ ತೆಂದು ವಿದ್ವಾಂಸರ ಅಭಿಪ್ರಾಯವಿದೆ.

ಭಾರತ ಯುದ್ಧದ ಕಾಲವನ್ನು ಗುರುತಿಸಲು ಘಡಕೆಯವರು ಶತಪಥ ಬ್ರಾಹ್ಮಣ, ಬೃಹದಾರಣ್ಯಕ ಉಪನಿಷತ್ತು, ಸಾಂಖ್ಯಾಯನ ಆರಣ್ಯಕ, ಮೊದಲಾದ ವಾಙ್ಮಯಗಳು ಉಪಯುಕ್ತವೆಂಬ ಅಭಿಪ್ರಾಯ ವ್ಯಕ್ತಪಡಿಸಿ, ಸೂತ್ರಕಾರ ಗುಣಾಖ್ಯ ಪರೀಕ್ಷಿತನ ನಂತರ ಏಳು ಅಥವಾ ಎಂಟನೇ ತಲೆಮಾರಿನವನಾಗಿರಬಹುದೆಂಬ ವಿಚಾರ ಹೊಂದಿದ್ದಾರೆ. ಮಾಧ್ಯಮಿಕಾಯ ಎಂಬ ಬೌದ್ಧ ಗ್ರಂಥದಲ್ಲಿ ಕಾಣಸಿಗುವ ಅಶ್ವಲಾಯನನು ಬುದ್ಧನ ಸಮಾಕಾಲೀನನೆಂದು ಹೇಳಲು ಬರುವುದಿಲ್ಲವಾದರೂ ಕ್ರಿ.ಪೂ. ಆರುನೂರರಿಂದ ಎಂಟುನೂರರ ಕಾಲಾವಧಿಯಲ್ಲಿ ಆಗಿಹೋಗಿರಬಹುದೆಂಬ ಅಭಿಪ್ರಾಯಪಟ್ಟಿದ್ದಾರೆ. ಈ ಎಲ್ಲ ಆಧಾರಗಳಿಂದಾಗಿ ಋಗ್ವೇದದ ಹತ್ತನೆಯ ಮಂಡಲದಲ್ಲಿ ಕಾಣುವ ಶಂತನು ರಾಜನ ಉಲ್ಲೇಖ, ಕಾಠಕ ಸಂಹಿತೆಯಲ್ಲಿರುವ ಧೃತರಾಷ್ಟ್ರ, ವಿಚಿತ್ರವೀರ್ಯರ ಉಲ್ಲೇಖಗಳನ್ನು ಪರಿಶೀಲಿಸಿದಾಗ ಮಹಾಭಾರತದ ಯುದ್ಧದ ಕಾಲ ಕ್ರಿ.ಪೂ. ಹದಿನಾಲ್ಕು ನೂರರಿಂದ ಒಂದು ಸಾವಿರದವರೆಗೆ ಎಂದು ನಿರ್ಧಾರ ಮಾಡಬಹುದೆಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದಾರೆ.

ಹರಪ್ಪಾ ಸಂಸ್ಕೃತಿಯು ಕ್ರಿ.ಪೂ. ಹದಿಮೂರರಲ್ಲಿ ನಶಿಸಿಹೋಯಿತು. ಹರಿಯಾನ ಹಾಗೂ ಇತರ ಭಾಗಗಳಲ್ಲಿ ನಡೆಸಿದ ಉತ್ಖನನದಿಂದಾಗಿ ಮುಂದೆ ವೈದಿಕ ಸಂಸ್ಕೃತಿಯು ಪುನರುಜ್ಜೀವ ಹೊಂದಲು ಎರಡು

ಶತಮಾನಗಳಾದರೂ ಹಿಡಿದಿರಬಹುದು. ಘಡಕೆಯವರು ತಮ್ಮ ಸಿದ್ಧಾಂತಕ್ಕೆ ಪೂರಕವೆಂಬಂತೆ ಈ ವಿಚಾರದಲ್ಲಿ ಅನೇಕ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀಕರಿಸಿದ್ದಾರೆ. ಜ್ಯೋತಿಷ್ಯ ಶಾಸ್ತ್ರ ಪ್ರಕಾರ ಆರ್ಯಭಟನ ಕಾಲದಿಂದಲೂ ಮಹಾಭಾರತ ಯುದ್ಧದ ಕಾಲವು ಚರ್ಚೆಗೊಳ್ಳುತ್ತ ಬಂದಿರುವುದನ್ನು ವಿವರಿಸುತ್ತಾರೆ.

ಮಹಾಭಾರತದ ಯುದ್ಧ ನಡೆಯಲೇ ಇಲ್ಲ ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ಅಂಥವರಿಗೆ ಉತ್ತರಿಸುವುದಕ್ಕಾಗಿ ಘಡಕೆಯವರು ಕುರುಕ್ಷೇತ್ರದಲ್ಲಿ ಕಾಣಸಿಗುವ ಅನೇಕ ಸ್ಥಳಗಳೊಂದಿಗೆ ಹೊಂದಿಕೊಂಡಿರುವ ಘಟನೆಗಳನ್ನು ಕುರಿತು ಬಿಚ್ಚುಮನದಿಂದ ಚರ್ಚೆ ಮಾಡಿದ್ದಾರೆ.

ಪಾಂಡವರು ಉಪಪ್ಲಾವ್ಯ ನಗರದಿಂದ ಕುರುಕ್ಷೇತ್ರಕ್ಕೆ ಆಗಮಿಸಿದರು. ಕನಿಂಗ್‌ಹ್ಯಾಮರ ಮತದಂತೆ ಪಾಂಡವರ ಎಡಭಾಗದ ಸೇನೆಯು ಸರಸ್ವತಿ ನದೀ ತೀರದಲ್ಲಿತ್ತು. ಬಲಭಾಗದ ಸೇನೆಯು ಕಿರಮುಚ (ಕುಲತಾರಣತೀರ್ಥ) ಎಂಬಲ್ಲಿತ್ತು. ಈ ಸ್ಥಳವು ಸ್ಥಾನೇಶ್ವರದಿಂದ ದಕ್ಷಿಣ ದಿಕ್ಕಿನಲ್ಲಿರುವ ಗ್ರಾಮಕ್ಕೆ ಹತ್ತಿರ ಪ್ರದೇಶವಾಗಿರುವುದು. ಇನ್ನು ಕೌರವ ಸೇನೆಯು ಪಶ್ಚಿಮಾಭಿಮುಖವಾಗಿದ್ದು ಆ ಸೈನ್ಯದ ಬಲಭಾಗ ಸರಸ್ವತಿ ತೀರದಲ್ಲಿದ್ದರೆ ಎಡಭಾಗದ ಸೇನೆಯು ಅಮೀನ ಗ್ರಾಮದ ಹತ್ತಿರವಿತ್ತು. ಈ ಅಮೀನ ಗ್ರಾಮವೇ ಇಂದಿನ ಅಭಿಮನ್ಯುಖೇಡ ಎಂದು ಗುರುತಿಸಬಹುದು. ಇದೇ ಸ್ಥಳದಲ್ಲಿ ಅಭಿಮನ್ಯು ಧಾರಾತೀರ್ಥನಾದ. ಮಹಾಭಾರತಕಾರರು ವರ್ಣನೆ ಮಾಡಿದಂತೆ ಈ ಎರಡೂ ಸೇನೆಗಳ ವ್ಯಾಪ್ತಿಯು ನಲ್ವತ್ತು ಮೈಲು ಅಥವಾ ಅರವತ್ನಾಲ್ಕು ಕಿಲೋ ಮೀಟರು ಸುತ್ತಳತೆ. ಈ ವರ್ಣನೆ ಅತಿಶಯೋಕ್ತಿ ಎಂದೆನಿಸಬಹುದಾದರೂ ಕೈಥಾಲ, ಪೆಹೋವಾ, ಅಮೀನ, ಥಾನೇಶ್ವರ ಈ ಭಾಗದಲ್ಲಿ ಪಸರಿಸಿಕೊಂಡಿತ್ತೆಂಬ ಮಾತಿಗೆ ಎರಡಿಲ್ಲ.



# ಪ್ರಭಾವೀ ಕರ್ನಾಟಕ

ಕರ್ನಾಟಕವು ಕಾವೇರಿಯಿಂದ ಗೋದಾವರಿಯವರೆಗೂ ಹಬ್ಬಿತ್ತು.

ಈಗ ಮಹಾರಾಷ್ಟ್ರವೆಂದು ಕರೆಯುವ ಬಹುಭಾಗ ಅತಿ ಸ್ಪಷ್ಟವಾಗಿ ಕರ್ನಾಟಕದ್ದಾಗಿತ್ತು. 'ಮಹಾರಾಷ್ಟ್ರ' ಪದವೇ ಮರಾಠಿಯದಲ್ಲ. 'ಮಹಾನಾಡು' ಎಂಬ ಇದು ವಿಶಾಲ ವ್ಯಾಪ್ತಿಯ ಕನ್ನಡ ನಾಡೇ ಆಗಿತ್ತು. ಎರಡನೆಯ ಪುಲಿಕೇಶಿಯ ಐಹೊಳೆಯ ಶಾಸನದಲ್ಲಿ ಉಕ್ತವಾಗಿರುವ "ಅಗ ಮತ್ ಅಧಿಪತಿತ್ವಮ್ ಯೇ ಮಹಾರಾಷ್ಟ್ರ ಕಾಣಾಮ್ ನವನತಿ ಸಹಸ್ರ ಗ್ರಾಮ ಭಾಜಾಮ್ ತ್ರಯಾಣಾಮ್" ಎನ್ನುವಂತೆ ಕರ್ನಾಟಕದಲ್ಲಿ ಬಹುಭಾಗ ಮಹಾರಾಷ್ಟ್ರ ಸೇರಿತ್ತು. ಅಚ್ಚ ಕನ್ನಡಿಗ ಪುಲಿಕೇಶಿ ಬನವಾಸಿ, ಗಂಗ, ಕೊಂಕಣರನ್ನು ಸೋಲಿಸಿ ಲಾಟ, ಮಾಳವ, ಘೂರ್ಜರನ್ನು ಗೆದ್ದು, ಕೋಸಲದ ಕಳಿಂಗರಾಜ ಹಾಗೂ ಕಾಂಜೀಪುರವನ್ನು ಗೆದ್ದು ಚೋಳ, ಪಾಂಡ್ಯ, ಕೇರಳವನ್ನು ತನ್ನ ಅಂಕೆಯೊಳಿಗಿಟ್ಟುಕೊಂಡ.

"ತಾರಾತಂತ್ರ" ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದ ಹೆಸರು ಕರ್ನಾಟಕವೆಂದಿರುವುದು, ಅವೆರಡೂ ಮೂಲತಃ ಒಂದೇ ಆಗಿರುವುದಕ್ಕೆ ನಿದರ್ಶನ.

ಬಾಲಗಂಗಾಧರ ತಿಲಕರೂ "ಮಹಾರಾಷ್ಟ್ರ ಬೇರೆ, ಕರ್ನಾಟಕ ಬೇರೆ ಅಲ್ಲ; ಎರಡೂ ದೇಶಗಳ ಭಾಷೆಯೂ ಮುಂಚೆ ಒಂದೇ,

ಎಂದರೆ ಕನ್ನಡವಿತ್ತು. ಭಾಷೆಯ ವಿಷಯದಲ್ಲಿ ಮಹಾರಾಷ್ಟ್ರವು ತನ್ನ ಮೊದಲ ಭಾಷೆಯನ್ನು ಬಿಟ್ಟು ಮರಾಠಿಯಾಗಿದೆ" ಎಂದಿದ್ದಾರೆ.

ಕನ್ನಡದ ದೊರೆಯೇ ಆದ ದೇವಗಿರಿಯ ಯಾದವರ ಕೃಷ್ಣನು ಮೊದಲಿಗೆ ಕೆಲವು ಸಣ್ಣ ಶಾಸನಗಳನ್ನು ಕನ್ನಡದಲ್ಲಿ ಹಾಕಿಸಿದನು.

"ಜ್ಞಾನೇಶ್ವರಿ"ಯಲ್ಲಿ ಹೇರಳ ಕನ್ನಡ ಪದಗಳಿವೆ. ಸಂತಜ್ಞಾನೇಶ್ವರನು ತನ್ನ ಅಭಂಗಗಳಲ್ಲಿ "ಕಾನಡಾ ಹೋ ವಿಠ್ಠಲು ಕರ್ನಾಟಕು, ತೇನೇ ಮುಝು ಲಾವಿಲೇ ವೇಧಿ" ಎಂದು ವಿಠಲನನ್ನು ಸ್ತುತಿಸಿದ್ದಾನೆ.

ಮಹಾರಾಷ್ಟ್ರದ ನಾಸಿಕ್, ರಾಷ್ಟ್ರಕೂಟರ ಮುಖ್ಯ ಪಟ್ಟಣವಾಗಿತ್ತು. ವಿಶ್ವವಿಖ್ಯಾತ ಕಲಾ ಕೃತಿ ಎಲ್ಲೋರದ ಕೈಲಾಸ ದೇವಸ್ಥಾನ ಕಟ್ಟಿಸಿದವನು ರಾಷ್ಟ್ರಕೂಟರ ಒಂದನೆಯ ಕೃಷ್ಣ.

ಕೊಲ್ಲಾಪುರ-ಶಿರೋಳ್‌ಗಳಲ್ಲಂತೂ ಇಂದಿಗೂ ಕನ್ನಡವೇ ಪ್ರಧಾನ. ಮಹಾಲಕ್ಷ್ಮಿ ದೇವಾಲಯದ ಹತ್ತಾರು ಶಾಸನಗಳು ಕನ್ನಡದಲ್ಲೇ ಇವೆ. ಸಾಂಗಲಿ, ಕೂಪವಾಡದ ಹಿರಿಯರ ಮನೆಗಳಲ್ಲೆಲ್ಲಾ ಪ್ರಾಚೀನ ಕನ್ನಡ ಗ್ರಂಥಗಳು ದೊರೆಯುತ್ತವೆ. ಕನ್ನಡ ವಚನ ಸಾಹಿತ್ಯದ ಸುಪ್ರಸಿದ್ಧ ಕರ್ಮಯೋಗಿ ಸಿದ್ದರಾಮನ ಸೊಲ್ಲಾಪುರ ಕನ್ನಡದ್ದು.

ಮಹಾರಾಷ್ಟ್ರದ ಸುಮಾರು ಅರ್ಧದಷ್ಟು ಊರುಗಳು ಕನ್ನಡದ ಹೆಸರಿನವೆಂದು, ಪ್ರಸಿದ್ಧ ಮಹಾರಾಷ್ಟ್ರ ಇತಿಹಾಸ ಸಂಶೋಧನಕಾರರಾದ ಶ್ರೀ ರಾಜವಾಡೆಯವರೇ ಒಪ್ಪಿಕೊಂಡಿದ್ದಾರೆ. ಉದಾ: ಕಲ್ಲುಮಠ, ದೇವರಕೊಪ್ಪ, ಮೊಸಳೆ, ನೇರೂರು, ದೇವೂರು, ಗಾಣಗಾಪುರ, ಕಳಸ ಇತ್ಯಾದಿ.

ಮಹಾರಾಷ್ಟ್ರದಲ್ಲಿ "ಕನ್ನಡ" ಎಂಬ ಹೆಸರಿನ ಒಂದು ತಾಲ್ಲೂಕೇ ಇದೆ. ಇಲ್ಲಿಯೇ ಲೋಕ ಪ್ರಸಿದ್ದ ವೇರೂಳದ ಕೈಲಾಸ ದೇವಾಲಯವಿರುವುದು.

ಚಾಮರಸನ ಪ್ರಸಿದ್ಧ ಗ್ರಂಥ "ಪ್ರಭುಲಿಂಗ ಲೀಲೆ" ಬ್ರಹ್ಮರಸ ಎಂಬುವನಿಂದ ಹಿಂದೆಯೇ ಮರಾಠಿಗೆ ಅನುವಾದಿಸಲ್ಪಟ್ಟಿದೆ. ಚಂದ್ರಾತ್ಮಜ ರುದ್ರನು ಕುಮಾರವ್ಯಾಸನ "ಕರ್ನಾಟಕ ಭಾರತ ಕಥಾ ಮಂಜರಿ"ಯನ್ನು ಮರಾಠಿಗೆ ಭಾಷಾಂತರಿಸಿದ್ದಾನೆ.

ಹೊಯ್ಸಳ ಸಾಮ್ರಾಜ್ಯ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಯುಗವೊಂದನ್ನು ಸೃಷ್ಟಿಸಿದ ಕೀರ್ತಿಗೆ ಭಾಜನವಾಗಿದೆ. ಧರ್ಮ, ಶಿಲ್ಪ, ಸಂಗೀತ, ಸಾಹಿತ್ಯಗಳು ಆ ರಾಜರ ಆಶ್ರಯದಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದವು. ಈ ಕಾರ್ಯದಲ್ಲಿ ಹಲವಾರು ಸಾಮಂತ ರಾಜರು ಬೆಂಬಲಿಸಿದ್ದು, ಇವರಲ್ಲಿ ಕೊಂಕಣದವರು ಮೊದಲಿಗರು. ಇದರ ಪ್ರಥಮ ಚಾರಿತ್ರಿಕ ಪುರುಷ ಸನಪುಲ್ಲ. (ಕ್ರಿ.ಶ. ೭೮೩). ಇವರಲ್ಲಿ ಕೊನೆಯ ಅರಸನಾದ ಇರಿವಬೆಡಂಗ ಕನ್ನಡದ ಮಹಾಕವಿ ರನ್ನನಿಗೆ ಆಶ್ರಯದಾತನಾಗಿದ್ದ. ಆ ಕಾಲದಲ್ಲಿ ಇವರ ರಾಜ್ಯ ಮುಂಬಯಿಯವರೆಗೂ ಹರಡಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ಎರಡನೆ ಶತಮಾನದ ತಮಿಳು "ಶಿಲ್ಪಪ್ಪದಿಗಾರಮ್"ನ್ನಲ್ಲಿ ಚೇರ ರಾಜ ಶೆಂಗುಟ್ಟವನ್ ಎಂಬುವವನು ಕರ್ನಾಟಕ ಮತ್ತು ಕೊಂಕಣದವರ ನೃತ್ಯವನ್ನು ನೋಡಿ ಸಂತೋಷಿಸಿದ ಉಲ್ಲೇಖವೂ ಇದೆ. ಕ್ರಿ.ಶ. ೧೯೩೭ರಲ್ಲಿ ಪ್ರಕಟವಾಗುತ್ತಿದ್ದ 'ರಾಕ್ಣೋ' ಎಂಬ ಕೊಂಕಣ ಭಾಷೆಯ ಆದರೆ ಕನ್ನಡ ಲಿಪಿಯ ಪತ್ರಿಕೆ, ಕನ್ನಡ ಹಾಗೂ ಕೊಂಕಣಿಯ ಸಾಮೀಪ್ಯಕ್ಕೆ ನಿದರ್ಶನವಾಗಿದೆ. ಕೊಂಕಣಿ ಭಾಷೆಯಲ್ಲಿ ವಿಪುಲವಾಗಿ ಕನ್ನಡ ಪದಗಳು ತುಂಬಿವೆ. ವ್ಯಾಕರಣಾದಿಗಳಲ್ಲಿ ಕನ್ನಡದ ಪ್ರಭಾವವಿದೆ. ಕೊಂಕಣದವರು ಉಪಯೋಗಿಸುವ ಬಹುಪಾಲು ಗಾದೆಗಳು ಕನ್ನಡದವೇ ಆಗಿವೆ, ಕೊಂಕಣಿ ಕೋಶಕ್ಕೆ ಸೇರಿರುವ ನಿತ್ಯೋಪಯೋಗಿ ಶಬ್ದಗಳು ಕನ್ನಡದವೇ ಆಗಿವೆ. ಮುಖ್ಯವಾಗಿ ಕೊಂಕಣ ಭಾಷೆಯ ಮೂಲ ಕನ್ನಡವೇ ಆಗಿದೆ ಎಂದು ಹೇಳವಲಾಗಿದೆ. ಶಬ್ದಗಳನ್ನು ಸ್ವರಾಂತಗಳನ್ನಾಗಿ ಬರೆಯುವಲ್ಲಿ ಕೊಂಕಣದವರು ಮರಾಠಿಯ ಬದಲಾಗಿ ಕನ್ನಡದ ಎ, ಒ, ಸ್ವರಗಳನ್ನು ಉಪಯೋಗಿಸುತ್ತಾರೆ. ಹೀಗೆ ಐತಿಹಾಸಿಕವಾಗಿ ಅತಿ ಪ್ರಾಚೀನಕಾಲದಿಂದಲೂ ಕೊಂಕಣದ ಮೇಲಿನ

ಕನ್ನಡದ ಪ್ರಭಾವವನ್ನು ಗುರುತಿಸಬಹುದಾಗಿದೆ.

ಸುಮಾರು ಐದು ಶತಮಾನಗಳಿಗೂ ಮೇಲ್ಪಟ್ಟ ದೀರ್ಘಕಾಲಮಾನ ಗುಜರಾತ್ ನಾಡು ಕರ್ನಾಟಕದ ಧೀರೋದಾತ್ತ ರಾಜಮಗಳ ಆಳ್ವಿಕೆಯಲ್ಲಿತ್ತೆಂಬುದನ್ನು ಗಮನಿಸಿದಾಗ ಇಂದಿನ ಕರ್ನಾಟಕದ ಸ್ಥಿತಿಗೆ ಕಣ್ಣು ಹನಿಗೂಡದಿರದು. ಹರಪ್ಪ, ಮೊಹೆಂಜೋದಾರೋವಂತಹ ಪರಮೋತ್ಕೃಷ್ಟ ಸಂಸ್ಕೃತಿಯಲ್ಲಿ ಕನ್ನಡಿಗರ ಕೈವಾಡವಿತ್ತೆಂಬುದೂ, ಕಮಾರಿಲಭಟ್ಟನು ಮರಾಠಿ ಮತ್ತು ಗುಜರಾತಿಯ ಜತೆ ಕನ್ನಡವನ್ನೂ ಸೇರಿಸಿ ಪಂಚದ್ರಾವಿಡ ಭಾಷೆಯೆಂದು ಕರೆದಿರುವುದೂ ಈ ವಿಷಯದಲ್ಲಿ ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ. ಕರ್ನಾಟಕದ ರಾಜರ ಮಹಾ ಸಾಮಂತರಲ್ಲೊಬ್ಬನಾದ ಗೋವೆಯ ಕದಂಬರ ಒಂದನೆಯ ಜಯಕೇಶಿ ತನ್ನ ಮಗಳಾದ ಮಯಾಣಲ್ಲ ದೇವಿಯನ್ನು ಗುಜರಾತಿನ ದೊರೆ ಒಂದನೆಯ ಕರ್ಣನಿಗೆ ಮದುವೆ ಮಾಡಿಕೊಟ್ಟಿದ್ದ. ಕರ್ನಾಟಕದ ಇತಿಹಾಸದಲ್ಲಿ ಅದ್ವಿತೀಯ ಕೀರ್ತಿ ಸಂಪಾದಿಸಿದ ಎರಡನೇ ಪುಲಿಕೇಶಿ (೬೧೦-೬೪೯) ಉತ್ತರಾಪಥದ ಮಹಾಚಕ್ರವರ್ತಿ ಹರ್ಷನನ್ನು ಸೋಲಿಸಿ ಧವಳಧೀರನೆನಿಸಿ ನಂತರ ರಾಷ್ಟ್ರಕೂಟರ ಮೂರನೆಯ ಕೃಷ್ಣನ ಒಂದು ಕನ್ನಡ ಶಾಸನವು ಉತ್ತರದ 'ಜೂರಾ' ಎಂಬಲ್ಲಿ ದೊರೆತಿದೆ. ಬರೋಡ ಮತ್ತು ನವಸಾರಿಗಳಲ್ಲಿ ದೊರೆತಿರುವ ತಾಮ್ರಪಟಗಳಲ್ಲಿ ಕರ್ನಾಟಕ ರಾಜರ ಸಹಿ ಇದೆ. ಎನೇ ಧ್ರುವರಾಜನ ಬರೋಡದ ಶಾಸನಗಳಲ್ಲಿ 'ಪೂಸಿಲಾವಳ್ಳಿ' ಮತ್ತು 'ಪಿನಘುಚವಳ್ಳಿ' ಎಂಬ ಕನ್ನಡದ ಹೆಸರುಗಳಿವೆ. ಹೀಗೆಯೇ ಗುಜರಾತಿನ ಪ್ರಸಿದ್ಧ ರಾಜ ಜಯಸಿಂಹನ ಮಗನೊಬ್ಬನ ಹೆಸರು 'ಮಂಗಲರಸ' ಎಂದಿದೆ. ಪ್ರಾಚೀನ ಗುಜರಾತಿನ ಕೆಲವು ಬ್ರಾಹ್ಮಣರ ಹೆಸರು ಶುದ್ಧ ಕನ್ನಡದವಾಗಿರುವುದೂ ಗಮನಾರ್ಹ. (ಉದಾ: ರಾಶಾಪಭಟ್ಟ, ಸಿದ್ಧಪಭಟ್ಟ, ನಾಗಮಾರ್ಯ...) ಡಾ|| ಸಾಲತೊರೆಯವರು ಎರಡನೇ ಪುಲಿಕೇಶಿ ಹರ್ಷನನ್ನು ಸೋಲಿಸುವ ಮುನ್ನ ಆಳುತ್ತಿದ್ದ ರಾಜರು ಕನ್ನಡಿಗರೆಂದೂ, ಆಗಿನ "ಬೋರಿವ್ಲಿ", "ಕಂಡಿವ್ಲಿ", "ಲೋಣವಳಾ" ಇತ್ಯಾದಿ ಊರುಗಳು "ಬೋರಪಳ್ಳಿ", "ಕಂಡ-ಪಳ್ಳಿ" ಮತ್ತು "ಲೋಣಪಳ್ಳಿ"ಗಳಾಗಿದ್ದವೆಂದೂ ಅಭಿಪ್ರಾಯ

ಪಟ್ಟಿದ್ದಾರೆ. ಇಷ್ಟು ಮಾತ್ರವೇ ಅಲ್ಲದೆ ಸುಮಾರು ೨೪೦ ವರ್ಷಗಳವರೆಗ ಈ ಪ್ರಾಂತ ರಾಷ್ಟ್ರಕೂಟ ರಾಜರುಗಳ ಆಳ್ವಿಕೆಯಲ್ಲಿತ್ತೆಂದೂ ಹೇಳಲಾಗಿದೆ.

ಧಾರ್ಮಿಕ ರಂಗದಲ್ಲಿ ನೋಡಿದಾಗ ಜೈನ ಧರ್ಮ ಇಂದಿಗೂ ಉಚ್ಛ್ರಾಯ ಸ್ಥಿತಿಯಲ್ಲಿರುವುದು ಕರ್ನಾಟಕ ಮತ್ತು ಗುಜರಾತ್‌ಗಳಲ್ಲಿಯೆ ಎಂಬುದನ್ನು ಗಮನಿಸಬಹುದು. ಇಂದಿನ ಕರ್ನಾಟಕದ 'ಜಟ್ಟಿ' ಮನೆತನದವರು ಗುಜರಾತಿನಿಂದ ಬಂದವರೆಂದು ಹೇಳುತ್ತಾರೆ.

ಗುಜರಾತಿನ ಜಾನಪದ ಗೀತೆಗಳಲ್ಲಿ 'ಯಶಮಾ ಒಡ್ಡಣಾತಿ' (ಜಸಮಾ-ಓಡಣ) ಎಂಬುವಳನ್ನು ಚಾಲುಕ್ಯರ ಸಿದ್ಧರಾಜಜಯಸಿಂಹನು (ಸಧ ರಾಜೇಸಂಗ) ಪ್ರೇಮಿಸಿದ ಕಥೆ ಬರುತ್ತದೆ. ಇವೆರಡೂ ಹೆಸರು ಕನ್ನಡದವೇ ಆಗಿವೆ.

ಸಂಸ್ಕೃತದ 'ಲ'ಕಾರ ಕನ್ನಡದಲ್ಲಿ 'ಳ'ಕಾರವಾಗುವುದು ಸಾಧಾರಣ. ಇದು ಸಂಸ್ಕೃತ ಜನ್ಯವಾದ ಬೇರಾವ ಭಾಷೆಯಲ್ಲೂ (ಮರಾಠಿ ಬಿಟ್ಟು) ಕಾಣಬರದು. ಆದರೆ ಗುಜರಾತಿಯಲ್ಲಿ ಸಹ ಈ ಬದಲಾವಣೆಯನ್ನು ಗುರುತಿಸಬಹುದು. ಇದರಿಂದ ಕನ್ನಡದ ಪ್ರಭಾವವನ್ನು ಗುರುತಿಸಬಹುದು.

ಇಂದು ತನ್ನ ಸಾಹಿತ್ಯ ಮತ್ತು ಕಲೆಗಳ ಮುಖಾಂತರ ವಿಶ್ವವಿಖ್ಯಾತವಾಗಿರುವ ಬಂಗಾಳಕ್ಕೂ ಕನ್ನಡಕ್ಕೂ ಒಂದು ಸಹಸ್ರ ವರ್ಷಗಳ ಹಿಂದಿನಿಂದಲೂ ವ್ಯವಹಾರ ಮಾತ್ರವಲ್ಲದೆ. ಸಾಂಸ್ಕೃತಿಕ ಸಂಬಂಧವೂ ಇದೆ.

ಕ್ರಿ.ಶ. ೮ನೆಯ ಶತಮಾನದ ಕರ್ನಾಟಕ, ಇತಿಹಾಸವು ರೋಮಾಂಚಕಾರಕ ಮಹೋನ್ನತಿಯ ಕಾಲ. ತನ್ನದೇ ಆದ ಸಂಸ್ಕೃತಿಯ, ಭಾಷೆಯ ಸುಗ್ಗಿಯ ಪರ್ವಕಾಲ. ಸಾಹಿತ್ಯ, ಶಿಲ್ಪಕಲಾ, ಪೋಷಕರಾಗಿ ಸ್ವತಃ ಕವಿಗಳಾಗಿ, ಧರ್ಮಾನುರಾಗಿಗಳಾಗಿ, ಪ್ರಜಾರಂಜಕರಾಗಿ ರಾಷ್ಟ್ರಕೂಟರು ಬಾಳುತ್ತಿದ್ದ ಭವ್ಯ ಯುಗವದು. ಆ ಕಾಲದಲ್ಲಿಯೇ ಕನ್ನಡದ ಸೇನ ಮನೆತನದವರು ವಂಗದೇಶದಲ್ಲಿ ನೆಲೆಸಿ ರಾಜ್ಯವಾಳಿದರು.

ತಾವು ಕರ್ನಾಟಕ ಕ್ಷತ್ರಿಯರೆಂದು ಈಗಲೂ ಅವರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ತಮ್ಮ ಮೂಲ ಪುರುಷ ಬ್ರಹ್ಮ ಕ್ಷತ್ರಿಯ ವಂಶಕ್ಕೆ ಸೇರಿದ ವೀರಸೇನನ ವಂಶಸ್ಥನಾದ ಸಾಮಂತಸೇನನೆಂದೂ ಅವರು ಹೇಳುತ್ತಾರೆ. ರಾಷ್ಟ್ರಕೂಟರ ಎರಡನೆ ಕೃಷ್ಣನ ಮುಳಗುಂದ (ಕ್ರಿ.ಶ. ೬೦೨-೩) ಶಾಸನದಲ್ಲಿ ಈ ಸೇನರ ಪ್ರಸ್ತಾಪ ಬರುತ್ತದೆ.

ಕರ್ನಾಟಕ "ಕ್ಷತ್ರಿಯಾನಾಮ್ ಅಜನಿಕುಲ ಶಿರೋರಾದಮಃ ಸಾಮಂತಸೇನಃ" - ಎಂಬ ಸ್ಪಷ್ಟವಾದ ಉಲ್ಲೇಖವನ್ನು ಲಕ್ಷ್ಮಣಸೇನನ ಮಧ್ವನಗರ ಶಾಸನದಲ್ಲಿ ಕಾಣಬಹುದು. ಪೂರ್ವಬಂಗಾಳದ ಬಾರ್ ಭೂಹಜ್ಯ ರಾಜರೂ ಸಹ ಕರ್ನಾಟಕದವರೇ ಆಗಿರುತ್ತಾರೆ. ನೇಪಾಳದ ರಾಜ ಕುಟುಂಬದ ನಾನ್ಯದೇವನು ಕರ್ನಾಟಕ ಮೂಲದವನು ಎಂದರೆ ಕರ್ನಾಟಕದ ಪ್ರಭಾವವನ್ನು ಊಹಿಸಬಹುದು. ರಾಷ್ಟ್ರಕೂಟ ಅರಸು ಮೂರನೇ ಗೋವಿಂದನ ಸಂಬಂಧಿಯಾಗಿದ್ದ ರನ್ನಾದೇವಿಯನ್ನು ಬಂಗಾಲದ ಧರ್ಮಪಾಲ ಮದುವೆಯಾಗಿದ್ದ. ಹೀಗೆ ರಾಜಕೀಯ ಪ್ರಭಾವ ಮಾತ್ರವಲ್ಲದೆ ಧಾರ್ಮಿಕವಾಗಿಯೂ ಬಂಗಾಲದವರು ಕನ್ನಡಿಗರಿಂದ ಉಪಕೃತರಾಗಿದ್ದಾರೆ. ಜೈನ, ವೈಷ್ಣವ, ಬೌದ್ಧ, ವೀರಶೈವ ಮತಗಳು ಏಳಿಗೆ ಪಡೆದದ್ದು ಇಲ್ಲಿಯೇ. ಭಕ್ತಿಮೇರು ಶ್ರೀ ಮಧ್ವಾಚಾರ್ಯರ ಭಕ್ತಿ ಮಾರ್ಗ ಬಂಗಾಲದ ಚೈತನ್ಯ ಪಂಥಕ್ಕೆ ಸ್ಫೂರ್ತಿಯಾಯಿತು. ಮಧ್ವಾಚಾರ್ಯರೇ ಧರ್ಮ ಪ್ರಚಾರಕ್ಕಾಗಿ ಬಂಗಾಲಕ್ಕೆ ಹೋದಾಗ ಇವರ ತೇಜೋಪ್ರಭಾವದಿಂದ ಕರ್ನಾಟಕ-ಬಂಗಾಲಗಳ ನಡುವೆ ಭಕ್ತಿಯ ಸೇತುವೆಯೊಂದು ನಿರ್ಮಿತವಾಗಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಭಕ್ತ ಶಿರೋಮಣಿಗಳ ಸಂಚಾರವಾಗಿ ದೈವಭಕ್ತಿಯ ಪ್ರಚಂಡ ಪ್ರವಾಹವೇ ಹರಿಯಿತು. ಬಂಗಾಲದ ಸಂತಶ್ರೇಷ್ಠ ಚೈತನ್ಯ ದೇವರೂ, ನಿತ್ಯಾನಂದರೂ ವಿಜಯನಗರವನ್ನು ಸಂದರ್ಶಿಸಿದರು. ನಮ್ಮಲ್ಲಿ ಮದುವೆಯಾದ ಹೊಸದಂಪತಿಗಳು ಮನೆಗೆ ಬಂದಾಗ ವರನ ಚಿಕ್ಕ ತಮ್ಮ ಅಥವಾ ತಂಗಿ ಬಾಗಿಲು ತಡೆಯುವ ಪದ್ಧತಿ ಉತ್ತರ ಭಾರತದಲ್ಲಿ ಬಂಗಾಳ ಬಿಟ್ಟರೆ ಬೇರೆಲ್ಲೂ ಕಾಣಬರದು. ಬಂಗಾಲಿ ಶಬ್ದಕೋಶಗಳಲ್ಲಿ ನೀರ್- ನಾರಿಕೇಳ, ತೋಯ, ಮಾಲೆ,

ಮತ್ತೈ, ಮೀನ, ಉಡುತ್ತು (ಉಡುಪು) ಇತ್ಯಾದಿ ಕನ್ನಡ ಪದಗಳನ್ನು ಕಾಣಬಹುದು

ಕರ್ನಾಟಕ ಮತ್ತು ತಮಿಳು ನಾಡುಗಳೆರಡೂ ಒಂದೇ (ದ್ರಾವಿಡ) ಸಂಗಡಕ್ಕೆ ಸೇರಿದ ಪ್ರದೇಶಗಳಾಗಿದ್ದು ಭಾಷೆ ಹಾಗೂ ಸಂಸ್ಕೃತಿಗಳಲ್ಲಿ ಅತ್ಯಂತ ನಿಕಟ ಸಂಪರ್ಕವಿದೆ. ಕರ್ನಾಟಕದ ಉಲ್ಲೇಖ ತಮಿಳಿನ ಅತ್ಯಂತ ಪ್ರಾಚೀನ ಸಾಹಿತ್ಯದಲ್ಲೆಲ್ಲಾ ದೊರೆಯುತ್ತದೆ. 'ಶಿಲಪ್ಪದಿಗಾರಮ್'ನಲ್ಲಿ ಚೇರರಾಜನು ಕರ್ನಾಟಕದ ನೃತ್ಯ ನೋಡಿದ ಸಂಗತಿ ಬರುತ್ತದೆ. ಹೀಗೆಯೇ 'ಅಹನಾನೂರು' ಕೃತಿಯಲ್ಲೂ ಸಹ ಎರುಮೈ ನಾಡಿನ ಉಲ್ಲೇಖವಿದೆ. ಕ್ರಿ.ಶ. ೯ನೇ ಶತಮಾನದ ತಮಿಳ ಸಂಘದ ಜೈನಕವಿ ತಿರುತಕ್ಕದೇವನು ರಚಿಸಿದ ಜೀವಕ ಚಿಂತಾಮಣಿಯಲ್ಲಿ ಕನ್ನಡ ಪದಗಳಿವೆ. ೧೫ನೇ ಶತಮಾನದ ಚಾಮರಸನು ಬರೆದ ಪ್ರಭುಲಿಂಗಲೀಲೆಯನ್ನು ತಿರುವಣ್ಣಾ ಮಲೆಯ ಶಿವಪ್ರಕಾಶ ಸ್ವಾಮಿಗಳು ತಮಿಳಿಗೆ ಭಾಷಾಂತರಿಸಿದ್ದಾರೆ. ಕರ್ನಾಟಕ ಸಂಗೀತದ ಆಚಾರ್ಯಪುರುಷರಾದ ಪುರಂದರದಾಸರಿಂದ ತ್ಯಾಗರಾಜರು ಪ್ರಭಾವಿತರಾದುದು ಸರ್ವವಿದಿತ. ಚೂಡಾಮಣಿ ಮತ್ತು ಚಿಂತಾಮಣಿ ಎಂಬ ತಮಿಳು ಗ್ರಂಥಗಳು ಅದೇ ಹೆಸರಿನ ಕನ್ನಡ ಕೃತಿಗಳ ಪ್ರತಿಬಿಂಬವಾಗಿ ಕಾಣುತ್ತವೆ. ಹೀಗೆ ಕನ್ನಡದ ಛಂದೋಗ್ರಂಥ 'ಗುಣಗಾಂಕಿಯಂ' ಅನೇಕ ತಮಿಳು ಲಾಕ್ಷಣಿಕರ ಆಧಾರ ಗ್ರಂಥವಾಯಿತು.

ಸಾಹಿತ್ಯಕವಾಗಿ ಹಾಗೂ ರಾಜಕೀಯವಾಗಿ ಕರ್ನಾಟಕ ತೆಲುಗಿನ ಮೇಲೆ ಅಪಾರ ವರ್ಚಸ್ಸನ್ನು ಬೀರಿದೆ. ತೆಲುಗಿನ ಆದಿಕವಿ ನನ್ನಯ ಭಟ್ಟ (ಕಿ. ಶ. ೧೦೮೦)ನ ಬಗ್ಗೆ ಶ್ರೀ ಸಿ.ಆರ್. ರೆಡ್ಡಿಯವರು ಬರೆಯುತ್ತಾ "ತೆಲುಗು ನಾಡಿನ ಜನದ ಮೇಲೆ ಕನ್ನಡದ ಜೈನ ಭಾರತಗಳನ್ನು ಓದಿ ಆದ ಪರಿಣಾಮಗಳನ್ನು ನಿರ್ನಾಮ ಮಾಡುವ ಸಲುವಾಗಿ ನನ್ನಯಭಟ್ಟನು ಆಂಧ್ರಭಾಷೆಯಲ್ಲಿ ವೈದಿಕ ಮಾರ್ಗಾನುವರ್ತಿಯಾದ ಭಾರತ ಬರೆದ" ಎಂದಿದ್ದಾರೆ. ಅಂದರೆ ಇವನ ಭಾರತಕ್ಕೆ ಕನ್ನಡದ ಕವಿಕುಲತಿಲಕ ಪಂಪನ ಭಾರತವೇ ಸ್ಫೂರ್ತಿಯಾಗಿದೆ ಎಂದು ವಿದಿತವಾಗುತ್ತದೆ.

ಹಳೆಯ ತೆಲಗು ಶಾಸನಗಳಲ್ಲಿ ತೆಲುಗು ರಾಜರಿಗೂ, ಕನ್ನಡದ ಬಿರುದುಗಳಿದ್ದುದು ಗೋಚರಿಸುತ್ತದೆ. ೯ನೇ ಶತಮಾನದ ಶಾಸನದಲ್ಲಿ ಸೇನಾಪತಿ ಯೊಬ್ಬನಿಗೆ 'ಮನುಜರ ದೇವ', 'ಜಗದೇವ ಗಂಡ' ಬಿರುದು ಕೊಟ್ಟ ಉಲ್ಲೇಖವಿದೆ. ಹಲವಾರು ಧೀಮಂತ ಕವಿಗಳು ಕರ್ನಾಟಕಕ್ಕೆ ಬಂದುನಲೆಸಿ ಕನ್ನಡ ಕೃತಿ ರಚನೆ ಮಾಡಿದ್ದರು. ನನ್ನಯ ಭಟ್ಟನಿಗೆ ಬರೆಯಲು ಪ್ರೋತ್ಸಾಹಿಸಿದವನೂ, ಅವನು ಬರೆದುದನ್ನು ತಿದ್ದಿದವನೂ ಕನ್ನಡದ ಪಂಡಿತ ನಾರಾಯಣ ಭಟ್ಟ. ೧೨ನೇ ಶತಮಾನದ ಪಾಲ್ಕುರಿಕೆ ಸೋಮನಾಥನು ತೆಲುಗು ಬಸವ ಪುರಾಣವನ್ನು ಬರೆದನು. ಕನ್ನಡದ ಪ್ರಭು ಲಿಂಗಲೀಲೆಯನ್ನು ಪಿಡುಪರ್ತಿ ಸೋಮನಾಥ, ಪಿಡುಪರ್ತಿ ಬಸವಕವಿ ಎಂಬುವರು ಬೇರೆ ಬೇರೆಯಾಗಿ ತೆಲುಗಿಗೆ ಅನುವಾದಿಸಿದ್ದಾರೆ. ನೃಪತುಂಗನ 'ಕವಿರಾಜ ಮಾರ್ಗ' ಭೀಮಕವಿಯ 'ಕವಿಜನಾಶ್ರಯಮು', ತೆಲುಗು ಗ್ರಂಥಕ್ಕೆ ಪ್ರಚೋದನೆ ನೀಡಿತು. ನನ್ನಿ ಚೋಡನ 'ಕುಮಾರ ಸಂಭವ' ಹಾಗೂ ಪೆದ್ದಣದ 'ನೀತಿಸಾರ ಸಮತಿ ಶತಕ'ಗಳು ಕನ್ನಡ ಕಂದವನ್ನು ಹೋಲುತ್ತವೆ.

ನಂತರ ವಿಜಯನಗರ ಕಾಲದಲ್ಲಿ ತೆಲುಗಿಗೆ ಅಪಾರ ಪ್ರೋತ್ಸಾಹ ದೊರೆಯಿತು. ಖ್ಯಾತ ತೆಲಗು ಕವಿ ನಾಚನ ಸೋಮನಾಥನಿಗೆ ಬುಕ್ಕರಾಯ 'ಅಷ್ಟಭಾಷಾ ಕವಿ' ಎಂಬ ಬಿರುದನ್ನು ದಯಪಾಲಿಸಿದ್ದ.

ವಿಶ್ವವಿಖ್ಯಾತಿ ಪಡೆದ ಕನ್ನಡರಾಜ್ಯರಮಾರಮಣನಾದ ಕೃಷ್ಣದೇವರಾಯನ ಕೊಡುಗೆಯಂತೂ ತೆಲುಗಿಗೆ ಅಪಾರ.

ವಿಜಯನಗರದ ನಂತರ ೧೭, ೧೮ನೇ ಶತಮಾನಗಳಲ್ಲಿ ಮೈಸೂರು ಅರಸರ ಆಸ್ಥಾನದಲ್ಲಿ ತೆಲುಗು ಸಾಹಿತ್ಯಕ್ಕೆ ಪ್ರೋತ್ಸಾಹ ದೊರೆಯಿತು.

ಹೀಗೆ ತೆಲುಗಿನ ಸರ್ವಾಂಗೀಣ ಪ್ರಗತಿಗೆ ಕನ್ನಡ ರಾಜರು ಪ್ರೇರಣೆ ಪ್ರೋತ್ಸಾಹಗಳನ್ನು ನೀಡಿದ್ದಾರೆ.

ಸಂಸ್ಕೃತ ಸಾಹಿತ್ಯ ಭರತಖಂಡದ ಅತಿ ಪ್ರಾಚೀನ ಸಾಹಿತ್ಯ. ವಿಶ್ವವಿಖ್ಯಾತ ಕವಿಗಳಿಂದ ಸರ್ವಾಂಗ ಸಮೃದ್ಧಿಯಾಗಿ ಬೆಳೆದು ಬಂದಿರುವ ಸಾಹಿತ್ಯ. ಎರಡು ಸಹಸ್ರ ವರ್ಷಗಳಿಂದಲೂ ಕನ್ನಡ ನಾಡಿನಲ್ಲಿ ಸಂಸ್ಕೃತ ಗ್ರಂಥ ವ್ಯವಸಾಯ ಸಾಗಿ ಬಂದಿದೆ. ಕರ್ನಾಟಕದಲ್ಲಿ ಆಳಿದ ಎಲ್ಲ ರಾಜರೂ ಸಹ ಸುದೈವವಶಾತ್ ಗೀರ್ವಾಣ ಭಾಷಾಭಿಮಾನಿಗಳೇ ಆಗಿದ್ದರು. ಸಂಸ್ಕೃತ ನಾಟಕ ಜಗತ್ತಿನ ಅಸಮಾನ ಕ್ರಾಂತಿಕಾರಿ ಕವಿ ಭಾಸ ಕರ್ನಾಟಕದವನೇ ಆಗಿರಬೇಕೆಂದು ಪ್ರೊ॥ ಯು. ವೆಂಕಟಕೃಷ್ಣರಾಯರು ಊಹಿಸುತ್ತಾರೆ. ಅವನ ನಾಟಕದ ಪ್ರಾರ್ಥನಾ ಪದ್ಯಗಳಲ್ಲಿ ಬರುವ ದ್ವಿತೀಯಾಕ್ಷರ ಪ್ರಾಸ ಮತ್ತು ನಾಟಕದ ಸಂಭಾಷಣೆಗಳಲ್ಲಿ ಬರುವ ಕೆಲವು ಕನ್ನಡದ ವಿಶಿಷ್ಟ ಪ್ರಯೋಗಗಳನ್ನು ಅವರು ಆಧಾರವಾಗಿ ಹೇಳುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಚಿರಸ್ಮರಣೆಗೆ ಪಾತ್ರವಾಗಿರುವ ರಾಷ್ಟ್ರಕೂಟರ ನೃಪತುಂಗ ಪ್ರಶ್ನೋತ್ತರಮಾಲಾ ಎಂಬ ಗ್ರಂಥ ರಚನೆ ಮಾಡಿದ. ಕಲ್ಯಾಣ ಚಾಲುಕ್ಯರ ರಾಜ ಭೂಲೋಕ ಮಲ್ಲನು ಮಾನಸೋಲ್ಲಾಸ - ಎಂಬ ರಾಜನೀತಿ ಗ್ರಂಥದ ಸೃಷ್ಟಿಕರ್ತನಾದನು. ಮೈಸೂರಿನ ಅರಸರಾದ ಚಿಕದೇವರಾಜರು, ಮುಮ್ಮಡಿ ಕೃಷ್ಣರಾಜರೂ ಸಹ ಹಲವಾರು ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದಾರೆ.

ರಾಮಾನುಜಾಚಾರ್ಯರಾದಿಯಾಗಿ ಅನೇಕ ಸಂತರೂ ವೇದಾಂತ ಗ್ರಂಥಗಳನ್ನು ಬರೆದರು. ವ್ಯಾಸರಾಜರೂ, ವಾದಿರಾಜರೂ ನೂರಾರು ಕೃತಿ ರಚನೆ ಮಾಡಿದ್ದಾರೆ.

ಬುಕ್ಕರಾಯನ ಸೊಸೆಯಾದಿಯಾಗಿ ಅನೇಕ ಮಹಿಳೆಯರೂ ಸಂಸ್ಕೃತದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಆದುದರಿಂದ ಕರ್ನಾಟಕವು ಪ್ರಭಾವಿ ರಾಜ್ಯವೆನಿಸಿ ಕೊಂಡಿದೆ.



# ಭಾಸ್ಕರ ವಿಲಾಸ

೧೯೩೪ರ ಜೂನ್ ಹದಿನೈದರಂದು ಮದ್ರಾಸಿನಲ್ಲಿರುವ ಅಡಿಯಾರ್ ಗ್ರಂಥಾಲಯದಿಂದ "ವರಿವಸ್ಯಾ ರಹಸ್ಯ" ಎಂಬ ಗ್ರಂಥ ಪ್ರಕಾಶಿತವಾಯಿತು. ಈ ಗ್ರಂಥಕ್ಕೆ ದಕ್ಷಿಣದ ಖ್ಯಾತ ಸಂಸ್ಕೃತ ವಿದ್ವಾಂಸರೆನಿಸಿದ ಕೃಷ್ಣಸ್ವಾಮಿಗಳು ದೀರ್ಘವಾದ ಮುನ್ನುಡಿಯನ್ನು ಬರೆದಿದ್ದಾರೆ.

ಈ ಗ್ರಂಥವನ್ನು ರಚಿಸಿದವನ ಹೆಸರು ಭಾಸ್ಕರರಾಯ ಅಥವಾ ಭೂಸುರಾನಂದ. ಇದು ಶಾಕ್ತ ಸಂಪ್ರದಾಯದ ವಿಚಾರದಲ್ಲಿ ಹೆಚ್ಚಿನಮಾಹಿತಿಯ ನ್ನೊದಗಿಸಿದ ಗ್ರಂಥವೆನಿಸಿಕೊಂಡಿದೆ. ಶಾಕ್ತ ಆಗಮದಲ್ಲಿರುವ ಪೂಜಾ ವಿಧಾನವನ್ನು ವಿವರಿಸಿ ಹೇಳುವುದೇ "ವರಿವಸ್ಯಾ ರಹಸ್ಯ" ಗ್ರಂಥದ ಮೂಲ ಉದ್ದೇಶ. ಭಾಸ್ಕರರಾಯನಿಂದ "ಸೇತು ಬಂಧ" ಹಾಗೂ "ಲಲಿತಾ ಸಹಸ್ರನಾಮ ಟೀಕೆ" ಎಂಬ ಬೇರೆ ಎರಡೂ ಗ್ರಂಥಗಳಲ್ಲಿಯೂ ಮೂಲ ಲೇಖಕನು ಈ ವರಿವಸ್ಯಾ ರಹಸ್ಯದ ಅನೇಕ ಭಾಗಗಳನ್ನು ಸಂದರ್ಭಾನುಸಾರವಾಗಿ ಟಿಪ್ಪಣಿಯ ರೂಪದಲ್ಲಿ ಬಳಸಿಕೊಂಡಿದ್ದಾನೆ.

ಕೃಷ್ಣಸ್ವಾಮಿಗಳು ಭಾಸ್ಕರರಾಯನ ಕಾಲ ನಿರ್ಣಯವನ್ನು ಕುರಿತು ಸಾಕಷ್ಟು ಚಿಂತನೆಯನ್ನು ಮಾಡಿದ್ದಾರೆ. ಕ್ರಿ.ಶ. ೧೬೭೫ರಿಂದ ೧೭೫೦ ಈತನ ಕಾಲವಾಗಿರಬಹುದು ಎಂದು ಅವರ ತರ್ಕ.

ಏಕೆಂದರೆ ಭಾಸ್ಕರರಾಯನು ಯಾವುದೇ ಗ್ರಂಥವನ್ನು ಬರೆದು ಮುಗಿಸುವಾಗ ಅದನ್ನು ಯಾವ ಕಾಲದಲ್ಲಿ ಮುಗಿಸಿದೆ ಎಂಬುದನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಲಲಿತಾ ಸಹಸ್ರನಾಮದ ಮೇಲೆ ಭಾಷ್ಯ ರಚಿಸಿದಾಗ ಕಾಲ ಯುಕ್ತನಾಮ ಸಂವತ್ಸರ ಅಶ್ವಿನ ಶುದ್ಧ ನವಮಿ. ಇದು ವಿಕ್ರಮ ಸಂವತ್ಸರ ೧೭೮೫ ಎಂದಾಗುವದಾಗಿಯೂ ನಮೂದಿಸಿದ್ದಾನೆ. ಅಂದರೆ ಕ್ರಿ.ಶ. ೧೭೨೮ ಎಂದು ನಾವು ಗ್ರಹಿಸಬಹುದಾಗಿದೆ. ಇನ್ನು 'ಸೇತುಬಂಧನ' ಎಂಬ ಗ್ರಂಥವನ್ನು ರಚಿಸಿದ ದಿನ ಶಾಲಿವಾಹನ ಶಕೆ ೧೬೫೫ ಶಿವರಾತ್ರಿಯ ದಿನ, ಅಂದರೆ ಇಸ. ೧೭೩೩ ಎಂದಾಗುವದು. ಅದೇ ರೀತಿ 'ಗುಪ್ತವತಿ' ಗ್ರಂಥವನ್ನು ತಾನು ಚಿದಂಬರಂ ಎಂಬಲ್ಲಿ ಪ್ರಮೋದ ಸಂವತ್ಸರದಲ್ಲಿ ಇಸ. ೧೭೪೧ರಲ್ಲಿ ಬರೆದುದಾಗಿ ಲೇಖಕನು ಹೇಳಿಕೊಂಡಿದ್ದಾನೆ.

ಭಾಸ್ಕರರಾಯ ಚತುಃಶ್ಯಾಸ್ತ್ರಗಳಲ್ಲಿ ಪಂಡಿತನಾಗಿದ್ದು ವಿಶೇಷವಾಗಿ ಶಾಕ್ತ ಪಂಥದ ವಾಮಾಚಾರ ಸಂಪ್ರದಾಯದ ಅನುಯಾಯಿಯಾಗಿದ್ದ. ಈ ಪಂಡಿತನು ಕಾಶೀ ಕ್ಷೇತ್ರದಲ್ಲಿ ಮಹಾ ಯಾಗ ಮಾಡಿದಾಗ ಅಲ್ಲಿರುವ ಪಂಡಿತರು ಈತನನ್ನು ಕೆಣಕುವ ಸಾಹಸ ಮಾಡಿದರು. ನಾರಾಯಣಭಟ್ಟನ ಹಿರಿತನದಲ್ಲಿ ವಿರೋಧಿಗಳ ಗುಂಪು ವಾದಕ್ಕೆ ಸಿದ್ಧವಾಯಿತು. ಆಗ ಭಾಸ್ಕರರಾಯನು ತನ್ನ ಯಾಗಶಾಲೆಗೆ ಬಂದು ವಾಗ್ವಿವಾದ ಮಾಡುವಂತೆ ಎಲ್ಲ ಪಂಡಿತರನ್ನೂ ಆಹ್ವಾನಿಸಿದ. ಅದರಂತೆ ನಾರಾಯಣಭಟ್ಟನು ತನ್ನ ಸಂಗಡಿಗರೊಂದಿಗೆ ಯಾಗ ಮಂಟಪದಲ್ಲಿ ಕಾಲಿರಿಸಿದಾಗ ಅಲ್ಲಿಯ ವೈಭವವನ್ನು ಕಂಡು ತಬ್ಬಿಬ್ಬಾಗಿ ಹೋದ. ಭವ್ಯವಾದ ವೇದಿಕೆಗಳು, ಅಗ್ನಿಕುಂಡಗಳ ಮುಂದೆ ಕುಳಿತು ಮಂತ್ರೋಚ್ಚಾರ ಮಾಡುವ ಶಿಷ್ಯರನ್ನು ಕಂಡು ಗತಿಗಾಣದಂತಾದ. ಇಂಥವನೊಂದಿಗೆ ಹೇಗೆ ವಾದಕಣಕ್ಕಿಳಿಯುವದೆಂದು ಯೋಚಿಸತೊಡಗಿದ. ಆದರೂ ಧೈರ್ಯದಿಂದ ಕೆಲವು ಮಂತ್ರ ತಂತ್ರಗಳ ವಿಚಾರದಲ್ಲಿ ಪ್ರಶ್ನೆಮಾಡಿದ. ಆತನ ಪ್ರಶ್ನೆಗೆಳಿಗೆಲ್ಲಾ ಕ್ಷಣಮಾತ್ರದಲ್ಲಿ ಭಾಸ್ಕರರಾಯನು ಉತ್ತರವನ್ನಿತ್ತು, ಆಗ ಸಮೀಪದಲ್ಲಿ ಕುಳಿತ ಕುಂಕುಮಾನಂದರು, "ಈತ ಸಾಮಾನ್ಯ ಪಂಡಿತನಲ್ಲ ಶ್ರೀದೇವಿಯೇ ಈತನಿಗೆ ವರ ನೀಡಿದ್ದಾಳೆ,"

ಎಂದು ನಾರಾಯಣಭಟ್ಟನಿಗೆ ಹೇಳಿದರಂತೆ. ಇದಕ್ಕೆ ನಾರಾಯಣಭಟ್ಟನು, "ಏನಾದರೂ ಸಾಕ್ಷಿಯನ್ನು ಕೊಡುವಿರಾ?" ಎಂದು ಕೇಳಿದಾಗ ಕುಂಕುಮಾನಂದರು ಶ್ರೀದೇವಿಗೆ ಅಭಿಷೇಕ ಮಾಡಿದ ಜಲವನ್ನು ತಂದು ನಾರಾಯಣಭಟ್ಟನ ಕಣ್ಣಿಗೆ ಲೇಪಿಸಿದರಂತೆ ಆಶ್ಚರ್ಯವೆಂದರೆ ಆಗ ಸ್ವತಃ ಶ್ರೀದೇವಿಯು ಭಾಸ್ಕರರಾಯನ ಹೆಗಲ ಮೇಲೆ ಕುಳಿತುದನ್ನು ನಾರಾಯಣಭಟ್ಟ ಕಂಡನಂತೆ. ಈ ವಿಚಾರವನ್ನು ಕುರಿತು ಕೃಷ್ಣಸ್ವಾಮಿಗಳು ಶಿಷ್ಯರು ತಮ್ಮ ಗುರುಗಳ ಮಹತಿಯನ್ನು ಕುರಿತು ಹೊಗಳಲು ಮಾಡಿದ ತಂತ್ರವಿದು ಎಂದು ಹೇಳುತ್ತಾ ನಾರಾಯಣಭಟ್ಟನಿಗೂ ಭಾಸ್ಕರರಾಯನಿಗೂ ಕಾಲವೇ ಕೂಡುವುದಿಲ್ಲ ಎಂದಿದ್ದಾರೆ.

ಕಮಲಾಕರಭಟ್ಟ ಎಂಬುವವನು ತಾನು ಬರೆದ "ನಿರ್ಣಯ ಸಿಂಧು" ಎಂಬ ಗ್ರಂಥದಲ್ಲಿ (ರಚನೆ ಕ್ರಿ.ಶ. ೧೬೧೨) ತನ್ನ ತಾತನ ಹೆಸರು ನಾರಾಯಣಭಟ್ಟ ಎಂದು ಹೇಳಿ ಕೊಂಡಿದ್ದಾನೆ. ಅಂದಮೇಲೆ ತಾತನಿಗೂ ಮೊಮ್ಮಗನಿಗೂ ಕೊನೆಯ ಪಕ್ಷ ಐವತ್ತು ವರುಷದ ಅಂತರವಾದರೂ ಇರಬೇಕಲ್ಲವೆ? ಹೋಗಲಿ, ಇದಕ್ಕೆ ಬೇರೊಂದು ಉದಾಹರಣೆ ಬೇಕೆಂದರೆ ಭಾಸ್ಕರರಾಯನು ಅಪ್ಪಯ್ಯ ದೀಕ್ಷಿತರನ್ನು ಬಾಯ್ತುಂಬ ಹೊಗಳಿದ್ದಾನೆ. ಅಪ್ಪಯ್ಯ ದೀಕ್ಷಿತರ ಕಾಲವನ್ನು ಕೆಲವರು ಕ್ರಿ.ಶ. ೧೫೫೪ರಿಂದ ೧೬೨೬ ಎಂದಿದ್ದಾರೆ. ಮತ್ತೆ ಕೆಲವರು ಕ್ರಿ.ಶ. ೧೫೨೨ರಿಂದ ೧೫೯೪ ಎಂದೆನ್ನುತ್ತಾರೆ. ಇದಕ್ಕೆ ಬೇರೆ ಉದಾಹರಣೆ ಎಂದರೆ ಅಪ್ಪಯ್ಯ ದೀಕ್ಷಿತರ ಶಿಷ್ಯ ವರದರಾಜ. ಈತನು ಮಧ್ವ ಸಿದ್ಧಾಂತ ಕೌಮುದಿ ಗ್ರಂಥಕ್ಕೆ ಟೀಕೆ ಬರೆದಿದ್ದಾನೆ. ಸುಪ್ರಸಿದ್ಧ ವೈಯಾಕರಣ ನಾಗೋಜಿಭಟ್ಟನು (ಕ್ರಿ.ಶ. ೧೬೮೮-೧೭೫೦) 'ಮಂಜೂಷಾ' ಎಂಬ ಗ್ರಂಥ ರಚಿಸಿದ್ದಾನೆ. ಈ ಎರಡೂ ಗ್ರಂಥಗಳನ್ನು ಭಾಸ್ಕರರಾಯನು ತನ್ನ ಗ್ರಂಥಗಳಲ್ಲಿ ಉದ್ಧರಿಸಿದ್ದಾನೆ. ಈ ಎಲ್ಲ ವಿಷಯಗಳನ್ನು ಗಮನಿಸಿದಾಗ ನಾರಾಯಣಭಟ್ಟನೊಂದಿಗೆ ನಡೆದ ಚರ್ಚೆಗೆ ಅವಕಾಶವೇ ಇಲ್ಲ ಎಂದಾಗುತ್ತದೆ.

ಭಾಸ್ಕರರಾಯನ ಶಿಷ್ಯವರ್ಗದಲ್ಲಿ ಉಮಾನಂದ ಅಥವಾ ಜಗನ್ನಾಥ ಎಂಬ ಶಿಷ್ಯನೊಬ್ಬನಿದ್ದ. ಈತನು ಕ್ರಿ.ಶ. ೧೭೭೫ರಲ್ಲಿ

'ಸಿತ್ತೋತ್ಸವ' ಎಂಬ ಗ್ರಂಥವನ್ನು ರಚಿಸಿದ. ಭಾಸ್ಕರರಾಯನ ಇನ್ನೊಬ್ಬ ಶಿಷ್ಯನ ಹೆಸರು ಸೂರಿ.

ಭಾಸ್ಕರರಾಯನ ಸಾಹಿತ್ಯ ರಚನೆಯ ಕಾಲ ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ಕ್ರಿ.ಶ. ೧೭೬೮ರಲ್ಲಿ ಬರೆದ ಸಾಹಿತ್ಯ ಕೃತಿಗಳನ್ನು ಕುರಿತು ಉಮಾನಂದನಾಥನು "ಭಾಸ್ಕರ ವಿಲಾಸ" ಎಂಬ ಗ್ರಂಥವನ್ನು ರಚಿಸಿದ. ಅಲ್ಲದೇ 'ಕಲ್ಪಸೂತ್ರ' ಎಂಬ ಸ್ವತಂತ್ರ ಕೃತಿಯನ್ನೂ ಆತ ರಚಿಸಿದ್ದಾನೆ. ಈ 'ಕಲ್ಪಸೂತ್ರ'ದಲ್ಲಿ ತ್ರಿಪುರ ಸುಂದರಿಯ ಉಪಾಸನಾ ಕ್ರಮವನ್ನು ವಿವರಿಸಲಾಗಿದೆ.

ಗಂಭೀರರಾಯ ಎಂಬ ಗೃಹಸ್ಥನು ವಿಶ್ವಾಮಿತ್ರ ಗೋತ್ರದವನು. ಈತನ ಹೆಂಡತಿಯ ಹೆಸರು ಕೋನಾಂಬಿಕಾ. ಈತನು ವಿದ್ಯೆ ಬುದ್ಧಿಗಳಲ್ಲಿ ಖ್ಯಾತನಾದವನು. ವಿಜಾಪುರದ ಬಾದಶಹನ ಆಸ್ಥಾನದಲ್ಲಿ ಖ್ಯಾತನಾದವನು. ಬಾದಶಹನ ದರ್ಬಾರಿನಲ್ಲಿ ಹಿಂದೂ ಧರ್ಮಾಧ್ಯಕ್ಷನಾಗಿ ಸೇವೆಗೈಯುತ್ತಿದ್ದ. ಬಾದಶಹನ ಅಜ್ಞಾನುಸಾರವಾಗಿ ದರ್ಬಾರಿನಲ್ಲಿ ಮಹಾಭಾರತ ಗ್ರಂಥದ ಮೇಲೆ ಉಪನ್ಯಾಸ ಮಾಡಿದ. ಈತನಿಗೆ ದಕ್ಷಿಣದ ಉರ್ದು ಭಾಷೆಯಲ್ಲಿ ಚೆನ್ನಾಗಿ ಪ್ರಭುತ್ವವಿತ್ತು. ಬಾದಶಹನು ಈತನ ಭಾಷಾ ಪಾಂಡಿತ್ಯಕ್ಕೆ ಮುಗ್ದನಾಗಿ ವಂಶಪಾರಂಪರ್ಯವಾಗಿ 'ಭಾರತಿ' ಎಂಬ ಬಿರುದನ್ನು ಈತನಿಗೆ ದಯಪಾಲಿಸಿದ ವಿಚಾರವನ್ನು ಉಮಾನಂದನಾಥನು ಭಾಸ್ಕರ ಚರಿತೆಯಲ್ಲಿ ಹೇಳಿದ್ದಾನೆ. ಅಲ್ಲಿಯ ಶ್ಲೋಕವು ಕೆಳಗಿನಂತಿದೆ:

ಗಂಭೀರ ಸತ್ವಃ ಕುಶಿಕಾನ್ವ ವಾಯೆ
ಗಂಭೀರ ರಾಯೋ ಜನಿಗೇಯ ಕೀರ್ತಿಃ
ವಿಜಯಪುರ ಸಾರ್ವಭೌಮೋ
ವಿವೃತ ಮಹಾಭಾರತಸ್ತುದುತ್ತಯಾಯಃ
ವಿದ್ವಾಸು ಭಾರತೀ ಸನ್ನುಪನಾಮ್ನಾ
ಪ್ರತ್ಯ ಭಾರತೀ ವವೃತೆ!

ಈ ಶ್ಲೋಕದಿಂದ ಭಾಸ್ಕರರಾಯನ ತಂದೆಯಾದ ಗಂಭೀರರಾಯನು

ವಿದ್ಯಾವಂತ, ಸುಶೀಲ, ಧನವಂತ, ವಿನೀತ ಸ್ವಭಾವದವ, ಬಾದಶಹನಿಂದ ಬಿರುದನ್ನು ಸಂಪಾದಿಸಿದವನು ಎಂದು ತಿಳಿದು ಬರುವದು.

'ಗುರುಪರಂಪರೆ' ಎಂಬ ಬೇರೊಂದು ಗ್ರಂಥವೂ ಇದೆ. ಅದರ ವಿಚಾರದಲ್ಲಿ ಕೃಷ್ಣ ಸೋಮಯಾಜಿಗಳು ಗಂಭೀರರಾಯನಿಗೆ ಯವನೀ ಭಾಷೆ ಚೆನ್ನಾಗಿ ಕರತಲಾಮಲಕವಾಗಿತ್ತು; ಮಹಾಭಾರತವನ್ನು ಅನುವಾದ ಮಾಡಿದ್ದರಿಂದ ಆತನು ಬ್ರಾಹ್ಮಣರ ಅವಕೃಪೆಗೆ ಗುರಿಯಾದ ಎಂದು ಹೇಳಿದ್ದಾರೆ. ಆದರೆ ಮೇಲಿನ ಶ್ಲೋಕವನ್ನೋದಿದಾಗ ಅವನು ಗ್ರಂಥ ರಚನೆ ಮಾಡಿದನೇ ಅಥವಾ ಉಪನ್ಯಾಸ ರೂಪದಲ್ಲಿ ಅನುವಾದ ಮಾಡಿದನೇ ಎಂಬುದು ತಿಳಿಯದಂತಾಗುತ್ತದೆ. ಇನ್ನು, ವಿಜಾಪುರದ ಬಾದಶಹನು ಯಾರು? ಮಹಮ್ಮದ್ ಆದಿಲ್‌ಶಹನೇ ಅಥವಾ ಕ್ರಿ.ಶ. ೧೬೮೬ರಲ್ಲಿ ವಿಜಾಪುರವನ್ನು ನಾಶ ಮಾಡಿದ ಔರಂಗಜೇಬನೇ ಎಂಬುದು ತಿಳಿದುಬರುವದಿಲ್ಲ. ಗಂಭೀರರಾಯನು ತನ್ನ ಮಗನಾದ ಭಾಸ್ಕರರಾಯನ ಉಪನಯನವನ್ನು ಕಾಶೀ ಕ್ಷೇತ್ರದಲ್ಲಿ ಮಾಡಿದನೆಂದು ಕಾವ್ಯದಲ್ಲಿ ಹೇಳಲಾಗಿದೆ. ಗಂಭೀರರಾಯನು ಭಾಗಾನಗರಕ್ಕೆ ಹೋದಾಗ ಭಾಸ್ಕರರಾಯನ ಜನನವಾಯಿತೆಂದು ಹೇಳಲಾಗಿದೆ. ಹೀಗಿರುವಾಗ ಕೋನಾಂಬಿಕೆಯ ತವರು ಭಾಗಾನಗರವಾಗಿರಬಹುದು ಎಂದು ತಿಳಿಯಬೇಕೆ? ಅಥವಾ ರಾಜಕಾರಣದ ನಿಮಿತ್ತ ಗಂಭೀರರಾಯನು ಭಾಗಾನಗರಕ್ಕೆ ಹೋದಾಗ ಈತನ ಜನನವಾಯಿತೆಂದು ಗ್ರಹಿಸಬೇಕೆ ಎಂಬುದು ತಿಳಿಯದಂತಾಗುತ್ತದೆ.

ಹುಟ್ಟಿನಿಂದಲೇ ಮಹಾ ಮೇಧಾವಿಯಾದ ಭಾಸ್ಕರರಾಯನಿಗೆ ಗಂಗಾಧರ ವಾಜಪೇಯಿ ಎಂಬುವವರಲ್ಲಿ ಪ್ರಥಮ ಹಂತದ ವಿದ್ಯಾಭ್ಯಾಸವಾಯಿತು. ಶಿಕ್ಷಣ ಮುಗಿಸಿದೊಡನೆ ಆತನು ವಿವಾಹವಾದನು. ಆತನ ಹೆಂಡತಿಯ ಹೆಸರು ಆನಂದಿ ಎಂದು ಹೇಳಲಾಗಿದೆ. ಇವಳಲ್ಲಿ ಹುಟ್ಟಿದ ಮಗನಿಗೆ ಪಾಂಡುರಂಗ ಎಂದು ಹೆಸರಿಡಲಾಯಿತೆಂದೂ ತಿಳಿದುಬರುತ್ತದೆ.

ಭಾಸ್ಕರರಾಯನಿಗೆ ಗುಜರಾಥದ ನಿವಾಸಿಯಾದ ಶಿವದತ್ತ ಶುಕ್ಲ ಎಂಬುವವರಲ್ಲಿ ವಿದ್ಯಾಭ್ಯಾಸವಾದ ಬಗ್ಗೆಯೂ ಉಲ್ಲೇಖವಿದೆ. ಮುಂದೆ ಸಂಚಾರ ಕ್ರಮವನ್ನಾರಂಭಿಸಿದಾಗ ಕರ್ನಾಟಕದಲ್ಲಿರುವ ನಾರಾಯಣ ಪೇಟೆ ಎಂಬ ಸ್ಥಳದಲ್ಲಿ ಮಾಧ್ವ ಯತಿಯೊಂದಿಗೆ ವಾದ ಹೂಡಿ ಗೆದ್ದನೆಂದೂ ಆ ಸಂನ್ಯಾಸಿಯ ಸೋದರನ ಮಗಳನ್ನು ವಿವಾಹವಾದನೆಂದೂ, ಆಕೆಯ ಹೆಸರು ಪಾರ್ವತಿ ಎಂದಿರುವದಾಗಿಯೂ ಇವಳಲ್ಲಿ ಹೆಣ್ಣು ಸಂತಾನವಾಯಿತೆಂದೂ ವರ್ಣಿಸಲಾಗಿದೆ.

ಭಾಸ್ಕರರಾಯನಿಂದ ಅನೇಕ ದೇವಾಲಯಗಳ ಪ್ರತಿಷ್ಠಾಪಿಸಲ್ಪಟ್ಟಿವೆ. ಕಾಶಿಯಲ್ಲಿ ಚಕ್ರೇಶ್ವರ ಎಂಬ ದೇವಮಂದಿರವನ್ನೂ ಆತ ಕಟ್ಟಿಸಿದ್ದಾನೆ. ಕೊಂಕಣದಲ್ಲಿ ಗಂಭೀರನಾಥ ದೇವಾಲಯವನ್ನೂ ನಿರ್ಮಿಸಿದ್ದಾನೆ. ಮೂಲಪ್ಪದ್ ಎಂಬಲ್ಲಿ ಪಾಂಡುರಂಗನ ದೇವಾಲಯವನ್ನೂ ಕಟ್ಟಿಸಿದ್ದಾನೆ. ರಾಮೇಶ್ವರದಲ್ಲಿ ವಜ್ರೇಶ್ವರ ದೇವಾಲಯವನ್ನೂ ಕಟ್ಟಿಸಿದ್ದಾನೆ. ಕರ್ನಾಟಕ ರಾಜ್ಯದ ಗುಲ್ಬರ್ಗಾ ಜಿಲ್ಲೆಯಲ್ಲಿ ಭೀಮಾ ತೀರದಲ್ಲಿರುವ ಸನ್ನತಿ ಎಂಬ ಗ್ರಾಮದಲ್ಲಿ ಚಾಂದ್ರಲಾಂಬಾ ಎಂಬ ದೇವಿಯ ದೇವಾಲಯವಿದ್ದು ಆ ದೇವಾಲಯದಲ್ಲಿ ಈತನಿಂದ ಶ್ರೀಚಕ್ರವು ಪ್ರತಿಷ್ಠಾಪಿಸಲ್ಪಟ್ಟಿತೆಂದು ಭಾಸ್ಕರ ವಿವಲಾಸದಲ್ಲಿ ಹೇಳಲಾಗಿದೆ.

ಸನ್ನತಿ ಮನ್ನಾಥ ಪಕ್ಷೇಃ
ಸನ್ನತಿ ನಾಮ್ನೇವ ವಿಶ್ರುತೆ ಕ್ಷೇತ್ರೆ
ಚಕ್ರೆ ಸ ಮಂದಿರಂ ಶ್ರೀಚಕ್ರಾಕಾರೇಣ
ಚಂದ್ರ-ಲಾಂಬಾಯಾಃ

ಶಹಾಜೀ ರಾಜನ ಎರಡನೆಯ ಮಗನಿಂದ (ಕ್ರಿ.ಶ. ೧೬೮೪ರಿಂದ ೧೭೧೧) ಕಾವೇರಿ ತೀರದಲ್ಲಿ ಭಾಸ್ಕರಪುರ ಎಂಬ ಅಗ್ರಹಾರವು ಈತನಿಗೆ ದಾನವಾಗಿ ಲಭಿಸಿತು. ದಕ್ಷಿಣದಲ್ಲಿಯೇ ಈ ಪಂಡಿತನು ಸೇತುಬಂಧ, ಗುಪ್ತವತಿ, ಚಂಡಭಾಸ್ಕರ, ನೀಲಾಚಲಪೇಟಿಕಾ, ಭಟ್ಟಚಾಂದ್ರೋದಯ, ವರಿವಸ್ಯಾ ರಹಸ್ಯ, ಲಲಿತಾ ಸಹಸ್ರನಾಮ ಭಾಷ್ಯ ಮೊದಲಾದ ಗ್ರಂಥಗಳನ್ನು ರಚಿಸಿದನೆಂದು ತಿಳಿದು ಬರುತ್ತದೆ.

ಶಾಕ್ತ ಮತಾವಲಂಬಿಯಾದ ಈತನು ವಿಷ್ಣುರೂಪವನ್ನು ಅನೇಕ ಸಲ ಮುಕ್ತಕಂಠದಿಂದ ಹೊಗಳಿದ್ದಾನೆ.

ಭಾಸ್ಕರರಾಯನ ಶಿಷ್ಯ ಉಮಾನಂದನಾಥನು ತನ್ನ ವಿಚಾರವಾಗಿ ಕೆಲವು ಮಾಹಿತಿಗಳನ್ನೊದಗಿಸಿದ್ದಾನೆ. ಆತನ ತಂದೆ ಬಾಲಕೃಷ್ಣ ಪಂತ ಈತನು ತಂಜಾವೂರಿನ ಅಮಾತ್ಯ ಪದವಿಯಲ್ಲಿದ್ದನಂತೆ. ಉಮಾನಂದನಾಥ ಅಥವಾ ಜಗನ್ನಾಥನು ರಾಜಾ ಸರ್ಫೋಜಿಯ ಜೀವನವನ್ನು ಕುರಿತು "ಶರಭ ವಿಲಾಸ" ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ.

ಭಾಸ್ಕರರಾಯನು ದೀರ್ಘಾಯುಷಿಯಾಗಿ ಬಾಳಿದ. ಆತನ ಮರಣ ಮಧ್ಯಾರ್ಜುನ ಎಂಬ ಸ್ಥಳದಲ್ಲಾಯಿತೆಂದು ಕಾವ್ಯದಿಂದ ತಿಳಿದು ಬರುವದು. ಇದನ್ನು ತಿರುವಿದಾಯಪುರಂ ಎಂಬುದಾಗಿಯೂ ಹೇಳುತ್ತಾರೆ. ಈ ಸ್ಥಳದಲ್ಲಿ ಭಾಸ್ಕರರಾಯನು ವಾಸವಾಗಿದ್ದ ಮನೆಯೂ ಕ್ರಿ.ಶ. ೧೯೩೪ರವರೆಗೂ ಅಸ್ತಿತ್ವದಲ್ಲಿತ್ತೆಂದು ತಿಳಿದುಬರುತ್ತದೆ. ಭಾಸ್ಕರರಾಯನ ಮರಣ ಕಾಲವನ್ನು ಪ್ರಮೋದನಾಮ ಸಂವತ್ಸರ ಕ್ರಿ.ಶ. ೧೭೫೦ ಎಂದು ಅಂದಾಜು ಮಾಡಲಾಗಿದೆ. ಈತನು ಆರಂಭಿಸಿದ ಒಂದು ಗ್ರಂಥ ರಚನೆಯನ್ನು ಪ್ರಮೋದ ಸಂವತ್ಸರದಲ್ಲಿ ಮುಗಿಸಲಾಗಿದೆ.

ಒಂದು ನೂರಕ್ಕೂ ಹೆಚ್ಚಾಗಿ ಗ್ರಂಥಗಳನ್ನು ರಚಿಸಿದ ಮಹಾನುಭಾವನ ಜೀವನದ ಮೇಲೆ ಅನೇಕರು ಸಂಶೋಧನೆಗಳನ್ನು ನಡೆಸಿದ್ದಾರೆ. ಮೂಲತಃ ವಿಜಾಪುರದ ನೆಲದಲ್ಲಿ ಬೆಳೆದ ಈ ಮಹಾನುಭಾವನ ಜೀವನವು ಒಂದು ಆದರ್ಶದ ಪ್ರತೀಕವೆಂದೆನಿಸುತ್ತದೆ.



# ಗುರು ಸಾರ್ವಭೌಮರು

ಗುರುಗಳೆಂದರೆ ಮಂತ್ರಾಲಯದ ರಾಘವೇಂದ್ರತೀರ್ಥರು. ದೇವನೆಂದರೆ ತಿರುಪತಿಯ ಶ್ರೀನಿವಾಸ ಎಂಬ ಶಬ್ದಗಳು ಭಾವಿಕರ ಮನದಲ್ಲಿ ಬಹು ಕಾಲದಿಂದ ಆಶ್ರಯ ಪಡೆದುಕೊಂಡು ಬಂದಿವೆ. ಯಾವ ಮಹಾನುಭಾವರನ್ನು ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಎಂಬೆಲ್ಲ ಹೆಸರುಗಳಿಂದ ಹೊಗಳುತ್ತಾ ಬಂದಿದ್ದಾರೆಯೋ ಆ ಮಹಾನುಭಾವರ ದಿವ್ಯ ಸನ್ನಿಧಾನವನ್ನು ಹುಡುಕಿಕೊಂಡು ಹೋಗಿ ನಾನಾ ರೀತಿಯಲ್ಲಿ ಅವರ ಸೇವೆ ಮಾಡಿ ತಮ್ಮ ಕಷ್ಟಕಾರ್ಪಣ್ಯಾದಿಗಳಿಂದ ನಿವೃತ್ತಿ ಹೊಂದಿದ ಭಾವಿಕರ ಸಂಖ್ಯೆ ಇಂದು ಕೋಟಿ ಕೋಟಿಯಲ್ಲಿ ನಾವು ಕಾಣುವಂತಾಗಿದೆ. ದೇಶ ವಿದೇಶಗಳಲ್ಲಿ ಅವರ ತಪಸ್ಸಿನ ಪ್ರಭಾವವು ಬೆಳಗತೊಡಗಿದೆ. ಆದುದರಿಂದಲೇ ಲೋಕವು ಅವರನ್ನು ಗುರುರಾಜರೆಂದು ಕರೆಯತೊಡಗಿದೆ.

ಗುರುರಾಜರ ಮಹಿಮೆಗೆ ಕಲಿಯುಗದ ಅವತಾರವೊಂದೇ ಮೂಲ ಕಾರಣವಲ್ಲ. ಅವರು ಒಂದು ಯುಗದಲ್ಲಿ ಹಿರಣ್ಯಕಶ್ಯಪನಿಗೆ ಪ್ರಹ್ಲಾದ ಎಂಬ ಮಗನಾಗಿ ಜನಿಸಿದಾಗ ಅಸುರೀ ಸಂಪತ್ತು ಹಾಗೂ ದೈವೀ ಸಂಪತ್ತುಗಳಲ್ಲಿ ನಡೆದ ತುಮುಲ ಹೋರಾಟದಲ್ಲಿ ಬಾಲಕನಾದ ಪ್ರಹ್ಲಾದನಿಗೆ ತಂದೆ ವಿಧಿಸಿದ ಅನೇಕ ಕಠೋರವಾದ ಪರೀಕ್ಷೆಗಳಿಗೆ ಆತನು ಬಲಿಯಾಗಬೇಕಾಯಿತು. ಎಂಥ ದಾರುಣ ಪ್ರಸಂಗ ಬಂದರೂ

ತಾನು ನಂಬಿದ ಮೌಲ್ಯಾಧಾರಿತವಾದ ಹರಿಸರ್ವೋತ್ತಮತ್ವದ ಸಿದ್ಧಾಂತದಿಂದ ಆತನು ವಿಚಲಿತನಾಗದೆ ನಿಷ್ಠೆಯಿಂದ ತನ್ನ ಹೋರಾಟದಲ್ಲಿ ಜಯವನ್ನು ಗಳಿಸಿದ. ಆದುದರಿಂದಲೇ ಭಾಗವತಪ್ರಿಯರು ಪ್ರಹ್ಲಾದರಾಜನನ್ನು ಮೊಟ್ಟು ಮೊದಲನೆಯ ಸತ್ಯಾಗ್ರಹಿ ಎಂದು ಭಾವಿಸತೊಡಗಿದರು.

ವಿಶ್ವಕ್ಕೆ ಪ್ರಹ್ಲಾದನ ಭಕ್ತಿಯನ್ನು ಮಾದರಿಯಾಗಿ ತೋರಿಸಲು ಸ್ವತಃ ಸೃಷ್ಟಿಕರ್ತನೇ ಅತ್ಯಂತ ವಿಚಿತ್ರವೆನಿಸಬಹುದಾದ ನಾರಸಿಂಹನ ರೂಪವನ್ನು ತಾಳಬೇಕಾಯಿತು. ಪ್ರಹ್ಲಾದ ಪ್ರಿಯನಾದ ಆ ದೇವನು ಹೇಗೆ ಕಂಬದಿಂದ ಹೊರಬಂದನೆಂಬ ವಿಚಾರವನ್ನು ಕುರಿತು ಶ್ರೀಮದ್ಭಾಗವತ ಗ್ರಂಥವು ಈ ರೀತಿಯಾಗಿ ವರ್ಣಿಸಿರುವದು.

ಸತ್ಯಂ ವಿಧಾತುಂ ನಿಜ ಭೃತ್ಯ ಭಾಷಿತಂ  
ವ್ಯಾಪ್ತಿಂಚ ಭೂತೇಷ್ವಖಿಲೇಷು ಚಾತ್ಮನಃ  
ಅದೃಶ್ಯತಾತ್ಯದ್ಭುತ ರೂಪ ಮುದ್ವಹನ್  
ಸ್ತಂಭೆ ಸಭಾಯಾಂ ನ ಮೃಗಂ ನ ಮಾನುಷಂ

ನನ್ನ ಗುರುಗಳಾಗಿದ್ದ ಪದ್ಮಶ್ರೀ ಸೇತುಮಾಧವರಾವ್ ಪಗಡಿ ಇವರು ಒಂದು ಸಂದರ್ಭದಲ್ಲಿ ಈ ನರಸಿಂಹಾವತಾರವಾದುದು ಕಾಬೂಲನಲ್ಲಿ ಎಂದು ಹೇಳುತ್ತ ಅದನ್ನೇ ಮೂಲಸ್ಥಾನವೆಂದು ಕರೆಯುತ್ತಿದ್ದರೆಂದೂ, ಇಂದಿಗೂ ಅಲ್ಲಿ ನರಸಿಂಹನ ದೇವಮಂದಿರವು ಇರುವುದಾಗಿಯೂ, ಭಾರತ ವಿಭಜನಾ ನಂತರ ಆ ಭಾಗವು ಪಾಕಿಸ್ಥಾನಕ್ಕೆ ಹೋದುದರಿಂದ ಆ ದೇವಸ್ಥಾನದಲ್ಲಿದ್ದು ನರಸಿಂಹನ ವಿಗ್ರಹವನ್ನು ಬೇರೊಂದು ಕೋಣೆಯಲ್ಲಿರಿಸಿ, ಆ ದೇವ ಮಂದಿರವನ್ನು ವಿದ್ಯಾರ್ಥಿಗಳಿಗೆ ವಸತಿ ಗೃಹವಾಗಿ ಮಾಡಲಾಯಿತೆಂದೂ ವಿವರವನ್ನಿತ್ತು ಮುಂದೆ ಪಾಕಿಸ್ತಾನದಿಂದ ಭಾರತಕ್ಕೆ ವಲಸೆ ಬಂದ ಓಂದುಗಳು ಭಾರತದ ರಾಯಭಾರಿಯ ಮುಖಾಂತರ ತಮ್ಮ ದೇವಮಂದಿರದ ಮೇಲಾದ ಅನ್ಯಾಯವನ್ನು ಪಾಕಿಸ್ತಾನ ಸರಕಾರಕ್ಕೆ ತಿಳಿಸಿದಾಗ ಭುಟ್ಟೋರವರು ತಕ್ಷಣ ಅದನ್ನು ಖಾಲಿ ಮಾಡಿಸಿ ಕೊಟ್ಟುದಾಗಿಯೂ,

ಈಗ ಮೊದಲಿನ ಸ್ಥಾನದಲ್ಲಿಯೇ ನರಸಿಂಹನ ವಿಗ್ರಹವನ್ನು ನಾವು ಕಾಣಬಹುದಾಗಿಯೂ ಒಂದು ಲೇಖನದಲ್ಲಿ ತಿಳಿಸಿರುವುದುಂಟು. ನಾನು ಬದರಿ ಯಾತ್ರೆಗೆ ಹೊರಟಾಗ ಮಾರ್ಗ ಮಧ್ಯದಲ್ಲಿ ದೊರೆಯುವ ಜ್ಯೋತಿರ್ಮಠದ ಪೀಠಾಧೀಶರನ್ನು ಕಂಡು ಈ ವಿಷಯವನ್ನು ವಿವರಿಸಿದಾಗ ಅವರೂ ಸಹ ಈ ಮಾತಿಗೆ ತಮ್ಮ ಸಮ್ಮತಿಯನ್ನಿತ್ತರಲ್ಲದೆ ಶ್ರೀಮಠದಲ್ಲಿರುವ ಬಹು ವಿಶಾಲ ವದನಗಳಿಂದ ಕೂಡಿದ ನರಸಿಂಹ ಸಾಲಿಗ್ರಾಮವನ್ನು ತೋರಿಸಿದರು.

ಪ್ರಹ್ಲಾದನ ಅವತಾರಾನಂತರ ಅವರು ಬಾಲ್ಹೀಕರಾಗಿ, ವ್ಯಾಸರಾಜರಾಗಿ ಮುಂದೆ ಶ್ರೀ ರಾಘವೇಂದ್ರತೀರ್ಥರಾಗಿ ಅವತರಿಸಿದರೆಂಬ ಭಾವನೆ ಭಕ್ತರ ಹೃದಯದಲ್ಲಿದೆ. ಅದಕ್ಕೆ ಕೆಲವು ಸಂದರ್ಭಗಳನ್ನೂ ಸಹ ಅವರು ಉದಾಹರಣೆಯಾಗಿ ಕೊಡುತ್ತಾರೆ. ಶ್ರೀ ಕೃಷ್ಣನ ಭೂಭಾರಹರಣ ಕಾಲದಲ್ಲಿ ಬಾಲ್ಹೀಕರಾಜನಾಗಿ ಸ್ವಾಮಿಯ ಕಾರ್ಯದಲ್ಲಿ ಕೈಗೂಡಿಸಿದರೆಂಬುದಾಗಿ ಹೇಳುತ್ತಾರೆ. ಅನಂತರ ಕಲಿಯುಗದಲ್ಲಿ ಅವರು ವ್ಯಾಸರಾಜರಾಗಿ, ಗುರು ರಾಘವೇಂದ್ರರಾಗಿ ಅವತರಿಸಿದರೆಂಬ ವಿಚಾರವನ್ನು ಕುರಿತು ಅನೇಕ ಬೃಹದ್ಗ್ರಂಥಗಳನ್ನೇ ಪ್ರಕಟಿಸಿದ್ದಾರೆ.

ರಾಘವೇಂದ್ರ ಸ್ವಾಮಿಗಳ ಪೂರ್ವಜರೆಲ್ಲ ತುಂಗಭದ್ರಾತೀರದಲ್ಲಿ ಸ್ಥಾಪಿತವಾಗಿದ್ದ ಮರೆಯಲಾಗದ ಮಹಾಸಾಮ್ರಾಜ್ಯವೆಂದೆನಿಸಿದ ವಿಜಯನಗರ ಸಾಮ್ರಾಜ್ಯದ ಆಸ್ಥಾನ ಪಂಡಿತರಾಗಿದ್ದವರು. ಸುವರ್ಣಯುಗಪುರುಷನೆಂದೆನಿಸಿಕೊಂಡ ಶ್ರೀಕೃಷ್ಣದೇವರಾಯನಿಗೆ ಈ ಮನೆತನದ ಕೃಷ್ಣಭಟ್ಟರೇ ವೀಣೆಯನ್ನು ಕಲಿಸಿದ ಗುರುಗಳಾಗಿದ್ದರು. ಇವರ ಚಿರಂಜೀವರಾದ ಕನಕಾಚಲಭಟ್ಟರಂತೂ ಸಂಗೀತ ಸಾಹಿತ್ಯಗಳೆರಡರಲ್ಲಿಯೂ ಮಹಾ ವಿದ್ವಾಂಸರೆಂದು ಖ್ಯಾತಿ ಗಳಿಸಿದ್ದರು.

ಮಹಾ ವೈಭವೋಪೇತವಾದ ಸಾಮ್ರಾಜ್ಯವು ರಕ್ಕಸತಂಗಡಗಿ ಯುದ್ಧದಲ್ಲಿ ಕಾಲನ ವಿಡಂಬನೆಗೆ ಬಲಿಯಾಗಿಹೋಯಿತು. ಆಗ ನಿರಾಶ್ರಿತರಾದ ಅನೇಕ ವೈದಿಕ ಕುಟುಂಬಗಳು ದಕ್ಷಿಣದ ಕಾವೇರಿ ತೀರದಲ್ಲಿರುವ ತಂಜಾವೂರು, ಕುಂಭಕೋಣ, ಕಂಚಿ ಕ್ಷೇತ್ರಗಳನ್ನು

ಹುಡುಕಿಕೊಂಡು ಬರಬೇಕಾಯಿತು. ಹೀಗೆ ತಿಮ್ಮಣ್ಣಭಟ್ಟರು ಅಜಯ್ಯವಿಜಯೀಂದ್ರರು ವಾಸಿಸುತ್ತಿದ್ದ ಕುಂಭಕೋಣಕ್ಕೆ ಬಂದು ವಾಸಿಸತೊಡಗಿದರು. ಅವರ ಚಿರಂಜೀವರೇ ವೆಂಕಟನಾಥರು. ಬಾಲ್ಯದಲ್ಲಿಯೇ ಇವರು ಮಾತಾಪಿತೃಗಳನ್ನು ಕಳೆದುಕೊಂಡು ಅನಾಥರಾದಾಗ ಲಕ್ಷ್ಮೀನಾರಾಯಣಾಚಾರ್ಯರ ಆಶ್ರಯದಲ್ಲಿ ಬೆಳೆಯುವ ಪ್ರಸಂಗವು ಬಂದಿತು. ಒಂದು ಕಾಲದಲ್ಲಿ ರಾಜಾಶ್ರಯದಲ್ಲಿದ್ದ ಕುಟುಂಬವು ಕಾಲನ ಕರಾಳತನಕ್ಕೆ ಸಿಕ್ಕಿ ಕಡುಬಡತನದಲ್ಲಿ ಜೀವಿಸುವಂಥ ಪ್ರಸಂಗವು ಬಂದಿತು. ಆದರೆ ವೆಂಕಟನಾಥರಿಗೆ ಆ ಬಡತನವೇನೂ ಪರಿಣಾಮ ಮಾಡಲಿಲ್ಲ. ಅವರು ಏಕಾಗ್ರ ಚಿತ್ತದಿಂದ ಆಚಾರ್ಯ ಮಧ್ವರ ಸಿದ್ಧಾಂತವನ್ನು ಆಮೂಲಾಗ್ರ ಸಿದ್ಧಿಸಿಕೊಳ್ಳುವುದರಲ್ಲಿ ಎಲ್ಲವನ್ನೂ ಮರೆಯತೊಡಗಿದರು. ಕಾಲಾಂತರದಲ್ಲಿ ಅವರು ಗೃಹಸ್ಥಾಶ್ರಮಿಗಳಾದರು. ಮುಂದೆ ತಿರುಮಲಾಧೀಶನ ಅಣತಿಯ ಮೇರೆಗೆ ಸರ್ವಸಂಗ ಪರಿತ್ಯಾಗಿಗಳಾಗಿ ಶ್ರೀ ಸುಧೀಂದ್ರತೀರ್ಥರಿಂದ ಯತ್ಯಾಶ್ರಮ ಸ್ವೀಕಾರ ಮಾಡಿ ದ್ವೈತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗಿ "ಶ್ರೀ ರಾಘವೇಂದ್ರತೀರ್ಥ"ರೆಂಬ ಹೆಸರಿನಿಂದ ಕರೆಸಿಕೊಳ್ಳತೊಡಗಿದರು. ಆಶ್ರಮಾನಂತರ ಕೇವಲ ಎರಡೇ ವರುಷಗಳಲ್ಲಿ ಅವರು ತಮ್ಮ ಗುರುಗಳನ್ನು ಕಳೆದುಕೊಳ್ಳುವಂತಹ ಸಂದರ್ಭವು ಬಂದಿತು.

ವಂಶಪಾರಂಪರ್ಯವಾಗಿ ಪ್ರಾಪ್ತವಾದ ವಿದ್ವತ್ತಿನ ಪ್ರಭಾವದಿಂದಾಗಿ ಪ್ರತಿದಿನವೂ ಶ್ರೀರಾಮನ ಪೂಜೆಯಾದ ನಂತರ ಪಾಠಪ್ರವಚನಗಳಲ್ಲಿ ನಿರತರಾಗತೊಡಗಿದರು. ದಿನಗಳೆದಂತೆಲ್ಲ ನ್ಯಾಯಮುಕ್ತಾವಳಿ, ತಂತ್ರದೀಪಿಕಾ, ಮಂತ್ರಾರ್ಥಮಂಜರಿ, ಉಪನಿಷತ್ ಖಂಡಾರ್ಥ, ಪಂಚಸೂಕ್ತ ವ್ಯಾಖ್ಯಾನ, ಭಾಟ್ಟಸಂಗ್ರಹ ಮೊದಲಾದ ಗ್ರಂಥಗಳು ಹೊರಬರತೊಡಗಿದವು. ಶ್ರೀ ಜಯತೀರ್ಥ ಮುನಿಗಳಿಂದ ರಚಿತವಾದ ಸುಧಾ ಗ್ರಂಥಕ್ಕೆ "ಪರಿಮಳ" ಎಂಬ ಹೆಸರಿನ ಗ್ರಂಥವನ್ನೊದಗಿಸಿದರು. ಇದರಿಂದಾಗಿ ದ್ವೈತವೇದಾಂತಾಭ್ಯಾಸಿಗಳಲ್ಲಿ ಅವರು ಪರಿಮಳಾಚಾರ್ಯ ರೆಂದೇ ಗುರುತಿಸಲ್ಪಡ ತೊಡಗಿದರು. ಇವರಿಂದ ರಚಿತವಾದ ಶ್ರೀರಾಮ ಚಾರಿತ್ರ್ಯಮಂಜರಿ ಎಂಬ ಗ್ರಂಥವು ಸಾಹಿತ್ಯಾಭ್ಯಾಸಿಗರಿಗೆ ರಸದೌತಣವನ್ನೀಯುವಂತಹ ಕೃತಿಯಾಗಿರುವದು.

ಪ್ರಹ್ಲಾದರಾಗಿ ಜನಿಸಿದಾಗ ಶ್ರೀ ಸ್ವಾಮಿಯೇ ಪ್ರತ್ಯಕ್ಷನಾಗಿ "ನೀನು ಬೇಕಾದುದನ್ನು ಕೇಳು, ಕೊಡುತ್ತೇನೆ" ಎಂದು ಹೇಳಿದಾಗಲೂ ಸಹ ಬಾಲಕ ಪ್ರಹ್ಲಾದನು "ದೇವ, ನನಗೆ ಜನ್ಮಜನ್ಮಾಂತರಗಳಲ್ಲಿಯೂ ದೀನದಲಿತರು ಕಷ್ಟಕಾರ್ಪಣ್ಯಗಳಿಂದ ತೊಳಲಾಡುವವರಿಗೆ ಮಾರ್ಗದರ್ಶನ ಮಾಡುವಂತಹ ಸದ್ ಬುದ್ಧಿಯನ್ನು ಮಾತ್ರ ಅನುಗ್ರಹ ಮಾಡು" ಎಂದು ಕೇಳಿಕೊಂಡಿದ್ದರು. ಆದುದರಿಂದಲೇ ಅವರು ಗುರು ರಾಘವೇಂದ್ರರಾಗಿ ಅವತರಿಸಿದಾಗ ಆರ್ತರನ್ನುದ್ಧರಿಸಲು, ಅವರಿಗೆ ಸರಿಯಾದ ಮಾರ್ಗವನ್ನು ಸೂಚಿಸಲು ಸಂಚಾರ ಕ್ರಮವನ್ನಾರಂಭಿಸಿದರು. ನಾಡಿನ ತುಂಬೆಲ್ಲ ಹರಿಸರ್ವೋತ್ತಮತ್ವದ ದುಂಧುಬಿಯು ಮೊಳಗುವಂತೆ ಮಾಡಿದರು.

ಗುರುರಾಜರ ತಪಸ್ಸು ಒಂದು ಯುಗದ ತಪಸ್ಸಲ್ಲ. ಒಂದು ಅವತಾರದ ತಪಸ್ಸಲ್ಲ. ಅದು ಜನ್ಮಜನ್ಮಾಂತರದಿಂದ ಸಿದ್ಧಿಸಿದ ತಪಸ್ಸಿನ ಪುಣ್ಯಫಲ. ಆ ಫಲವನ್ನು ಹಂಚುವುದಕ್ಕಾಗಿಯೇ ಅವರ ಅವತಾರ ಕಾರ್ಯವೆಂದೆನಿಸಿತು.

ದಕ್ಷಿಣಾಪಥದ ಸಂಚಾರದಲ್ಲಿ ತಂಜಾವೂರಿಗೆ ಬಂದಾಗ ಅಲ್ಲಿಯ ಪ್ರಭುಗಳು ಬಹು ಭಕ್ತಿಯಿಂದ ಅವರನ್ನು ಬರಮಾಡಿಕೊಂಡು ಶ್ರೀರಾಮನಿಗೆ ಅಮೂಲ್ಯ ಮಣಿ ಹಾರವನ್ನು ಅರ್ಪಿಸಿದರು. ಮುಂದೆ ಮಧುರೆ, ಅನಂತಪದ್ಮನಾಭ, ವೆಲ್ಲೂರು, ಉಡುಪಿ ಮೊದಲಾದ ಸ್ಥಳಗಳಿಗೆ ಭೇಟಿ ಕೊಟ್ಟು ಶ್ರೀರಂಗಪಟ್ಟಣಕ್ಕೆ ಬಂದಾಗ ಅಲ್ಲಿಯ ದೊರೆಗಳಿಂದ ದೇವರಾಜಪುರದ ಅಗ್ರಹಾರವು ಶ್ರೀರಾಮನಿಗೆ ಅರ್ಪಿತವಾಯಿತು. ನಂಜನಗೂಡಿಗೆ ಹೋಗಿ ಶ್ರೀಕಂಠನ ದರ್ಶನ ಮಾಡಿಕೊಂಡು ಮರುಳಿದರು. ಅನಂತರ ಚಿತ್ರದುರ್ಗ ಹಾಗೂ ಗದುಗಿನ ವೀರನಾರಾಯಣನ ದರ್ಶನ ಪಡೆದು ವೆಂಕಟಗಿರಿಯ ದೇಸಾಯಿಯವರ ಮಗನು ಅಪಮೃತ್ಯು ಹೊಂದಿದಾಗ ತಮ್ಮ ತಪಃಪ್ರಭಾವದಿಂದ ಆತನನ್ನು ಬದುಕಿಸಿ, ಹುಬ್ಬಳ್ಳಿ, ಸವಣೂರು, ಪಂಢರಪುರ ಮೊದಲಾದ ಭಾಗಗಳಲ್ಲಿ ಸಂಚರಿಸಿ ವಿಜಾಪುರಕ್ಕೆ ಆಗಮಿಸಿದಾಗ ಇಬ್ರಾಹಿಮ್ ಆದಿಲ್‌ಶಹನು ಗುರುಗಳಿಗೆ ಬಹು ವೈಭವದಿಂದ ಸ್ವಾಗತವನ್ನು ಕೋರಿದನು. ಸ್ವತಃ ಈತನು ನರಸಿಂಹನ ಭಕ್ತನಾಗಿದ್ದು ಸಂಗೀತ

ಸಾಹಿತ್ಯದಲ್ಲಿ ಅಪ್ರತಿಭ ವಿದ್ವಾಂಸನಾಗಿದ್ದನು. ಶ್ರೀಮಠಕ್ಕೆ ಈ ಬಾದಶಹನಿಂದ ಅನೇಕ ಭೂಮಿಗಳು ಕಾಣಿಕೆಯಾಗಿ ಸಮರ್ಪಿತವಾದವು. ಅನಂತರ ರಾಯಚೂರು, ಮಾನವಿ, ಶ್ರೀಶೈಲ ಮೊದಲಾದ ಭಾಗಗಳಲ್ಲಿ ಸಂಚರಿಸಿ ಅದವಾನಿಗೆ ದಯಮಾಡಿಸಿದರು. ಸಿದ್ದೀಮಸೂದ ಹಾಗೂ ಸಿದ್ದೀಜೋಹಾರರು ಈ ಭಾಗದ ಆದಿಲ್‌ಶಾಹಿ ಪ್ರತಿನಿಧಿಗಳಾಗಿದ್ದರು. ವೆಂಕಣ್ಣನೆಂಬ ಬ್ರಾಹ್ಮಣ ಮಸೂದರಿಗೆ ದಿವಾಣನಾಗಿದ್ದ. ಗುರುಗಳು ಹಿಂದೆ ತಾವು ಪ್ರಹ್ಲಾದಾವತಾರದಲ್ಲಿ ತುಂಗಭದ್ರಾ ತೀರದಲ್ಲಿ ಒಂದು ಯಾಗವನ್ನು ಮಾಡಿದ ಸ್ಥಳವನ್ನು ಗುರುತಿಸಿ ಅದನ್ನು ದಾನವಾಗಿ ಸ್ವೀಕರಿಸಿದರು. ಅಂದು ಆ ಸ್ಥಳವು ಮಂಚಾಲಿ ಎಂಬ ಹೆಸರಿನ ಕುಗ್ರಾಮವಾಗಿತ್ತು. ಗುರುಗಳು ತಮ್ಮ ಜೀವಿತಕಾಲದಲ್ಲಿ ಮಾನವನ ಕಲ್ಪನೆಗೆ ಮೀರಿದಂತಹ ಅನೇಕ ಪವಾಡಗಳನ್ನು ಮಾಡಿ ತೋರಿಸಿದರು. ಅವರ ಪಾಂಡಿತ್ಯ, ದೀನದಲಿತರ ಬಗ್ಗೆ ಅವರಿಗಿದ್ದ ಕರುಣೆ ಇವುಗಳನ್ನು ಕುರಿತು ಹರಿದಾಸರು ಮುಕ್ತಮನದಿಂದ ಅವರನ್ನು ಗುಣಗಾನ ಮಾಡಿದರು. ಸ್ವತಃ ಗುರುವರ್ಯರೇ ಕನ್ನಡದಲ್ಲಿ "ಇಂದೂ ಎನಗೆ ಗೋವಿಂದ" ಎಂಬ ಹೆಸರಿನಲ್ಲಿ ಪದ್ಯವನ್ನೂ ಸಹ ರಚಿಸಿದರು.

ತಮ್ಮ ಪೂರ್ವಜರೆಲ್ಲ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಲ್ಲಿ ಹರಿಯುತ್ತಿದ್ದ ತುಂಗಭದ್ರಾ ತೀರದಲ್ಲಿಯೇ ಬಾಳಿದವರಾದುದರಿಂದಲೇ ಗುರುಗಳು ತಮ್ಮ ಜೀವಿತದ ಕೊನೆಗಾಲವನ್ನೆಲ್ಲ ತುಂಗಭದ್ರಾ ಪ್ರವಾಹದ ದಂಡೆಯ ಮೇಲೆಯೇ ಕಳೆಯಬೇಕೆಂಬ ಸಂಕಲ್ಪದಿಂದ "ಯೋಗೀಂದ್ರ ತೀರ್ಥರೆಂಬುವವರಿಗೆ ಸಂನ್ಯಾಸ ದೀಕ್ಷೆಯನ್ನಿತ್ತು" ತಾವು ಸ್ವತಃ ಸಜೀವರಾಗಿ ಮಂಚಾಲಿಯಲ್ಲಿ ವೃಂದಾವನವನ್ನು ಪ್ರವೇಶ ಮಾಡಿದರು. ಆ ಮಹಾನುಭಾವರು ವೃಂದಾವನ ಪ್ರವೇಶ ಮಾಡಿ ಇಂದಿಗೆ ಮುನ್ನೂರಾ ಇಪ್ಪತ್ತೈದು ವರುಷಗಳಾಗಿ ಹೋದರೂ ಇಂದಿಗೂ ಭಕ್ತರಿಗೆ ಅವರು ಮಾರ್ಗದರ್ಶಕರಾಗಿ ವೃಂದಾವನ ಮಹಿಮೆಯನ್ನು ತೋರುತ್ತಿರುವದು ಮಹಾಭಾಗ್ಯವೆಂದೇ ಭಾವಿಸಲಾಗುವದು.

ಒಂದು ಕಾಲದಲ್ಲಿ ನಿಸರ್ಗ ರಮಣೀಯವಾಗಿದ್ದ ಮಂಚಾಲಿ ಗ್ರಾಮವು ಕೇವಲ ವಿರಕ್ತರು ಹಾಗೂ ಸಾಧಕರನ್ನಾಕರ್ಷಿಸುವ ದಿವ್ಯ

ಸಾನ್ನಿಧ್ಯದ ತಾಣವೆನಿಸಿಕೊಂಡಿತ್ತು. ಆದರೆ ಇಂದು ನಾಗರೀಕ ಸೌಲಭ್ಯಗಳು ಹೆಚ್ಚಿದಂತೆಲ್ಲ ಕ್ಷೇತ್ರದ ಪರಿಸರವೆಲ್ಲ ಮಲಿನವಾಗತೊಡಗಿದೆ. ಮಂಚಾಲಿ ಇಂದು ಮಂತ್ರಾಲಯವೆನಿಸಿಕೊಂಡಿದೆಯಾದರೂ ಅದೊಂದು ಯಾಂತ್ರಿಕಯುಗದ ವ್ಯಾಪಾರಿ ಕೇಂದ್ರವಾಗಿ ಪರಿವರ್ತನೆಗೊಳ್ಳತೊಡಗಿದೆ.

ಆಂಧ್ರಪ್ರದೇಶದ ಧಾರ್ಮಿಕ ದತ್ತಿ ಇಲಾಖೆಯ ನೇತೃತ್ವದಲ್ಲಿ ಶ್ರೀಮಠದ ಕಾರ್ಯಕಲಾಪಗಳು ನಡೆಯುತ್ತಿವೆ. ಆದರೂ ಸಹ ಪ್ರವಾಹದ ಮಲೀನತೆಯಾಗಲಿ, ಪರಿಸರದ ಮಲೀನತೆಯ ನಿವಾರಣೆಗಾಗಲೀ ಅಷ್ಟೊಂದು ಗಮನ ಹರಿಸದಿರುವುದು ಶೋಚನೀಯ ವಿಚಾರವೆನಿಸುತ್ತದೆ. ಅರ್ಥಪ್ರಧಾನದ ಈ ಜೀವನದಿಂದ ಎಂಥ ಅನರ್ಥವನ್ನು ನಾವು ಅನುಭವಿಸಬಹುದೋ ಎಂದು ಭಾವಿಕರ ಮನಸ್ಸು ಮುದುಡಿಕೊಳ್ಳುವಂತಾಗಿದೆ. ಇದು ನಿವಾರಣೆಯಾಗುವಂತೆ ನೋಡಿಕೊಳ್ಳುವದು ಅತಿ ಮುಖ್ಯ ಎಂಬ ಮಾತನ್ನು ಹೇಳಲೇಬೇಕಾಗುತ್ತದೆ.

ಮುನ್ನೂರಾ ಇಪ್ಪತ್ತೈದನೆಯ ವರುಷದ ಶ್ರೀ ರಾಘವೇಂದ್ರ ಗುರುಗಳ ಆರಾಧನೆಯನ್ನು ಹೇಗೆ ಆಚರಿಸಬೇಕು?

ಧಾತೃನಾಮ ಸಂಶ್ರಾವಣ ಕೃಷ್ಣಪಕ್ಷ ಶುಕ್ರವಾರ ೩೦-೮-೯೬ ಮಧ್ಯಾರಾಧನೆ ಎಂದು ಪಂಚಾಂಗಗಳಲ್ಲಿ ನಮೂದಿಸಲಾಗಿದೆ.

ಗುರುವಾರ, ಶುಕ್ರವಾರ, ಶನಿವಾರ ಹೀಗೆ ಮೂರು ದಿನಗಳ ಕಾಲ ಗುರುಗಳ ಆರಾಧನೆಯನ್ನು ನಡೆಸಲಾಗುತ್ತದೆ. ಈ ಮೂರು ದಿನಗಳಲ್ಲಿ ಗುರುರಾಜರ ಪರಮ ಭಕ್ತರೆನಿಸಿದ ಅಪ್ಪಣ್ಣಾಚಾರ್ಯರಿಂದ ರಚಿತವಾದ ಶ್ರೀ ರಾಘವೇಂದ್ರ ಸ್ತೋತ್ರವನ್ನು ಅತ್ಯಂತ ಪರಿಶುದ್ಧವಾದ ಮನಸ್ಸಿನಿಂದ ಬಂಧು ಬಾಂಧವರೊಂದಿಗೆ ಕೂಡಿಕೊಂಡು ನೂರೆಂಟು ಅಥವಾ ಸಾವಿರದಾ ಎಂಟು ಸಲ ಪಠನ ಮಾಡುವ ಸಂಪ್ರದಾಯವಿದೆ. ಗುರು ಸಾರ್ವಭೌಮರಿಂದ ರಚಿತವಾದ ಗ್ರಂಥಗಳ ಪ್ರವಚನ ಉಪನ್ಯಾಸಗಳೊಂದಿಗೆ ಹರಿಕಥಾ ಕಾಲಕ್ಷೇಪನ್ನೂ ಸಹ ನಡೆಸುತ್ತಾರೆ.

ಭಾರತದ ಉದ್ದಗಲಕ್ಕೂ ಈ ಮೂರು ಕಾಲಾವಧಿಯಲ್ಲಿ ಲಕ್ಷಾಂತರ ಭಕ್ತರಿಗೆ ಗುರುರಾಜರ ಹೆಸರಿನಲ್ಲಿ ಅನ್ನೋದಕವನ್ನೀಯ ಲಾಗುತ್ತದೆ. ಅಲ್ಲಲ್ಲಿ ಸಂಗೀತ ಕಾರ್ಯಕ್ರಮಗಳೊಂದಿಗೆ ವಿದ್ಯಾರ್ಥಿಗಳ ಸಂಸ್ಕೃತ ಪರೀಕ್ಷೆಯೂ ಸಹ ನಡೆದು ಸಂಭಾವನೆಯನ್ನೀಯಲಾಗುತ್ತದೆ. ಕೊನೆಯ ದಿನ ಗುರುರಾಜರನ್ನು ರಥದಲ್ಲಿ ಕೂಡಿಸಿ ವೈಭವದಿಂದ ರಥೋತ್ಸವವನ್ನು ಮಾಡುತ್ತಾರೆ. ಜಾತಿ ಮತ, ಕುಲಗೋತ್ರಗಳೆನ್ನದೆ ಸರ್ವರೂ ಗುರುರಾಜರ ಅನುಗ್ರಹಕ್ಕಾಗಿ ಒಂದುಗೂಡಿಕೊಂಡು ಕೆಲಸ ಮಾಡುವ ಸೌಭಾಗ್ಯವನ್ನು ನಾವು ಎಲ್ಲ ಕಡೆಯಲ್ಲಿಯೂ ನೋಡಬಹುದಾಗಿದೆ.



# ತಂಜಾವೂರಿನ ಜ್ಞಾನಗಂಗೋತ್ರಿ 'ಸರಸ್ವತಿ ಮಹಲ್'

ಛತ್ರಪತಿ ಶಿವಾಜಿಯ ತಂದೆ ಶಹಾಜಿ ರಾಜನು ಆದಿಲ್‌ಶಾಹಿ ರಾಜ್ಯದ ದಕ್ಷಿಣದ ಸುಬೇದಾರನಾಗಿ ಬಹುಕಾಲ ಬೆಂಗಳೂರಿನಲ್ಲಿಯೇ ವಾಸವಾಗಿದ್ದ. ಆತನಿಗೆ ಬೆಂಗಳೂರು ಕೋಲಾರ ಜಿಲ್ಲೆಗಳು ಜಹಗೀರಿಯಾಗಿ ಕೊಡಲ್ಪಟ್ಟಿದ್ದವು. ಆತನ ಕಾಲದಲ್ಲಿಯೇ ಬೆಂಗಳೂರಿನಲ್ಲಿ ರಾಜಕೋಶವೆಂಬ ಅಪರೂಪದ ಗ್ರಂಥವು ನಿರ್ಮಾಣವಾಯಿತು. ಶಿವಾಜಿಯನ್ನು ಹೆತ್ತ ತಾಯಿ ಜೀಜಾಬಾಯಿಯಾದರೆ, ಶಹಾಜಿಯ ಇನ್ನುಳಿದ ಐವರುರಾಣಿಯರ ಸಂತತಿ ದಕ್ಷಿಣದಲ್ಲಿ ಬೆಳೆಯಿತು. ಶಿವಾಜಿಯ ಮಲತಮ್ಮನು ದಕ್ಷಿಣದ ಕಾಶ್ಮೀರ ಎಂದೆನಿಸಿಕೊಂಡ ಕಾವೇರಿ ತೀರದ ತಂಜಾವೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ನೂರೈವತ್ತು ವರುಷಗಳ ಕಾಲ ತಂಜಾವೂರಿನಲ್ಲಿ ಆತನ ಸಂತತಿಯವರು ರಾಜ್ಯವಾಳಿದರು. ತಂಜಾವೂರು ರಾಜ್ಯವು ಏಳು ಸಾವಿರ ಚದುರ ಮೈಲಿನ ವಿಸ್ತಾರದಿಂದ ಕೂಡಿದ ರಾಜ್ಯವೆನಿಸಿ ಕೊಂಡಿತ್ತು.

ಔರಂಗಜೇಬನ ಕಾಲದಲ್ಲಿ ಅವ್ಯಾಹತವಾಗಿ ಇಪ್ಪತ್ತೆರಡು ವರುಷಗಳ ಕಾಲ ಹೋರಾಟ ಮಾಡಿ ಮೊಗಲರು ದಕ್ಷಿಣದ

ಜಿಂಜಿಯನ್ನು ವಶಪಡಿಸಿಕೊಂಡರು. ಈ ಕಾಲಾವಧಿಯಲ್ಲಿಯೇ ವೆಂಕೋಜಿ ರಾಜೇ ಭೋಸ್ಲೆ ೧೬೭೬ರಲ್ಲಿ ತಂಜಾವೂರು ರಾಜ್ಯದ ಸಂಸ್ಥಾಪಕನೆಂದೆನಿಸಿಕೊಂಡ. ಮುಂದೆ ಈ ರಾಜ್ಯವು ೧೮೫೦ ರಲ್ಲಿ ಸ್ವತಂತ್ರ ರಾಜ್ಯವೆನಿಸಿಕೊಂಡಿತು.

ತಂಜಾವೂರಿನಲ್ಲಾಳಿದ ಈ ಭೋಸ್ಲೆ ಮನೆತನದವರು ಸಂಗೀತ, ಸಾಹಿತ್ಯ, ಲಲಿತಕಲೆ ಹಾಗೂ ನಾಟಕಗಳನ್ನು ರಚಿಸುವುದರಲ್ಲಿ ಅಮೂಲ್ಯವಾದ ಪಾತ್ರ ವಹಿಸಿದರು. ವಿದ್ವಾಂಸರಿಗೆಲ್ಲ ಆಶ್ರಯದಾತ ರೆನಿಸಿಕೊಂಡರು. ಈ ಮನೆತನದ ಎರಡನೆಯ ಅರಸು ಶಹಾಜಿ ಬೋಸ್ಲೆಯ "ಪಂಚಭಾಷಾ ವಿಲಾಸ" ಎಂಬ ಕೃತಿಯಂತೂ ಪ್ರೌಢ ವ್ಯಾಂಸಗಕ್ಕೆ ತುಂಬ ಮಹತ್ವದ ಗ್ರಂಥವಾಗಿರುವುದು. ಆನಂತರ ಬಂದ ಏಕೋಜಿ ರಾಜೇ ಭೋಸ್ಲೆ ತನ್ನ ಕಾಲದಲ್ಲಿ ಕಾಳಿದಾಸನ 'ಶಾಕುಂತಲ' ನಾಟಕವನ್ನು ಮೊಟ್ಟ ಮೊದಲು ಬಾರಿ ಮರಾಠಿ ಭಾಷೆಗೆ ತರ್ಜುಮೆಗೊಳಿಸಿದನು. ಈತನಿಂದ ಮೊಟ್ಟ ಮೊದಲು ಫಾರ್ಸಿ ನಾಟಕವೂ ಸಹ ರಚಿತವಾಗಿ ಈ ಎರಡು ನಾಟಕಗಳು ರಂಗಭೂಮಿಯಲ್ಲಿ ಪ್ರದರ್ಶಿಸಲ್ಪಟ್ಟವು.

**ಕಲೆ-ಸಾಹಿತ್ಯಕ್ಕೆ ಆಶ್ರಯ ತಾಣ:** ಆದಿಲ್‌ಶಾಹಿ ರಾಜ್ಯದ ನಿವಾಸಿಗಳೆನಿಸಿದ ಅನೇಕ ವಿದ್ವಾಂಸರಿಗೆ ತಂಜಾವೂರು ಆಶ್ರಯ ಸ್ಥಾನವೆನಿಸಿತ್ತು. ಇಲ್ಲಿರುವ ಇತಿಹಾಸ ಪ್ರಸಿದ್ಧ ಬೃಹದೀಶ್ವರ ದೇವಾಲಯದ ಗೋಡೆಗಳ ಮೇಲೆಲ್ಲಾ ಕೆತ್ತಲ್ಪಟ್ಟ ಶಿಲಾಲೇಖನವನ್ನು ಅಭ್ಯಾಸ ಮಾಡಿದಾಗ ನಾರೋಪಂತ ಸೋನೋಪಂತ ಡಬೀರ್ (ಡಬೀರ್ ಇದು ಫಾರ್ಸಿ ಶಬ್ದ, ಲೇಖಕ ಎಂದು ಇದರ ಅರ್ಥ) ರಘುನಾಥ ಆದ್ಯ ಡುಂಡಿರಾಜ ವ್ಯಾಸ, ಶಾಕ್ತಮಹಾಪಂಡಿತನಾದ ಭಾಸ್ಕರರಾಯ, ಕೋನೇರಿರಾಯ, ರಘುನಾಥ, ಹನುಮಂತೆ, ತಿರುಮಲ ಹನುಮಂತೆ, ಅರಣಿಯ ಜಹಗೀರದಾರ ಕೃಷ್ಣಪಂತ, ಆನಂದ ದಳವಿ ಇವರೇ ಮೊದಲಾದವರ ಹೆಸರುಗಳು ಕಾಣಸಿಗುತ್ತವೆ. ಆದ್ಯರಿಗೆ ಶ್ರೀಮಷ್ಣದಲ್ಲಿ ಒಂದು ಬೀದಿಯೇ ವರದಾನವಾಗಿತ್ತೆಂದು

ತಿಳಿದು ಬರುತ್ತವೆ. ಅನೇಕ ಪಂಡಿತರು ಈ ಭೋಸ್ಲೆ ಮನೆತನದವರಿಂದ ಅಗ್ರಹಾರವನ್ನು ಸಂಪಾದಿಸಿದ್ದಾರೆ. ಅದರಲ್ಲಿ ಭಾಸ್ಕರಪುರ ಅಗ್ರಹಾರವನ್ನು ಇಂದಿಗೂ ಕಾಣಬಹುದಾಗಿದೆ. ಇಲ್ಲಿಯ ಪಂತಪ್ರಧಾನರೆಲ್ಲ ಉತ್ತರ ಕರ್ನಾಟಕದ ದೇಶಸ್ಥ ಬ್ರಾಹ್ಮಣರಾಗಿದ್ದರು. ಅವರನ್ನು "ಸರ್‌ಲೇಖ" ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಬೃಹದೇಶ್ವರ ಶಿಲಾಲೇಖವು ೧೬೭೬ರಿಂದ ೧೭೩೫ರವರೆಗೆ ರಾಜ್ಯವನ್ನಾಳಿದ ವೆಂಕೋಜಿಯಿಂದ ಆರಂಭಗೊಂಡು ತುಳಜೇಂದ್ರ ರಾಜನವರೆಗೆ ಸಾದ್ಯಂತ ಇತಿಹಾಸವನ್ನು ದೊರಕಿಸಿ ಕೊಡುವುದು. ತಿರುಮಲೆಯ ಶ್ರೀನಿವಾಸ ದೇವಾಲಯದಲ್ಲಿಯೂ ಶಿಲಾಲೇಖ ಕಾಣಬಹುದು. ತಮಿಳು ಹಾಗೂ ಉರ್ದು ಭಾಷೆಗಳಲ್ಲಿ ಮೊಟ್ಟ ಮೊದಲು ನಾಟಕಗಳು ರಚನೆಯಾದುದು ತಂಜಾವೂರಿನಲ್ಲಿ. ಈ ಮಾತು ತುಂಬ ಮಹತ್ವದ್ದಾಗಿರುವದು. ಈ ಮನೆತನದ ಕಾಲದಲ್ಲಿ ಸಂಗೀತ, ಸಾಹಿತ್ಯ, ಲಲಿತ ಕಲೆ, ಶಾಕ್ತ ಗ್ರಂಥಗಳು, ಅಶ್ವವಿದ್ಯೆ, ಗಜವಿದ್ಯೆ, ಜ್ಯೋತಿಷ್ಯ ಶಾಸ್ತ್ರ ಹೀಗೆ ಒಂದೇ ಎರಡೇ ಸಾವಿರಾರು ಕೃತಿಗಳು ರಚನೆಗಳಾದವು. ಅವುಗಳಲ್ಲಿ ಅನೇಕ ಗ್ರಂಥಗಳು ಈಗಾಗಲೇ ಪ್ರಕಾಶವನ್ನೂ ಹೊಂದಿವೆ.

**ಕವಿತಾ ಪ್ರೌಢಿಮೆ:** ಭೋಸ್ಲೆ ಅರಸು ಮನೆತನದಲ್ಲಿ ಗ್ರಂಥಪ್ರಿಯನಾದ ರಾಜಾ ಸರ್ಫೋಜಿರಾಯನಿಂದ ಸಂಗ್ರಹಿಸಲ್ಪಟ್ಟ ಗ್ರಂಥಗಳ ರಾಶಿಯಂತೂ ಅಪಾರವಾದುದು. ಅವುಗಳ ರಕ್ಷಣೆಗಾಗಿಯೇ ರಾಜನು "ಸರಸ್ವತಿ ಮಹಲ್" ಎಂಬ ಗ್ರಂಥಾಲಯವನ್ನೂ ಸಹ ನಿರ್ಮಾಣ ಮಾಡಿದನು. ಭಾರತದಲ್ಲಿಯೇ ಇಂಥ ಗ್ರಂಥಭಂಡಾರವು ಅಪರೂಪವೆನಿಸುವುದು. (ಈತನ ಜನನ ಕ್ರಿ.ಶ. ೧೭೭೭ ಮರಣ ೧೮೩೨).

ಸರ್ಫೋಜಿರಾಯನು ಬಹುಭಾಷಾ ವಿಶಾರದನಾಗಿದ್ದ. ಇಂಗ್ಲೀಷ್, ಫ್ರೆಂಚ್, ಜರ್ಮನ್, ಲ್ಯಾಟಿನ್, ಮರಾಠಿ, ತೆಲಗು, ಹಿಂದಿ ಹಾಗೂ ಉರ್ದು ಫಾರ್ಶಿ ಭಾಷೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವನಾಗಿದ್ದ. ಆಂಗ್ಲ ಭಾಷೆಯಲ್ಲಿ ಅನೇಕ ಕವಿತೆಗಳನ್ನು ರಚಿಸಿದ. ಈತನ ಕವಿತಾ ಪ್ರೌಢಿಮೆಯನ್ನು ಕುರಿತು ಲಾರ್ಡ್ ಬೈರನ್‌ನಷ್ಟು ಸೊಗಸಾದ

ಕವಿತೆಗಳಿವು ಎಂಬುದಾಗಿ ಅಂದಿನ ಆಂಗ್ಲ ವಿದ್ವಾಂಸರು ಅಭಿಪ್ರಾಯಪಟ್ಟಿರುವುದುಂಟು. ಷೇಕ್ಸ್‌ಪಿಯರ್ ನಾಟಕವನ್ನು ಈತನು ಆಳವಾಗಿ ಅಭ್ಯಾಸ ಮಾಡಿದ್ದ. ವಿದ್ಯಾಭ್ಯಾಸಕ್ಕೆ ಬಹು ಮಹತ್ವವನ್ನೀಯುತ್ತಿದ್ದ. ಈತನ ಕಾಲದಲ್ಲಿ ಆಯುರ್ವೇದ ವ್ಯಾಸಂಗಕ್ಕಾಗಿ "ಧನ್ವಂತರಿ ಮಹಲ್" ಎಂಬ ಸಂಸ್ಥೆ ಆರಂಭವಾಯಿತು. ಅಲ್ಲದೇ "ನಮ ವಿದ್ಯಾ ವಸಂತಮಾಲಾ" ಎಂಬ ಹೆಸರಿನ ಮುದ್ರಣಾಲಯವನ್ನೂ ಸಹ ಆರಂಭಿಸಿದ. ವಿಶ್ವದ ನಾನಾ ಭಾಗಗಳ ವಿದ್ವಾಂಸರ ಗ್ರಂಥಗಳನ್ನು ತರಿಸಿಕೊಂಡು ಅಭ್ಯಾಸ ಮಾಡುತ್ತಿದ್ದ. ತಾನು ತರಿಸಿದ ಗ್ರಂಥಗಳ ಮೇಲೆಲ್ಲಾ ಆತನ ಹಸ್ತಾಕ್ಷರ ಹಾಗೂ ಇಷ್ಟಿಗಳಿರುವುದನ್ನು ನಾವು ಕಾಣಬಹುದು. ಸರಸ್ವತಿ ಮಹಲ್ ಭಂಡಾರದಲ್ಲಿ ಶಾಸನಗಳನ್ನು ಪರಿಚಯಿಸುವಂತಹ ಸಾವಿರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿರುವುದನ್ನು ಹಾಗೂ ಅವುಗಳನ್ನು ವ್ಯವಸ್ಥಿತವಾಗಿ ಕಾದುಕೊಂಡು ಬರುವಂತೆ ಮಾಡಿರುವುದನ್ನು ನೋಡಿದರೆ ಅಚ್ಚರಿಯೆನಿಸುವದು. ಸಂಸ್ಕೃತ, ಮರಾಠಿ, ತಮಿಳು, ತೆಲಗು, ಜರ್ಮನ್, ಆಂಗ್ಲಭಾಷೆಗಳ ಸುಮಾರು ನಲವತ್ತು ಸಾವಿರ ಕೃತಿಗಳನ್ನು ನಾವು ಸರಸ್ವತಿ ಗ್ರಂಥ ಭಂಡಾರದಲ್ಲಿವೆ ಪರಿಚಯಾತ್ಮಕವಾದ ಸೂಚಿಯ ಗ್ರಂಥಗಳೂ ಕೂಡ ಸಿದ್ಧವಾಗಿರುವುವು.

ಸರ್ವೋಜಿರಾಯನು ಸಿಂಹಾಸನಾರೂಢನಾದಾಗ ಆಂಗ್ಲರು ತಂಜಾವೂರು ರಾಜ್ಯವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಈತನಿಗೆ ವರ್ಷಾಸನವನ್ನು ನಿಗದಿಪಡಿಸಿದರು. ಇದರಿಂದಾಗಿ ರಾಜ್ಯಭಾರದ ಹೊಣೆ ಆತನಿಗಿರಲಿಲ್ಲ. ಆದುದರಿಂದ ತನ್ನ ದರ್ಬಾರಿನಲ್ಲಿ ಅನೇಕ ವಿದ್ವಾಂಸರಿಗೂ, ಕಲಾವಿದರಿಗೂ ಆಶ್ರಯವನ್ನಿತ್ತಿದ್ದನು. ತನಗೆ ದೊರಕುವ ವರ್ಷಾಸನದ ಧನದಲ್ಲಿ ಹದಿನಾರು ಭಾಗಗಳನ್ನಾಗಿ ವಿಂಗಡಿಸಿ ಪ್ರತಿಯೊಂದು ಭಾಗವೂ ವ್ಯವಸ್ಥಿತ ರೀತಿಯಲ್ಲಿ ಉಪಯೋಗವಾಂತೆ ನೋಡಿಕೊಂಡ.

ಈತನ ಆಂಗ್ಲ ಗುರು ಶ್ವಾರ್ಟ್ಜ ಎಂಬುವವನಾಗಿದ್ದ ಕ್ರಿ.ಶ. ೧೭೯೮ರಲ್ಲಿ ಆತನು ಕಾಲವಾದಾಗ ಆತನ ಸ್ಮರಣಾರ್ಥವಾಗಿ ಶಿಲಾಕಂಬವನ್ನು ನಿಲ್ಲಿಸಿ ತನ್ನಿಂದ ರಚಿತವಾದ ಆಂಗ್ಲ ಪದ್ಯವನ್ನು

ಆವರಡಿಯಲ್ಲಿ ಕೆತ್ತುವಂತೆ ನೋಡಿಕೊಂಡ. ಕ್ರಿ.ಶ. ೧೮೦೩ರಲ್ಲಿ ಹೇಬರ್ ಲಾರ್ಡ್, ಫ್ಲಿಲಿಂಡಾ, ಬಿಶಪ, ಬಿಡಲ್‌ಟನ ಮೊದಲಾದವರು ಈತನ ಕಾಲದಲ್ಲಿ ತಂಜಾವೂರಿಗೆ ಬಂದು ಹೋದರೆಂದು ತಿಳಿದು ಬರುವುದು. ರಾಜಾ ಸರ್ಫೋಜಿ ರಾಜ ಭೋಸ್ಲೆಯಿಂದ ರಚಿತವಾದ ಪದ್ಯಗಳಿಗೆಲ್ಲ ಸ್ವತಃ ಆತನೇ ಸ್ವರ ಪ್ರಸ್ತಾವನೆ ಹಾಕಿದನೆಂದು ತಿಳಿದು ಬರುವುದು.

ಈತನ ಕಾಲದಲ್ಲಿ ತಂಜಾವೂರು ರಾಜ್ಯದಲ್ಲಿ ಶಾಲೆಗಳು ಆರಂಭಗೊಂಡವು. ನೇತ್ರ ಚಿಕಿತ್ಸಾ ವಿಭಾಗವನ್ನೂ ಸಹ ಆರಂಭಿಸಿದ. ಸರ್ಫೋಜಿ ರಾಜನ ಗ್ರಂಥ ಸಂಗ್ರಹಾಲಯವು ಎಂಥ ವಿದ್ವಾಂಸರನ್ನೂ ಅಚ್ಚರಿಗೊಳಿಸುವಂತಹದು. ಬೃಹದೇಶ್ವರ ದೇವಾಲಯದಲ್ಲಿ ಕೊರೆಸಲಾದ ಶಿಲಾಲೇಖ ಹಾಗೂ ಸರಸ್ವತಿ ಭಂಡಾರದಲ್ಲಿರುವ ಗ್ರಂಥಗಳ ರಾಶಿಯನ್ನು ಕುರಿತು ಅಭ್ಯಾಸ ಮಾಡಹೊರಟರೆ ಇಡೀ ಆಯುಷ್ಯವೇ ಅದಕ್ಕಾಗಿ ಮುಡಿಪಾಗಿಡುವಂತಹ ಸಾಹಸವೆಂದೆನಿಸಿಕೊಳ್ಳುವುದು.

ತಂಜಾವೂರಿನಲ್ಲಿ ಮರಾಠಾ ರಾಜ್ಯದ ಭೋಸ್ಲೆ ಮನೆತನದವರ ಆಳ್ವಿಕೆಯಲ್ಲಿ ಆದ ಕಾರ್ಯವು ಅಮೋಘವಾದುದು. ಈ ರಾಜನ ಕಾಲದಲ್ಲಿ ಶಹಾನಾಮಾ ಫಿರ್ದೋಶಿಯಾ ಎಂಬ ಗ್ರಂಥವು ದೊರೆತುದನ್ನು ಸರಸ್ವತಿ ಮಹಲಿನಲ್ಲಿ ಕಾಣಬಹುದು. ಇಂಗ್ಲೇಂಡಿನ ರಾಯಲ್ ಸೊಸೈಟಿಯವರು ಏಷಿಯಾ ಖಂಡದಲ್ಲಿ ಇಬ್ಬರಿಗೆ ಫೆಲ್ಲೋಶಿಪ್ ಕೊಡುವುದಾಗಿ ಅಂದು ನಿರ್ಧರಿಸಿದರು. ಅದರಲ್ಲಿ ಮೊದಲನೇ ಹೆಸರು ಇರಾಣದ ಶಹಾ ಎರಡನೆಯ ಹೆಸರೇ ರಾಜಾ ಸರ್ಫೋಜಿರಾಜ ಭೋಸ್ಲೆಯದಾಗಿದ್ದಿತು.

**ಸಾರಸ್ವತ ಭಂಡಾರ:** ತಂಜಾವೂರು ಬೃಹದೀಶ್ವರ ದೇವಾಲಯದ ಆವರಣದ ಒಳಗಿರುವ ಸರಸ್ವತಿ ಮಹಲ್ ಹೆಸರೇ ಸೂಚಿಸುವಂತೆ ಸಾರಸ್ವತ ಭಂಡಾರದ ಅಮೂಲ್ಯ ಸಂಗ್ರಹವನ್ನು ಒಳಗೊಂಡಿದೆ. ತಂಜಾವೂರನ್ನು ವಿಜಯನಗರದ ಅರಸರು ಆಳುತ್ತಿದ್ದ ಕಾಲದಲ್ಲಿ ಅರಮನೆ ಗ್ರಂಥ ಭಂಡಾರದ ರೂಪದಲ್ಲಿ 'ಸರಸ್ವತಿ ಮಹಲ್'

ಆರಂಭವಾಯಿತು. ಅನಂತರ ಮರಾಠರ ಆಳ್ವಿಕೆಯಲ್ಲಿ ಈ ಗ್ರಂಥ ಭಂಡಾರ ಉತ್ಕರ್ಷ ಸಾಧಿಸಿತು.

ಬೋಸ್ಲೆ ಮನೆತನದ ಇಮ್ಮಡಿ ಸರ್ಫೋಜಿರಾಯನ ಆಳ್ವಿಕೆಯಲ್ಲಿ ಈ ಗ್ರಂಥ ಭಂಡಾರ ಅದ್ಭುತವಾಗಿ ಪ್ರಗತಿ ಸಾಧಿಸಿತು. ಸರ್ಫೋಜಿರಾಯು ಸ್ವತಃ ವಿದ್ವಾಂಸನಾಗಿದ್ದ. ವಿವಿಧ ವಿಷಯಗಳಲ್ಲಿ ಜ್ಞಾನಿಯೂ ಆಗಿದ್ದ. ಆತ ದೇಶ ವಿದೇಶಗಳಲ್ಲಿ ಸಂಗ್ರಹಿಸಿದ ಅಮೂಲ್ಯ ದಾಖಲೆಗಳನ್ನು ಈ ಗ್ರಂಥ ಭಂಡಾರಕ್ಕೆ ಸೇರಿಸಿದ. ಬನಾರಸ್ ಮುಂತಾದ ಉತ್ತರ ಭಾರತದ ಸಂಸ್ಕೃತ ವಿದ್ಯಾ ಕೇಂದ್ರಗಳಿಗೆ ದಕ್ಷಿಣ ಭಾರತದಿಂದ ವಿದ್ವಾಂಸರನ್ನು ಕಳುಹಿಸಿ ಸಂಸ್ಕೃತದ ಮೌಲಿಕ ಗ್ರಂಥಗಳನ್ನು 'ಸರಸ್ವತಿ ಮಹಲ್'ಗೆ ಸೇರಿಸಲು ನೆರವಾದ. ಇಂದು ಈ ಗ್ರಂಥ ಭಂಡಾರ, ಮಹಾರಾಜ ಸರ್ಫೋಜಿ ಸರಸ್ವತಿ ಮಹಲ್ ಲೈಬ್ರರಿ ಎಂದೇ ಹೆಸರಾಗಿದೆ. ಸುಮಾರು ೩೭ ಸಾವಿರಕ್ಕೂ ಅಧಿಕ ಸಂಸ್ಕೃತ ಹಸ್ತಪ್ರತಿಗಳು ಈ ಗ್ರಂಥ ಭಂಡಾರದಲ್ಲಿದೆ. ಅವುಗಳಲ್ಲಿ ಸಂಸ್ಕೃತ ಲಿಪಿಯಲ್ಲಿ ಬರೆದಿರುವ ಕನ್ನಡ ಭಾಷೆಯ ಚರಿತ್ರೆಯೂ ಮುಖ್ಯವಾದುದು. ತೆಲುಗು, ಮರಾಠಿ, ತಮಿಳು ಭಾಷೆಗಳಲ್ಲಿ ೪೦ ಸಾವಿರಕ್ಕೂ ಅಧಿಕ ಹಸ್ತಪ್ರತಿಗಳು, ತಾಳೆಗರಿಗಳು ಇಲ್ಲಿವೆ ಇಂಗ್ಲೀಷ್, ಫ್ರೆಂಚ್, ಜರ್ಮನ್, ಇಟಲಿ, ಗ್ರೀಕ್, ಡ್ಯಾನಿಷ್ ಭಾಷೆಯ ಪುಸ್ತಕಗಳು ಸೇರಿದಂತೆ ನಲ್ವತ್ತು ಸಾವಿರಕ್ಕೂ ಅಧಿಕ ಗ್ರಂಥರಾಶಿ ಇಲ್ಲಿವೆ.

ಗ್ರಂಥಾಲಯದ ದಾಖಲೆ ಸಂಗ್ರಹ ವಿಭಾಗದಲ್ಲಿ ದಕ್ಷಿಣ ಭಾರತದ ಹಲವು ಭಾಷೆಗಳ ಪಂಡಿತರು, ವೃತ್ತಿ ಪರಿಣತರು ಕೆಲಸ ಮಾಡುತ್ತಿದ್ದಾರೆ. ಅವರು ಹಳೆಯ ಶಾಸ್ತ್ರಗ್ರಂಥಗಳನ್ನು ಹಸ್ತಪ್ರತಿಗಳನ್ನು ತಾಳ್ಮೆಯಿಂದ ಅಧ್ಯಯನ ಮಾಡಿ ಅವುಗಳನ್ನು ಇಂಗ್ಲೀಷ್ ತಮಿಳು ಭಾಷೆಗಳಿಗೆ ಅನುವಾದ ಮಾಡುತ್ತಿದ್ದಾರೆ.



# ಪಾಜಕ ಕ್ಷೇತ್ರದ ರಕ್ಷಣೆ

ಭಾರತೀಯರು ನಿಸರ್ಗವನ್ನೇ ದೇವತ್ವ ರೂಪದಲ್ಲಿ ಆರಾಧಿಸುತ್ತ ಬಂದವರು. ಆ ನಿಸರ್ಗದ ಕೊಡುಗೆಯಾಗಿ ವೇದೋಪನಿಷತ್ತುಗಳ ಸಾರವನ್ನು ವಿಶ್ವಕ್ಕೆ ಶಾಂತಿ ಮಂತ್ರವಾಗಿ ಅನುಗ್ರಹಿಸಿದರು. ಆದರೆ ಇಂದು ಅದೇ ಭಾರತೀಯರು ತಮ್ಮ ವೈಭವೋಪೇತ ಜೀವನ ಸಾಗಿಸಲು ನಿಸರ್ಗಕ್ಕೆ ದಾನವರಂತೆ ಕೊಡಲಿಯ ಪೆಟ್ಟನ್ನು ಹಾಕುತ್ತಲಿರುವದು ಬಹು ಶೋಚನೀಯ.

ವಿಶ್ವಕ್ಕೆ ಭಕ್ತಿಪಂಥದ ದರ್ಶನವನ್ನಿತ್ತ ಮಹನೀಯರಲ್ಲಿ ಕನ್ನಡ ನಾಡಿನ ನೆಲದಲ್ಲಿ ಹುಟ್ಟಿ ಬಂದವರೆಂದರೆ ಶ್ರೀ ಬಸವೇಶ್ವರರು ಹಾಗೂ ಮಧ್ವಾಚಾರ್ಯರು. ಅದೇ ರೀತಿ ಆದ್ಯ ಶಂಕರಾಚಾರ್ಯರು ಹಾಗೂ ರಾಮಾನುಜಾಚಾರ್ಯರೂ ಸಹ ಕೇರಳದಿಂದ, ತಮಿಳುನಾಡಿನಿಂದ ಈ ನಾಡನ್ನೇ ಹುಡುಕಿಕೊಂಡು ಬಂದು ತಾವು ನಂಬಿದ ದರ್ಶನ ಪ್ರಚಾರಕ್ಕೆ ಕರ್ನಾಟಕವನ್ನೇ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡರು. ಅದೇ ರೀತಿ ಸತ್ಯ, ಅಹಿಂಸೆಯೇ ಮೋಕ್ಷಕ್ಕೆ ಪರಮ ಸಾಧನವೆಂದು ನಂಬಿದ ರಾಜಾಧಿರಾಜ ಬಾಹುಬಲಿಯೂ ಸಹ ಈ ನಾಡನ್ನೇ ತಮ್ಮದನ್ನಾಗಿ ಆರಿಸಿಕೊಂಡರು.

ಮಹಾನುಭಾವರಾದ ಬಸವೇಶ್ವರರು ಕಣ್ಮರೆಯಾದ

ಸ್ಥಳವನ್ನುಳಿಸಿಕೊಳ್ಳಲು ರಾಜ್ಯಸರಕಾರವು ಕೂಡಲಸಂಗಮ ಪ್ರಾಧಿಕಾರವನ್ನೇ ರಚಿಸಬೇಕೆಂಬ ಹಂಬಲ ತಾಳಿತು. ನಮ್ಮ ಧಾರ್ಮಿಕ ದತ್ತಿ ಅಧಿಕಾರಿಗಳು ಬಾಗೇವಾಡಿ, ಬಸವಕಲ್ಯಾಣ, ಕೂಡಲ ಸಂಗಮ ಮೊದಲಾದ ಭಾಗಗಳಿಗೆ ಭೇಟಿಯನ್ನಿತ್ತಾಗ ಮಹಾನುಭವರಾದ ಶ್ರೀ ಬಸವೇಶ್ವರರ ವಿಚಾರದಲ್ಲಿ ನಮ್ಮ ಶರಣರು ಎಂಥ ಕಳಕಳಿಯನ್ನು ಹೊಂದಿರುವರಲ್ಲ ಎಂಬ ಮಾತಿನ ಪ್ರತ್ಯಕ್ಷ ಅನುಭವವು ಪಡೆಯುವಂತಾಯಿತು. ನಮ್ಮ ಜನರ ಸಂಸ್ಕೃತಿ ಸಂಸ್ಕಾರಗಳ ಬಗ್ಗೆ ಅವಿಸ್ಮರಣೀಯವಾದ ಆನಂದಾನುಭವವಾಯಿತು.

ಇತ್ತೀಚೆಗೆ ಶ್ರವಣಬೆಳಗೋಳದ ಸುತ್ತಮುತ್ತಲೂ ನಡೆಸಲಾಗುತ್ತಿದ್ದ ಗಣಿಕೈಗಾರಿಕೆಯಿಂದಾಗಿ ಬಾಹುಬಲಿ ಶ್ರೀ ಗೊಮ್ಮಟೇಶ್ವರನ ವಿಗ್ರಹಕ್ಕೆ ಎಲ್ಲಿ ಧಕ್ಕೆ ತಗಲುವದೋ ಎಂಬ ಭಯದಿಂದ ೧೯೯೬, ೧೯೯೭ ಹಾಗೂ ೧೯೯೮ರವರೆಗೆ ಭಾರತಾದ್ಯಂತ ವಾಸಿಸುತ್ತಿದ್ದ ಬಾಹುಬಲಿಯ ಭಕ್ತರು ಪ್ರತಿದಿನವೂ ನೂರಾರು ಸಂಖ್ಯೆಯಲ್ಲಿ ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳಿಗೆ ತಮ್ಮ ಆತಂಕವನ್ನು ವ್ಯಕ್ತಪಡಿಸತೊಡಗಿದರು. ತಕ್ಷಣ ಈ ಕಾರ್ಯ ನಿಲ್ಲಿಸುವಂತೆ ಪ್ರಾರ್ಥನಾ ಪತ್ರಗಳನ್ನು ಬರೆಯತೊಡಗಿದರು. ಈ ರೀತಿಯಲ್ಲಿ ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚು ಪ್ರಾರ್ಥನಾ ಪತ್ರಗಳು ಸರಕಾರದ ಅವಗಾಹನೆಗೆ ಬರುವಂತಾದಾಗ ಗೊಮ್ಮಟೇಶ್ವರನ ಸುತ್ತಮುತ್ತಲಿನ ನಾಲ್ಕು ಕಿ.ಮಿ. ಪ್ರದೇಶದಲ್ಲಿ ಈ ಗಣಿಕೈಗಾರಿಕೆಯು ನಡೆಸದಂತೆ ಸರಕಾರದಿಂದ ಆದೇಶವು ಹೊರಬರುವಂತಾಯಿತು.

ಪಾಜಕ ಸ್ಥಳವು ಮಂಗಳೂರು ಜಿಲ್ಲೆ, ಉಡುಪಿ ತಾಲ್ಲೂಕಿನ ಒಂದು ಗ್ರಾಮ. ದ್ವೈತ ದರ್ಶನವನ್ನಿತ್ತ ಮಧ್ವಾಚಾರ್ಯರಿಗೆ ಜನ್ಮವಿತ್ತ ಸ್ಥಳವಾದುದರಿಂದ ಮುಂದೆ ಆ ಗ್ರಾಮವು ಪಾಜಕ ಕ್ಷೇತ್ರವಾಗಿ ಪ್ರಸಿದ್ಧಿಗೆ ಬರುವಂತಾಯಿತು. ಮಧ್ವಾಚಾರ್ಯರು ಉಡುಪಿಯ ಕೃಷ್ಣನ ಪೂಜೆಗಾಗಿ ಎಂಟು ಮಠವನ್ನು ಸ್ಥಾಪಿಸಿದರು. ಆ ಎಂಟು ಮಠಗಳಲ್ಲಿ ಪಾಜಕ ಕ್ಷೇತ್ರವು ಕಾಣಿಯಾರು ಮಠಕ್ಕೆಸೇರಿದ ಭಾಗವೆನಿಸಿಕೊಂಡಿತು. ಶ್ರೀ

ಗುಂಡೂರಾಯರು ಮುಖ್ಯಮಂತ್ರಿಗಳಾಗಿದ್ದ ಸಮಯದಲ್ಲಿ ಶ್ರೀ ಸುಧೀಂದ್ರರಾವ್ ಕಸಬೆ ಧಾರ್ಮಿಕ ದತ್ತಿ ಇಲಾಖೆಯ ಸಚಿವರಾಗಿದ್ದರು. ವಿಧಾನ ಪರಿಷತ್ತಿನ ವಿಪ್ ಎಂದೆನಿಸಿಕೊಳ್ಳುತ್ತಿದ್ದ ಶ್ರೀ ಬಿ.ಜಿ. ಭಗವಾನರು ಹಾಗೂ ಈ ಲೇಖಕ ಮೂವರು ಸೇರಿಕೊಂಡು ಮೊದಲು ಪಾಜಕ ಕ್ಷೇತ್ರಕ್ಕೆಹೋಗಿ ಬಂದೆವು. ಅಂದು ಸಾಯಂಕಾಲದ ಬಹಿರಂಗ ಸಭೆಯಲ್ಲಿ ಶ್ರೀ ಬಿ.ಜಿ. ಭಗವಾನರು ತಾವು ವಿದೇಶ ಪ್ರವಾಸದಲ್ಲಿದ್ದಾಗ ಮ್ಯಾಕ್ಸ್ ಮುಲ್ಲರನು ಹುಟ್ಟಿದ ಸ್ಥಳಕ್ಕೆ ಭೇಟಿಯನ್ನಿತ್ತಿದ್ದಾಗ ಅಲ್ಲಿಯ ಪ್ರಜೆಗಳು ಆ ಮಹಾನುಭಾವರ ಸ್ಮಾರಕವನ್ನು ಹೇಗೆ ರಕ್ಷಿಸಿಕೊಂಡು ಬಂದಿದ್ದಾರೆ ಎಂಬುದನ್ನು ವಿವರವಾಗಿ ಬಿಡಿಸಿ ಹೇಳಿ ಅದೇ ರೀತಿಯಲ್ಲಿ ಮಧ್ವಾಚಾರ್ಯರ ಜನ್ಮಸ್ಥಳವಾದ ಪಾಜಕ ಕ್ಷೇತ್ರವೂ ಸಹ ಪರಿವರ್ತನಗೊಳ್ಳಬೇಕು. ಪಾಜಕ ಕ್ಷೇತ್ರದ ಇಂದಿನ ವಾತಾವರಣದಿಂದ ಕರ್ನಾಟಕವೇ ತಲೆಬಾಗಿಸುವಂತಾಗಿದೆ ಎಂಬುದಾಗಿ ಕಳಕಳಿಯನ್ನು ವ್ಯಕ್ತಪಡಿಸಿದರು. ಮಾರನೆಯ ದಿನ ಪ್ರಚಾರ ಮಾಧ್ಯಮದಲ್ಲಿ ಈ ವಿಚಾರವೇ ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿತು.

ಶ್ರೀ ಮಧ್ವಾಚಾರ್ಯರ ತತ್ತ್ವ ಪ್ರತಿಪಾದನೆಗಾಗಿ ನಮ್ಮ ನಾಡಿನಲ್ಲಿ ಇಂದು ಸುಮಾರು ಇಪ್ಪತ್ನಾಲ್ಕು ಪೀಠಗಳಿವೆ. ಅಖಿಲಭಾರತ ಮಟ್ಟದಲ್ಲಿ ದ್ವೈತ ಸಂಪ್ರದಾಯವಾದಿಗಳ ಸಂಖ್ಯೆಯೂ ಸಹ ಲಕ್ಷೋಪಲಕ್ಷದಷ್ಟಿದೆ. ಆದರೂ ಸಹ ಅಲ್ಲಿ ನಡೆಸಲಾಗುತ್ತಿರುವ ಗಣಿಕೈಗಾರಿಕೆಯಿಂದಾಗಿ ಆಚಾರ್ಯರ ಜನ್ಮಸ್ಥಳವೆನಿಸಿದ ಪಾಜಕ ಕ್ಷೇತ್ರವು ಕುಸಿಯತೊಡಗಿದೆ ಎಂಬ ಕೊರಗು ಕೇವಲ ಪಲಮಾರು ಮಠದ ಹಿರಿಯರಾದ ಶ್ರೀ ವಿದ್ಯಾಮಾನ್ಯ ತೀರ್ಥರು ಹಾಗೂ ಪೇಜಾವರ ಮಠದ ವಿಶ್ವೇಶತೀರ್ಥರು ಮತ್ತು ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದತೀರ್ಥರಿಂದ ಮಾತ್ರ ಕೇಳಿಬರತೊಡಗಿದೆ. ಈ ಮಹನೀಯರು ಪಾಜಕ ಕ್ಷೇತ್ರದ ರಕ್ಷಣೆಗಾಗಿ ಸರ್ವತ್ಯಾಗಕ್ಕೆ ಸಿದ್ಧರೆಂಬುದಾಗಿ ಬಹಿರಂಗವಾಗಿ ಘೋಷಿಸಿದ್ದಾರೆ. ಸುದೈವವೆಂಬಂತೆ ಇಂದು ವಿಧಾನಪರಿಷತ್ತಿನ ವಿರೋಧಪಕ್ಷದ ನಾಯಕರಾದ ಶ್ರೀ ಹೆಚ್.ಕೆ. ಪಾಟೀಲರೂ ಕೂಡ ಪಾಜಕ ಕ್ಷೇತ್ರಕ್ಕೆ ಭೇಟಿಯನ್ನಿತ್ತು ಬಂದಿದ್ದಾರೆ.

ಸೃಷ್ಟಿಕರ್ತನಾದ ಭಗವಂತನು ಮಾನವನಿಗೆ ಸ್ಮರಣ ಶಕ್ತಿಯ ವರದಾನವಿತ್ತಿದ್ದಾನೆ. ಅದರೊಂದಿಗೆ ಕನ್ನಡ ನಾಡಿನ ಐತಿಹಾಸಿಕ ಹಾಗೂ ಸಾಂಸ್ಕೃತಿಕವೆನಿಸಬಹುದಾದ ಅನೇಕ ಪ್ರಾಚೀನ ಐತಿಹಾಸಿಕ ಸ್ಥಳಗಳನ್ನೂ ಸಹ ಒದಗಿಸಿಕೊಟ್ಟಿದ್ದಾನೆ. ಬಸವೇಶ್ವರರು ಕಣ್ಮರೆಯಾದ ಕೂಡಲ ಸಂಗಮವನ್ನುಳಿಸಿಕೊಳ್ಳಲು ಪ್ರಯತ್ನಿಸುವಂತೆ, ಗೊಮ್ಮಟೇಶ್ವರನ ವಿಗ್ರಹಕ್ಕೆ ಬಾಧೆ ತಟ್ಟದಂತೆ ಹೇಗೆ ಪ್ರಯತ್ನಗಳಾಗುತ್ತಿವೆಯೋ ಅದೇ ರೀತಿಯಲ್ಲಿ ಪಾಜಕ ಕ್ಷೇತ್ರವನ್ನುಳಿಸಿಕೊಳ್ಳಲು ಕನ್ನಡಿಗರೆಲ್ಲರೂ ಒಂದಾಗಿ ಹೋರಾಟ ನಡೆಸುವ ಕಾಲವು ಸನ್ನಿಹಿತವಾಗಿದೆ ಎಂದೆನಿಸತೊಡಗಿದೆ. ನಮ್ಮ ಸಂಸ್ಕೃತಿಯ ಪರಂಪರೆಯನ್ನು ರಕ್ಷಿಸಿಕೊಳ್ಳುವ ವಿಚಾರದಲ್ಲಿ ಯಾವ ಭೇಧಭಾವವಿಲ್ಲದೆ ಪ್ರಯತ್ನಗಳಾಗಬೇಕಾಗಿದೆ. ಕಾಶ್ಮೀರದಲ್ಲಿಯ ಹಜರತ್ ಬಾಲ ವಿಚಾರದಲ್ಲಿ ಎಂಥ ಘರ್ಷಣೆಗಳಾದವೆಂಬುದನ್ನು ನಾವು ಮರೆಯುವಂತಿಲ್ಲ.



## ಶ್ರೀ ಆದ್ಯ ರಾಮಾಚಾರ್ಯರ ಐತಿಹಾಸಿಕ ಕಾದಂಬರಿಗಳು

| | | | |
|---|---|---|---|
| ೧. | ರಂಭಾ | ಎರಡು ಸಲ ಮುದ್ರಣ | ೧೯೮೦ |
| ೨. | ಭವಾನಿ | ” | ೧೯೮೪ |
| ೩. | ಶ್ರೀದರ್ಶನ | ” | ೧೯೯೦ |
| ೪. | ಶ್ರೀಸಮರ್ಥ | ” | ೧೯೯೧ |
| ೫. | ಸೂರ್ಯಾಸ್ತ | ” | ೧೯೯೧ |
| ೬. | ವಿಜಾಪುರದ ಪತನ | ” | ೧೯೯೦ |
| ೭. | ಶಂಭೂ | ” | ೧೯೯೨ |
| ೮. | ವಿಕ್ರಾಂತ ಕೇಸರಿ | ” | ೧೯೯೨ |
| ೯. | ಮಾತೃಛಾಯಾ | ” | ೧೯೯೨ |
| ೧೦. | ಹನುಮದ್ಧ್ವಜ ಹಾರಿತು | ” | ೧೯೯೦ |
| ೧೧. | ರಾಜದ್ರೋಹಿ ರಘುನಾಥರಾವ್ | | ೧೯೯೬ |
| ೧೨. | ಪುಂಢರೀಕ ವಿಠ್ಠಲ | | ೧೯೮೯ |
| ೧೩. | ಶ್ರೀ ಕ್ಷೇತ್ರ ತಿರುಪತಿ | | ೧೯೮೫ |
| | (ಆಂಗ್ಲ ಭಾಷೆಗೆ ತರ್ಜುಮೆ ಆಗಿದೆ) | | ೧೯೮೭ |
| ೧೪. | ಶ್ರೀ ಕೃಷ್ಣ ದ್ವಾರಕಾ | | ೧೯೮೫ |
| ೧೫. | ಶುಭಂ ಭವತು | | ೧೯೯೬ |

## ಶ್ರೀ ಆದ್ಯ ರಾಮಾಚಾರ್ಯರ ಪೌರಾಣಿಕ ಕಾದಂಬರಿಗಳು

| | | |
|---|---|---|
| ೧೬. | ರಾಧೇಯ (ಆರು ಸಲ ಮುದ್ರಣಗೊಂಡಿದೆ)<br>ಕರ್ನಾಟಕ ರಾಜ್ಯ ಸಾಹಿತ್ಯ<br>ಅಕಾಡೆಮಿಯಿಂದ ಬಹುಮಾನ ಪಡೆದಿದೆ. | ೧೯೯೦ |
| ೧೭. | ಧನಂಜಯ (ಮೂರು ಸಲ ಮುದ್ರಣಗೊಂಡಿದೆ) | ೧೯೯೦ |
| | (ಆಂಗ್ಲ ಭಾಷೆಗೆ ತರ್ಜುಮೆಗೊಂಡಿದೆ) | ೧೯೯೨ |
| ೧೮. | ಆಚಾರ್ಯ ದ್ರೋಣ (ಎರಡು ಸಲ ಮುದ್ರಣ)<br>(ಮಲೆಯಾಳ ಭಾಷೆಗೆ ತರ್ಜುಮೆಗೊಂಡಿದೆ) | ೧೯೯೨ |

## ಶ್ರೀ ಆದ್ಯ ರಾಮಾಚಾರ್ಯರ ಸಾಮಾಜಿಕ ಕೃತಿಗಳು

## ಶ್ರೀ ಆದ್ಯ ರಾಮಾಚಾರ್ಯರ ಸಂಪಾದಿತ ಕೃತಿಗಳು

೪೪. ಸಂಸ್ಕೃತಿ ಸಂಭ್ರಮ (ಆರು ವಾರ್ಷಿಕ ಸಂಚಿಕೆಗಳು) ೧೯೮೬
೪೫. ಕರ್ನಾಟಕ ರಾಜ (ಐದು ವಾರ್ಷಿಕ ಸಂಚಿಕೆಗಳು) ೧೯೬೭
೪೬. ಮಂತ್ರಾಲಯ ಕಲ್ಯಾಣ ಮಂಟಪ (ವಿಶೇಷ ಸಂಚಿಕೆ) ೧೯೯೫
೪೭. ತಿರುಮಲೆ ಕಲ್ಯಾಣ ಮಂಟಪ (ವಿಶೇಷ ಸಂಚಿಕೆ) ೧೯೯೩
೪೮. ಕೌಜಲಗಿ ಹನುಮಂತರಾಯರು ೧೯೯೫
೪೯. ಮಂಗಳವೇಢೆ ಶ್ರೀನಿವಾಸರಾಯರು ೧೯೯೫

೧೯೯೭ - ಐತಿಹಾಸಿಕ ಕಾದಂಬರಿ - ಮುದ್ರಣದಲ್ಲಿ

೪೯. ಶ್ರೀಮಂತ ತೇಜಸ್ವಿ ಮಾಧವರಾವ್ ಪೇಶ್ವೆ ೧೯೯೭

## ಶ್ರೀ ಆದ್ಯ ರಾಮಾಚಾರ್ಯರುರಿಗಾದ ಸನ್ಮಾನಗಳು

೧೯೯೧ - ಕರ್ನಾಟಕ ರಾಜ್ಯ ಸಾಮಾಜಿಕ ಹಿತರಕ್ಷಣೆ ಮತ್ತು ಸಾಂಸ್ಕೃತಿಕ ಸಂಘ, ಸಾಹಿತ್ಯ ಚಿಂತಾಮಣಿ ಪ್ರಶಸ್ತಿ
೧೯೯೧ - ಪೇಜಾವರ ವಿಶ್ವೇಶತೀರ್ಥರಿಂದ ವಿದ್ಯಾಭೂಷಣ ಪ್ರಶಸ್ತಿ
೧೯೯೦ - ಜ್ಞಾನಜ್ಯೋತಿ ಕಲಾಮಂದಿರ, ಬೆಂಗಳೂರು, ಇವರಿಂದ ಕನ್ನಡ ಕುಲಭೂಷಣ
೧೯೯೨ - ಪುತ್ತಿಗೆ ಮಠಾಧೀಶರಿಂದ ದಾಸವಾಂಗ್ಮಯ ಭೂಷಣ
೧೯೯೩ - ಅಖಿಲಕರ್ನಾಟಕ ಲೇಖಕರ ಸಂಘ ಬೆಂಗಳೂರು, ಪಾಂಡವಪುರ ಪ್ರಶಸ್ತಿ ಪತ್ರ.

# ಉಪಾಸನಾ ವಸ್ತುಗಳ ಶಾಸ್ತ್ರೀಯ ವಿಶ್ಲೇಷಣೆ (ಸಾಲಿಗ್ರಾಮಗಳು)

ಪ್ರಖ್ಯಾತ ವಿದ್ವಾಂಸರಾಗಿರುವ ಆದ್ಯ ರಾಮಾಚಾರ್ಯರು ತಮ್ಮ ೭೦ನೆಯ ವಯಸ್ಸಿನಲ್ಲಿ ರಚಿಸಿದ ಐವತ್ತೆರಡನೆಯ ಕೃತಿಯಿದು. ಮಾನವನ ಆಧ್ಯಾತ್ಮಿಕ ಏಳಿಗೆಗೆ ನೆರವಾಗುವ ಓಂಕಾರ ನಾದದ ಮಹಿಮೆ, ಸನಾತನ ಸಂಪ್ರದಾಯದವರಿಗೆ ಸಹಯಕವಾಗುವ ಶಂಖ, ಸಾಲಿಗ್ರಾಮ ಹಾಗೂ ತುಳಸಿ ಇವುಗಳ ಮಹಿಮೆಯನ್ನು ಆಧಾರಸಹಿತವಾಗಿ ಲೇಖಕರು ತುಂಬಾ ಉಪಯುಕ್ತವಾದ ಈ ಕೃತಿಯಲ್ಲಿ ವಿವರಿಸಿದ್ದಾರೆ. ಉಪನಿಷತ್ತು, ಪುರಾಣಗಳು, ಹಿಂದೀ ಗ್ರಂಥಗಳು ಮೊದಲಾದವುಗಳ ಆಧಾರದಿಂದ ಕೂಲಂಕಷವಾಗಿ ಚರ್ಚಿಸಿ, ಎಲ್ಲರಿಗೂ ತಿಳಿಯುವಂತೆ ಸರಳ, ಸುಲಲಿತ ಭಾಷೆಯಲ್ಲಿ ನಿರೂಪಿಸಿದ್ದಾರೆ.

ಆದ್ಯ ರಾಮಾಚಾರ್ಯರು ಈಗಾಗಲೇ, ಜೈಭವಾನಿ, ಶ್ರೀ ಸಮರ್ಥ, ಸೂರ್ಯಾಸ್ತ ಮೊದಲಾದ ಐತಿಹಾಸಿಕ ಕಾದಂಬರಿಗಳನ್ನೂ, ರಾಧೇಯ, ಧನಂಜಯ ಆಚಾರ್ಯದ್ರೋಣ, ಪಾಂಚಾಲಿ ಮೊದಲಾದ ಪೌರಾಣಿಕ ಕಾದಂಬರಿಗಳನ್ನು ಸಮರ್ಥ ರೀತಿಯಿಂದ ರಚಿಸಿ, ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ.

ಪ್ರಸ್ತುತ ಕೃತಿಯಲ್ಲಿ ಉಪಾಸನಾ ಕ್ರಮದಲ್ಲಿ ಬಳಕೆಯಿರುವ ಶಂಖ, ತುಳಸಿ, ಸಾಲಿಗ್ರಾಮ ಮೊದಲಾದವುಗಳ ಮಹತ್ವವು, ಆಸ್ತಿಕರಿಗೂ- ಪುರೋಹಿತರಿಗೂ ಎಷ್ಟೋ ಕಡೆಗೆ ತಿಳಿದಿರುವುದಿಲ್ಲ. ಕೇವಲ ಯಾಂತ್ರಿಕವಾಗಿ ಪೂಜೆ-ಪುನಸ್ಕಾರಗಳು ಅನೇಕ ಸಲ ನಡೆದು ಬಿಡುತ್ತವೆ. ಹಾಗೆ ಆಗದೆ, ಅವುಗಳ ನಿಜಸ್ವರೂಪ, ಮೂಲ ಉದ್ದೇಶ, ಪ್ರಸ್ತುತತೆಗಳು ಸಾಮಾನ್ಯರಿಗೆ ತಿಳಿಯಲೆಂಬ ಸದುದ್ದೇಶದಿಂದ ರಾಮಾಚಾರ್ಯರು ಈ ಗ್ರಂಥ ಬರೆದಿದ್ದಾರೆ. ಸಾಮಾನ್ಯವೆಂದು ತಿಳಿದುಕೊಂಡಿರುವ ಶಂಖ ಮೊದಲಾದವುಗಳಲ್ಲಿ ಅಸಂಖ್ಯ ಪ್ರಕಾರಗಳಿವೆ ಎಂಬುದನ್ನು ಕನ್ನಡದಲ್ಲಿ ಬಹುಶಃ ಮೊದಲನೆಯ ಸಲ ಇಲ್ಲಿ ವಿವರಿಸಲಾಗಿದೆ.

ಪ್ರಾರಂಭದಲ್ಲಿ, ಓಂಕಾರ ಮಹಿಮೆಯನ್ನು ವರ್ಣಿಸುತ್ತ ಸರ್ವಶಬ್ದಗಳಿಗೂ, ನಾದಕ್ಕೂ ಓಂಕಾರವೇ ಮೂಲ ಎಂದು ಹೇಳಲಾಗಿದೆ. ಅದು ಪ್ರಣವಮಂತ್ರ. ಪೂಜಾ ಪ್ರಾರಂಭಕಾಲದಲ್ಲಿ ಓಂಕಾರವೇ ಮೊದಲು. ಓಂಕಾರವೆಂದರೆ, ತ್ರಯೀ ವಿದ್ಯೆಯ ಸಾರವೆನಿಸುತ್ತದೆ. ಓಂಕಾರವು ಬ್ರಹ್ಮ ಸ್ವರೂಪವಾಗಿದೆ. ಈ ಮಾತನ್ನೇ "ಓಂ ಇತ್ಯೇಕಾಕ್ಷರಂ ಬ್ರಹ್ಮ" ಎಂದಿದ್ದಾರೆ. ವೇದಗಳ ಅಭ್ಯಾಸದಿಂದ ಸ್ವರ್ಗ

ಸತ್ಪ್ರಯೋಗವಾದರೆ, ಓಂಕಾರದ ಬಲದಿಂದ ಅಮೃತತ್ವವನ್ನು ಪಡೆಯಬಹುದು. ಓಂಕಾರದಲ್ಲಿ ಅಕಾರ, ಉಕಾರ, ಮಕಾರ ಹೀಗೆ ಮೂರು ವರ್ಣಗಳಿವೆ. ಇವುಗಳಲ್ಲಿ ಸಮಸ್ತ ವಿಶ್ವದ ಉತ್ಪತ್ತಿ, ಸ್ಥಿತಿ, ಲಯಗಳನ್ನು ಅರಿತುಕೊಳ್ಳಬಹುದು.

ಸಾಲಿಗ್ರಾಮದ ಉತ್ಪತ್ತಿ ಹಾಗೂ ಮಹಿಮೆಯನ್ನು ಲೇಖಕರು ಆಧಾರ ಸಹಿತವಾಗಿ, ವಿಸ್ತಾರವಾಗಿ ನಿರೂಪಿಸಿದ್ದಾರೆ. ಗಂಡಕೀ ನದಿಯ ಉತ್ತರ ದಿಕ್ಕಿನಲ್ಲಿ ಗಿರಿರಾಜನೆಂಬ ಹೆಸರಿನಿಂದ ಗುರುತಿಸಲ್ಪಡುವ, ಹಿಮವತ್ಪರ್ವತದ ದಕ್ಷಿಣ ಭಾಗದಲ್ಲಿ ಒಂದು ಪವಿತ್ರ ಸ್ಥಳವಿದೆ. ಆ ಸ್ಥಳದಲ್ಲಿ ಸಾಕ್ಷಾತ್ ವಿಷ್ಣುವಿನ ವಾಸಸ್ಥಾನವಿದೆ ಎಂಬ ನಂಬಿಕೆ ಇದೆ. ಅಲ್ಲಿ, ವಿಶೇಷ ಪುಣ್ಯ ಫಲವನ್ನೀಯುವ ವಿಷ್ಣುರೂಪಗಳಿಂದ ಕೂಡಿದ ನಾನಾ ಸಾಲಿಗ್ರಾಮಗಳನ್ನು ಕಾಣಬಹುದು. ಸಾಲಿಗ್ರಾಮಗಳು ಹೊಂದಿರುವ ಚಕ್ರಗಳ ಸಂಖ್ಯೆ ಹಾಗೂ ಆಕಾರಗಳಿಂದ ಆ ಸಾಲಿಗ್ರಾಮದಲ್ಲಿ ಸಾನ್ನಿಧ್ಯವಿರುವ ದೇವತೆಗಳ ವಿವರ ತಿಳಿಯಬಹುದು. ಅವುಗಳ ಆರಾಧನೆಯಿಂದ ಉಂಟಾಗುವ ಫಲವೂ ಕೂಡ ಭಿನ್ನ ಭಿನ್ನ ರೀತಿಯಲ್ಲಿರುತ್ತದೆ. ವಿಷ್ಣು ಸಾನಿಧ್ಯ ಮಾತ್ರವಲ್ಲದೆ, ದತ್ತಾತ್ರೇಯ-ಷಣ್ಮುಖ-ಹಂಸ-ಸದ್ಯೋಜಾತಾದಿ ಶಿವಸಾನ್ನಿಧ್ಯವೂ ಸಾಲಿಗ್ರಾಮಗಳಲ್ಲಿ ಇರುತ್ತದೆಂಬ ಹೊಸ ವಿಷಯವನ್ನು ಲೇಖಕರು ಬೆಳಕಿಗೆ ತಂದಿರುವರು.

ತುಳಸಿಯ ಮಹಿಮೆಯನ್ನು ಬಣ್ಣಿಸುತ್ತ, ಎಲ್ಲಿ ತುಳಸೀ ವೃಕ್ಷದ ವನವು ಹಬ್ಬಿದೆಯೋ, ಅಲ್ಲಿ ಶ್ರೀ ಹರಿಯು ವಾಸಮಾಡುತ್ತಾನೆ ಎಂಬ ನಂಬಿಕೆ ಇದೆ. ಮುತ್ತು-ರತ್ನಗಳ ಹಾರಕ್ಕಿಂತ, ತುಳಸಿಯ ಮಾಲೆ ಶ್ರೀ ಹರಿಗೆ ಅತ್ಯಂತ ಪ್ರಿಯವಾದುದು. ಭಾರತೀಯರ ನಿತ್ಯಜೀವನದಲ್ಲಿ ತುಳಸೀ ವೃಕ್ಷವು ದೇವಪ್ರಜ್ಞೆ, ಧರ್ಮಪ್ರಜ್ಞೆ, ಸುಖ-ಶಾಂತಿಗಳನ್ನೀಯುವ ಮಹಾಸಂಜೀವಿನಿ ಎಂದು ಹೇಳಬಹುದಾಗಿದೆ. ಆಯುರ್ವೇದದಲ್ಲಿ ಕೂಡ, ತುಳಸಿ ಅತ್ಯುತ್ತಮ ಔಷಧಿಗಳಲ್ಲಿ ಅಗ್ರಗಣ್ಯವಾಗಿದೆ. ಕೊನೆಗೆ, ಸಮುದ್ರಗರ್ಭದಿಂದ ಪ್ರಾಪ್ತವಾದ ಶಂಖವು ಭಾರತೀಯರ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಮಾತ್ರ ಮಹತ್ವ ಪೂರ್ಣವಾಗಿರದೆ, ವೈಜ್ಞಾನಿಕ ಲೋಕದಲ್ಲಿಯೂ ಅದು ತನ್ನ ಮಹತಿಯನ್ನು ಬೆಳೆಸಿಕೊಂಡಿದೆ. ಎಂದು ಲೇಖಕರು ವಿವರಿಸಿದ್ದಾರೆ. ಶಂಖಧ್ವನಿಯು ಪರಮಮಂಗಲಕರವಾದುದು. ಒಟ್ಟಿನಲ್ಲಿ ಶಂಖ, ತುಳಸಿಗಳ ಪೂಜೆ ಕೇವಲ ಮೂಢನಂಬಿಕೆಯದಲ್ಲ, ಶಾಸ್ತ್ರೀಯವಾಗಿಯೂ, ಇಂದಿನ ವೈಜ್ಞಾನಿಕ ದೃಷ್ಟಿಗೆ ಸಮ್ಮತವಾಗುವಂತೆಯೂ ಈ ವಿಷಯವು ಇರುತ್ತದೆ ಎಂಬುದನ್ನು ಲೇಖಕರು ಈ ಕೃತಿಯಲ್ಲಿ ಓದುಗರಿಗೆ ಮನಗಾಣಿಸಿಕೊಟ್ಟಿದ್ದಾರೆ.

ಪ್ರೊ. ಜಿ.ಡಿ. ನಾಡಕರ್ಣಿ

# ಧನಂಜಯ

ಮನಸ್ಸನ್ನು ಉನ್ನತ ಸ್ಥಿತಿಗೇರಿಸಿ ಮಾನವನ ಹಿತವನ್ನು ಸಾಧಿಸುವುದೇ ಸಾಹಿತ್ಯ. ಜನರ ಇಷ್ಟಕ್ಕಾಗಿಯೇ ಸಾಹಿತ್ಯ ರಚನೆಯಾದರೆ ಧರ್ಮ ಸಂರಕ್ಷಣೆ ಹಾಗೂ ಸಮಾಜದ ಹಿತವು ನಿರ್ಲಕ್ಷಿಸಲ್ಪಡುತ್ತದೆ. ಟೀಕಾಚಾರ್ಯರೆಂದು ಹೆಸರಾದ ಜಯತೀರ್ಥ ಮಹಾಮುನಿಗಳ ಜೀವನವನ್ನು ಚಿತ್ರಿಸುವ ಈ ಕೃತಿಯು ಬಹು ಮೌಲಿಕವಾದುದು.

**29.8.1992** ಶ್ರೀ ಮುನಿಕೃಷ್ಣ
ಹುಬ್ಬಳ್ಳಿ ಧಾರವಾಡ ಜಿಲ್ಲಾ ಪೋಲೀಸ್ ಅಧಿಕಾರಿಗಳು

ಹಿಂದಿನ ಜನ್ಮದ ಸಂಸ್ಕಾರದ ಫಲವೆಂದು ತೋರಿಸಿಕೊಟ್ಟ ವ್ಯಕ್ತಿ ಎಷ್ಟೇ ದೊಡ್ಡವನಾಗಿರಲಿ, ಸಾಕ್ಷಾತ್ ಭಗವಂತನ ಸಕಲ ಸಂಪರ್ಕವನ್ನು ಹೊಂದಿರಲಿ, ಅದರಿಂದ ಆತನಿಗೆ ತನ್ನ ಕರ್ಮಫಲ ಅನುಭವಿಸುವುದು ತಪ್ಪಿದ್ದಲ್ಲ ಎಂಬ ಈ ಅಂಶವನ್ನು ಧನಂಜಯನು ಪಶುಯೋನಿಯಲ್ಲಿ ಜನಿಸುವುದು ತಪ್ಪಲಿಲ್ಲ.

ಜಯತೀರ್ಥರ ಜೀವನ ಚರಿತ್ರೆಯಲ್ಲಿ ಅವರ ತ್ಯಾಗ, ಇಂದ್ರಿಯ ನಿಗ್ರಹ, ಅಸಾಮಾನ್ಯ ಪಾಂಡಿತ್ಯಗಳಿದ್ದರೂ ಅಹಂಕಾರರಹಿತ ಮನೋವೃತ್ತಿ ಇಲ್ಲಿ ಎದ್ದು ಕಾಣುತ್ತದೆ. ಈ ಗ್ರಂಥದಲ್ಲಿ ಅವರ ಸಮಕಾಲೀನ ರಾಜಕೀಯ, ಸಾಮಾಜಿಕ ಪರಿಸರದೊಂದಿಗೆ ಅವುಗಳನ್ನು ಸ್ಫುಟವಾಗಿ ಮೂಡಿಸುವಂತೆ ಮಾಡಿದ ಪ್ರಯತ್ನಗಳು ಶ್ಲಾಘನೀಯ. ನೈತಿಕ ಅಧಃಪತನವನ್ನು ತೊಡೆದು ಹಾಕುವಂತಹ ವಾತಾವರಣ ನಿರ್ಮಿಸಲು ಧನಂಜಯ ಕೃತಿಯು ಕಾರಣವಾಗಲಿ.

ಕ್ಯಾಂಪ್ - ಬೆಂಗಳೂರು ರಾವ್ ಬಹದ್ದೂರ್
5.4.1982 (ಗ್ರಾಮಾಯಣ ಗ್ರಂಥದ ಕರ್ತೃಗಳು)

## ಶ್ರೀ ಆದ್ಯ ರಾಮಾಚಾರ್ಯರು ಸಲ್ಲಿಸಿದ ಸೇವಾ ಸಂಸ್ಥೆಗ

1. ಅಖಿಲ ಭಾರತ ಮಾಧ್ವ ಮಹಾಮಂಡಲ ಬೆಂಗಳೂರಿನ ವಿದ್ಯಾಪೀಠದ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ 5
2. ಬೆಂಗಳೂರಿನ ದೊಡ್ಡ ಬಸವಣ್ಣ ದೇವಸ್ಥಾನದ ಸಂಚಾಲಕರಾಗಿ 5
3. ಕಾರಂಜಿ ಆಂಜನೇಯಸ್ವಾಮಿ ದೇವಸ್ಥಾನದ ಸಂಚಾಲಕರಾಗಿ 3
4. ತಿರುಮಲೆಯಲ್ಲಿಯ ಕರ್ನಾಟಕ ಛತ್ರದ ಸದಸ್ಯನಾಗಿ 3
5. ತಿರುಮಲೈ ತಿರುಪತಿ ದೇವಸ್ಥಾನದ ಪ್ರಾಚೀನ ಗ್ರಂಥಗಳ ಮುದ್ರಣಕ್ಕೆ ಅನುದಾನ ಸಮಿತಿಯ ಸದಸ್ಯನಾಗಿ 6
6. ತಿರುಮಲೈ ತಿರುಪತಿ ದಾಸಸಾಹಿತ್ಯ ಪ್ರಾಜೆಕ್ಟ್ ಸದಸ್ಯತ್ವ 8
7. ಬಿ. ಕೌಜಲಗಿ ಹನುಮಂತರಾಯರ ಶತಮಾನೋತ್ಸವ ಸಮಿತಿಯ ಸಹಕಾರ್ಯದರ್ಶಿಯಾಗಿ ಖಾದಿ ಕಾರ್ಯಕರ್ತರಿಗಾಗಿ ಹಣ ಸಂಗ್ರಹ
8. ಮಂಗಳವೇಡೆ ಶ್ರೀನಿವಾಸರಾಯರ ಶತಮಾನೋತ್ಸವದಲ್ಲಿ ಸಹಕಾರ್ಯದರ್ಶಿ
9. ಮೈಸೂರು ಮಹಾರಾಜ ಕಾಲೇಜಿನ ಆಗಮ ಪರೀಕ್ಷಾ ವಿಭಾಗದ ಸಲಹಾ ಸಮಿತಿಯ ಸದಸ್ಯನಾಗಿ 8
10. ಮಲ್ಲೇಶ್ವರದಲ್ಲಿರುವ ಶ್ರೀ ಆಂಜನೇಯ ಸ್ವಾಮಿ ಹಾಗೂ ಶ್ರೀ ರಾಘವೇಂದ್ರ ಸ್ವಾಮಿ ದೇವಾಲಯದ ಸಂಚಾಲಕರಾಗಿ, ಧರ್ಮದರ್ಶಿಯಾಗಿ. 5

ರಾಜಕೀಯ ಜೀವನ

1. ಅಖಿಲ ಕರ್ನಾಟಕ ಗಡಿನಾಡು ಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿ ಸಲ್ಲಿಸಿದ ಸೇವೆ.
2. ಸದಾಶಿವನಗರದಲ್ಲಿ ನಡೆದ ಅ.ಭಾ. ಕಾ. ಸಭೆಯಲ್ಲಿ ಸಹಕಾರ್ಯದರ್ಶಿಯಾಗಿ ಸಲ್ಲಿಸಿದ ಸೇವೆ.
3. ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಹಕಾರ್ಯದರ್ಶಿಯಾಗಿ ಸಲ್ಲಿಸಿದ ಸೇವ
4. ಕರ್ನಾಟಕ ಸಾಹಿತ್ಯ ಅಕಾಡಮಿಯ ಸದಸ್ಯನಾಗಿ ಸಲ್ಲಿಸಿದ ಸೇವೆ.
5. ಹಂಪಿಯಲ್ಲಿರುವ ಯಂತ್ರೋದ್ಧಾರ ದೇವಾಲಯದ ಜೀರ್ಣೋದ್ಧಾರದ ಸೇವೆ.

***



ಪ್ರಾಚೀನ ಭಾರತದ ಸಾಹಿತ್ಯ ಸಂಸ್ಕೃತಿ, ಜನಜೀವನ ಇವುಗಳನ್ನು ಕುರಿತು ಅನೇಕ ಪತ್ರಿಕೆಗಳಲ್ಲಿ ಪ್ರಕಟಗೊಂಡ ಆದ್ಯರಾಮಾಚಾರ್ಯರ ಕೃತಿಗಳು ಸಾಹಿತ್ಯಾಭ್ಯಸಿಗಳಿಗೆ ಸಂಜೀವನಿಯಂತಿವೆ. ಅಭ್ಯಾಸಿಗರ ಮನವನ್ನು ತಿಳಿಗೊಳಿಸಬಲ್ಲ ಸಾಹಿತ್ಯವು ಇಲ್ಲಿದೆ ಇದೊಂದು ಅಪರೂಪದ ಕೃತಿಯಾಗಿದೆ.

ಸನಾತನಶ್ರೀ